# ಜಗನ್ಮೋಹಿನಿ

(ಐತಿಹಾಸಿಕ ಕಾದಂಬರಿ)

ಶ್ರೀನಿವಾಸರಾವ್, ಕೊರಟಿ



ಪ್ರಕಾಶಕರು :
ವಿಶಾಲ ಸಾಹಿತ್ಯ ಪ್ರಕಾಶನ
ನೂರಡಿರಸ್ತೆ : : ಮೈಸೂರು

ಪ್ರ ಥ ಮ ಮು ದ್ರ ಣ
ಮನ್ಮಥನಾಮ ಸಂವತ್ಸರದ ಆಶ್ವಯುಜ ಶುದ್ಧ ದಶಮಿ
೨೬-೧೦-೧೯೫೫



ಮುಖಚಿತ್ರ
ಎಸ್. ಎಲ್. ನಾರಾಯಣ್

ಮುಖಚಿತ್ರ ಮುದ್ರಣ
ಇಂಡಿಯಾ ಪ್ರೆಸ್



ಪಡಿಯಚ್ಚು
ಪ್ರಸಾದ್ ಪ್ರೋಸೆಸ್ ಲಿಮಿಟೆಡ್, ಮದ್ರಾಸ್

ಬೆಲೆ ೧-೮-೦

ಮುದ್ರಕರು :
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್
ಮೈಸೂರು.

# ಅರಿಕೆ

"ಜಗನ್ಮೋಹಿನಿ" ನನ್ನ ಎರಡನೆಯ ಐತಿಹಾಸಿಕ ಕಾದಂಬರಿ. "ರಾಜದ್ರೋಹಿ"ಯಲ್ಲಿ ಕೃಷ್ಣದೇವರಾಯನ ಕೊನೆಯದಿನಗಳ ಕಥೆಯನ್ನು ಚಿತ್ರಿಸಿದ್ದರೆ, ಈ ಕಾದಂಬರಿಯಲ್ಲಿ ರಾಯನ ಯೌವನದ ದಿನಗಳ ಕಥೆಯನ್ನು ಅರ್ಥಾತ್ ಉತ್ಕಲ ವಿಜಯದ ಕಥೆಯನ್ನು ಕೊಟ್ಟಿದ್ದೇನೆ. ಇದೇ ವಸ್ತುವನ್ನು ಕುರಿತು ಒಂದು ಐತಿಹಾಸಿಕ ಕಾದಂಬರಿ ಈ ಮೊದಲೇ ಕನ್ನಡದಲ್ಲಿ ಬಂದಿದ್ದರೂ ನನ್ನ ಕಾದಂಬರಿ ಆ ಕಾದಂಬರಿಯಿಂದ ಮೂಲ ಭಿನ್ನವಾಗಿದೆ. ಅದು ಸುಖಾಂತವಾಗಿದ್ದರೆ, ಇದು ದುಃಖಾಂತವಾಗಿದೆ. ಈ ಮಾರ್ಪಾಡಿಗೆ ನನಗೆ ದೊರೆತ ಐತಿಹಾಸಿಕ ಸಂಗತಿಗಳೇ ಮುಖ್ಯ ಆಧಾರ.

"ಜಗನ್ಮೋಹಿನಿಯು" ಕಡೇತನಕ ಕೃಷ್ಣದೇವರಾಯನು ಪರಿತ್ಯಕ್ತ ರಾಣಿಯಾಗಿ, ಇಂದಿನ ಕಡಪ ಜಿಲ್ಲೆಯ ಕುಂಭಂನಲ್ಲಿ ಅಸುಖಿಯಾಗಿ ಇದ್ದಳೆನ್ನಲು 'ತುಕ್ಕಪಂಚಕಂ' ಎನ್ನುವ ಶ್ಲೋಕ ಪಂಚಕವು ಆಧಾರವಾಗಿದೆ. ಉಳಿದ ಐತಿಹಾಸಿಕ ಸಂಗತಿಗಳನ್ನು ನನ್ನೀಜನ ಕ್ರಾನಿಕಲ್ಸ್ ದಿಂದಲೂ, ರಾಯವಾಚಕಂ, ಚಿಂತಕುಂಟ ಕೈಫಿತ್ತು, ಮೈಸೂರುಗೇಜೆಟೀರ್ ಮೊದಲಾದ ಗ್ರಂಥಗಳಿಂದ ತೆಗೆದುಕೊಂಡಿದ್ದೇನೆ. ಐತಿಹಾಸಿಕ ಘಟನೆಗಳನ್ನು, ಪಾತ್ರಗಳನ್ನು ಯಾವ ಬದಲಾವಣೆಯಿಲ್ಲದೆ ಕಾದಂಬರಿಗೆ ಅಳವಡಿಸುವ ಕಾರ್ಯ ಎಷ್ಟು ತೊಡಕಿನದೆಂಬುದು ಈ ಕಾದಂಬರಿಯನ್ನು ಬರೆಯುವಾಗ ನನಗೆ ಅರಿವಾಗಿದೆ. ಬರಡು ಸಾಹಿತ್ಯದ ಘಟನೆಗಳನ್ನು ಸಾಹಿತ್ಯ ರಸಮಯ ಚಿತ್ರವನ್ನಾಗಿ ಮಾಡಲು ಪ್ರತಿಭಾಶಾಲಿಯಾದ ಕಲಾವಿದನಿಂದ ಮಾತ್ರವೇ ಸಾಧ್ಯ. ನನ್ನ ಈ ಕೃತಿ ಈ ಕಾರ್ಯದಲ್ಲಿ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆಯೋ ಓದುಗರೇ ಪತ್ರಮೂಲಕ ತಿಳಿಸಬೇಕು.

ಈ ಕೃತಿ ಇಷ್ಟುಬೇಗ ಬೆಳಕಿಗೆಬರಲು ವಿಶಾಲ ಸಾಹಿತ್ಯ ಪ್ರಕಾಶನದ ಗೆಳೆಯರಾದ ಶ್ರೀ ಜಿ. ನಾ. ಮೂರ್ತಿ ಅವರ ವಿಶ್ವಾಸ, ಆದರ, ಅಭಿಮಾನಗಳೇ ಕಾರಣ. ಅವರಿಗೆ ನಾನು ಋಣಿಯಾಗಿದ್ದೇನೆ. ಈ ಕಾದಂಬರಿ

ಯನ್ನು ಬರೆಯುವಾಗ ಉಪಯುಕ್ತ ಸಲಹೆಗಳನ್ನಿತ್ತ ಗೆಳೆಯ ಮೋ. ಗೋ. ರಾಮಕೃಷ್ಣ ಅಡಿಗ ಅವರಿಗೂ, ಇದನ್ನು ಅಂದವಾಗಿ ಮುದ್ರಿಸಿ ಕೊಟ್ಟ, ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ ಮಾಲೀಕರಾದ ಶ್ರೀ ವೈ. ಆರ್. ರಂಗರಾವ್ ರವರಿಗೂ ವಂದನೆಗಳು.

ತಾ|| ೧೨-೧೦-೧೯೫೫

**ಶ್ರೀನಿವಾಸರಾವ್ ಕೊರಟಿ**

೧೦೪ ರಾಘವೇಂದ್ರ ಕಾಲೋನಿ,
೫ನೇ ರಸ್ತೆ, ಚಾಮರಾಜಪೇಟೆ
ಬೆಂಗಳೂರು.

# ಪ್ರಕಾಶಕರ ನುಡಿ

ಕನ್ನಡ ಸಾಹಿತ್ಯದ ಚಿರ ನೂತನ ಕಲೋದ್ಯಾನದಲ್ಲಿ ಅರಳಿರುವ ಪುಷ್ಪ "ಜಗನ್ಮೋಹಿನಿ." ಇದು ವಿಕಾಸವಾಗಿ ಜನತೆಯ ಹೃನ್ಮನಗಳನ್ನು ತಣಿಸಲೆಂಬ ಸದುದ್ದೇಶದಿಂದಲೂ, ಕನ್ನಡಮ್ಮನನ್ನು ಸುಗಂಧಪುಷ್ಪದಿಂದ ಅರ್ಚಿಸುವ ಪೂಜ್ಯಭಾವನೆಯಿಂದ ಹೊರಬಂದಿದೆ. ಇದು ವಿಕಾಸವಾಗಲು ಗಾಳಿ, ಬೆಳಕು ಇತ್ಯಾದಿ ಅತ್ಯಾವಶ್ಯಕ ಸಾಮಗ್ರಿಗಳನ್ನು ಸರ್ವವಿಧ ದಿಂದಲೂ ಎರೆದು ಬೆಳೆಸಿರುವ ಸರ್ವರಿಗೂ ಧನ್ಯವಾದಗಳನ್ನು ಅರ್ಪಿಸು ತ್ತೇವೆ—ಕೃತಿಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ ಸಹಕರಿಸಿ ರೆಂದೂ ಬೇಡುತ್ತೇವೆ.

ನಮ್ಮ ನಂಬಿಕೆಗೆ ಬೆಂಬಲ ನೀಡುವುದೂ, ನಮ್ಮೊಡನೆ ಒಕ್ಕೊರಲಿ ನಿಂದ "ಸರಿ, ಹೌದು" ಎಂದು ಹೇಳುವುದೂ ಸಹೃದಯ ಓದುಗರ ಪಾಲಿಗೆ ಸೇರಿದ್ದು.

ಇಂತು,
ವಿಶ್ವಾಸ ಮಮತೆಗಳೊಡನೆ
—ಪ್ರಕಾಶಕರು

# ಅರ್ಪಣೆ

ಪಂಪಾಯಾತ್ರೆಯನ್ನು ಚಿರಸ್ಮರಣೀಯವಾಗಿ ಮಾಡಿದ ಗೆಳೆಯರಿಗೆ

## ೧

**ಮಳೆ** ಕುಂಭದ್ರೋಣವಾಗಿ ಸುರಿಯುತ್ತಿತ್ತು. ತಡವಾಗಿ ಆರಂಭವಾದ ಮಳೆ ಜನರ ಮೇಲೆ ಸೇಡು ತೀರಿಸಿಕೊಳ್ಳುವಂತೆ ಒಂದೇ ಸಮನೆ ಸುರಿಯುತ್ತಿತ್ತು. ದಿನವಿಡೀ ಆಗಸದಲ್ಲಿ ದಟ್ಟವಾದ ಕಾರ್ಮೋಡಗಳು, ಕೆರಳಿದ ಮದಗಜಗಳಂತೆ ಬೊಬ್ಬೆ ಇಡುತ್ತಿದ್ದವು. ಒಮ್ಮೆ ಭಯಂಕರ ಗುಡುಗು, ಮತ್ತೊಮ್ಮೆ ಭಯಂಕರ ಸಿಡಿಲು. ಈ ಗುಡುಗು ಸಿಡಿಲುಗಳ ತಾಂಡವ ಲಾಸ್ಯಕ್ಕೆ ಬಾನು ಬಿರಿದಂತೆ ಭಾಸವಾಗುತ್ತಿತ್ತು. ಬಿಡುವಿಲ್ಲದ ಮಳೆ ನೆಲ ಮುಗಿಲುಗಳಿಗೆ ಜಲ ಸೇತುವೆಯನ್ನು ರಚಿಸಿತ್ತು. ದಿನಕರನು ಮುಗಿಲಿನ ಆರ್ಭಟಕ್ಕೆ ಹೆದರಿ ತಲೆ ತಪ್ಪಿಸಿಕೊಂಡವನಂತೆ ಮೂರುದಿನವಾದರೂ ಮೂಡಿರಲಿಲ್ಲ. ಎಲ್ಲೆಲ್ಲೂ ಮಬ್ಬುಗತ್ತಲು. ಎಲ್ಲೆಲ್ಲೂ ನೀರಿನಪ್ರವಾಹ ! ನೀರು ರಭಸದಿಂದ ಎಲ್ಲೆಡೆಗೂ ನುಗ್ಗಿ ಪ್ರಳಯದ ಕಲ್ಪನೆಯನ್ನು ತರುತ್ತಿತ್ತು.

ಸಿಂಹಾದ್ರಿಯ ಬಳಿ ಬೀಡುಬಿಟ್ಟಿದ್ದ ಸಾಮ್ರಾಟ್ ಕೃಷ್ಣದೇವರಾಯನ ಸೈನಿಕ ಶಿಬಿರಕ್ಕೆ ಈ ಮಳೆಯು ಉತ್ಪಾತದಿಂದ ಆದ ಕಷ್ಟ ನಷ್ಟಗಳು ಹೇಳಲಸದಳವಲ್ಲ. ವರ್ಷಕಾಲವನ್ನು ಮುಗಿಸಿಕೊಂಡು ಮುಂದಿನ ದಂಡಯಾತ್ರೆ ಕೈಗೊಳ್ಳಲು ಸಿಂಹಾದ್ರಿಯ ಬೆಟ್ಟದ ತಪ್ಪಲಿನಲ್ಲಿ ಬೀಡು ಬಿಟ್ಟಿದ್ದ ರಾಯನ ಸೈನ್ಯ ವರುಣದೇವನ ಆಗ್ರಹಕ್ಕೆ ತುತ್ತಾಗಿ ಅನೇಕ ತೊಂದರೆಗಳನ್ನು ಅನುಭವಿಸಬೇಕಾಯಿತು. ಉತ್ಕಲದ ಗಜಪತಿಯ ಅಜೇಯವಾದ ಸೈನ್ಯಕ್ಕೆ ಹೆದರದೆ ಇದ್ದ ಅವರು, ವರುಣನ ಧಾಳಿಗೆ ತತ್ತರಿಸಿ ಹೋಗಿದ್ದರು. ಈ ಧಾರಾವೃಷ್ಟಿಯ ಧಾಳಿಯಿಂದ ಒಮ್ಮೆ ಪಾರಾಗಿ

ಬದುಕಿಕೊಂಡರೆ ಸಾಕೆನಿಸಿತ್ತು ಅವರಿಗೆ. ಮಳೆಗಾಲ, ಚೆನ್ನಾಗಿ ತಿಂದುಂಡು ಕುಡಿದು, ಕಂಬಳಿಗಳಲ್ಲಿ ಮಲೆತು ಮಲಗುವ ಅಪೂರ್ವ ಸುಸಂಧಿ ಎಂದು ಭಾವಿಸಿದ್ದ ಸೈನಿಕರಿಗೆ, ಮಳೆಗಾಲ ಭಯಂಕರ ಪಿಡುಗಿನಂತೆ ಬಂದೆರಗುತ್ತಿತ್ತು. ಸತತವಾಗಿ ಸುರಿದ ಮಳೆಯಿಂದ ಅವರ ಶಿಬಿರಗಳು ನೀರಿನ ಹೊಂಡಗಳಾಗಿ ಮಾರ್ಪಟ್ಟಿದ್ದವು. ಮಲಗಿಕೊಳ್ಳಲು ತಾವು ಹಾಗಿರಲಿ, ನೆನೆಯದೆ ನಿಂತುಕೊಳ್ಳಲು ಅಂಗೈಯಗಲದ ಸ್ಥಳವಿರಲಿಲ್ಲ. ಬಿಡಾರದ ಡೇರೆಯ ಬಟ್ಟೆಗಳು ಸಮುದ್ರದ ಮೇಲೆ ತೇಲುವ ಹಾಯಿ ಹಡಗುಗಳಂತೆ ಕಾಣುತ್ತಿದ್ದವು. ದಾಸ್ತಾನು ಮಾಡಿದ್ದ ಶಸ್ತ್ರಾಸ್ತ್ರಗಳೂ, ಆಹಾರ ವಸ್ತುಗಳೂ ನೀರಿನಿಂದ ತೊಯ್ದುಹೋಗಿದ್ದವು. ಅವುಗಳು ನೀರಿನ ಪ್ರವಾಹದಲ್ಲಿ ಕೊಚ್ಚಿಹೋಗದೆ ಇದ್ದುದು ಅವರ ಸುದೈವ.

ಸೈನಿಕರಿಗೆ ಎಡೆಬಿಡದೆ ಜಡಿಯುತ್ತಿದ್ದ ಮಳೆಯ ಮಹಾಪೂರವನ್ನು ಕಂಡು ತಾವು ನೀರಿನಲ್ಲೇ ಜಲಸಮಾಧಿಯಾಗುತ್ತೇವೆಂಬ ಹೆದರಿಕೆಯುಂಟಾಗದೆ ಇರಲಿಲ್ಲ. ತಮ್ಮನ್ನು ಈ ವಿಪತ್ತಿನಿಂದ ಪಾರುಮಾಡಬೇಕೆಂದು ಎಲ್ಲರೂ ಸಿಂಹಾಚಲದ ಶ್ರೀ ನರಸಿಂಹಸ್ವಾಮಿಯನ್ನು ಪ್ರಾರ್ಥಿಸುವವರೇ. ನೊಂದ ಹೃದಯಗಳಿಂದ ಬಂದ ಮೂಕ ಪ್ರಾರ್ಥನೆ ಸ್ವಾಮಿಗೆ ವೇದ್ಯವಾಯಿತೇನೊ, ಮೂರು ದಿನಗಳಿಂದ ಹೊಡೆಯುತ್ತಿದ್ದ ಜಡಿಮಳೆ ಒಮ್ಮೆಲೆ ನಿಂತಿತು.

ಸೈನಿಕರು, ಬಂದ ಕುತ್ತದಿಂದ ತಾವು ಪಾರಾದೆವೆಂದು ತಿಳಿದು ಹರ್ಷಿಸಿದರು.

ಮರುದಿನ ಪೂರ್ವದಿಗಂತದಲ್ಲಿ ಸೂರ್ಯೋದಯವಾದಾಗ ಸೈನಿಕರ ಮುಖದಲ್ಲೂ ಉತ್ಸಾಹದ ಸೂರ್ಯನು ಮೂಡಿದ್ದನು. ನಿರಾಶೆಯ ಮಡುವಿನಲ್ಲಿ ಬಿದ್ದಿದ್ದ ಸೈನಿಕರಿಗೆ ಈಗ ಜೀವಕಳೆ ಬಂದಂತಾಯಿತು. ಅವರು ತಮ್ಮಮೇಲೆ ಕೃಪೆಮಾಡಿದ ಸಿಂಹಾದ್ರಿಯ ನರಸಿಂಹಸ್ವಾಮಿಯನ್ನು ಮನದಲ್ಲೇ ವಂದಿಸಿದರು.

ಅನಿರೀಕ್ಷಿತವಾಗಿ ಒದಗಿದ್ದ, ವರುಣದೇವನ ಆಕ್ರೋಶದಿಂದ ಪಾರಾಗುವ ದಾರಿಕಾಣದೆ ತೊಳಲುತ್ತಿದ್ದ ಕೃಷ್ಣದೇವರಾಯನ ಕನಸಿನಲ್ಲಿ ಸಿಂಹಾ

ದ್ರಿಯ ನರಸಿಂಹಸ್ವಾಮಿಯು ಕಾಣಿಸಿಕೊಂಡು ತನ್ನನ್ನು ಅನಾದರಣೆ ಮಾಡಿದ ರಾಯನನ್ನು ಶಿಕ್ಷಿಸುವ ಸಲುವಾಗಿ ವರುಣನನ್ನು ಕಳುಹಿರುವುದಾಗಿ ತಿಳಿಸಿದನಂತೆ. ತನ್ನನ್ನು ಅನನ್ಯ ಭಕ್ತಿಯಿಂದ ಸೇವಿಸಿದರೆ ರಾಯನ ಸಕಲ ಕಷ್ಟಗಳನ್ನೂ ಪರಿಹರಿಸುವುದಾಗಿ ಭಕ್ತವರದನಾದ ಸ್ವಾಮಿಯು ಅಭಯನೀಡಿದನಂತೆ.

ಆ ರಾತ್ರಿ ರಾಯನಿಗೆ ಈ ಸ್ವಪ್ನವೃತ್ತಾಂತದಿಂದಾಗಿ ಮತ್ತೆ ನಿದ್ರೆ ಬರಲಿಲ್ಲ. ಮರುದಿನ, ರಾತ್ರಿ ಕನಸಿನಲ್ಲಿ ಕಂಡ ದಿವ್ಯ ದರ್ಶನಕ್ಕೆ ತಕ್ಕಂತೆ ಪೂರ್ವದಿಗಂತದಲ್ಲಿ ಸೂರ್ಯೋದಯವಾಗಿತ್ತು. ರಾಯನಿಗೆ ತಾನು ಸ್ವಪ್ನಸ್ಥಿತಿಯಲ್ಲಿ ಕಂಡ ದರ್ಶನ, ಸತ್ಯಸ್ಥಿತಿಯಲ್ಲಿ ಕಾಣುವಂತೆ ಆಯಿತು. ರಾಯನು ಕೂಡಲೇ ತಿಮ್ಮರಸನನ್ನು ಬರಮಾಡಿಕೊಂಡು ಅವನಿಗೆ ಸ್ವಪ್ನವೃತ್ತಾಂತವನ್ನು ಅರುಹಿ ಸಿಂಹಾಚಲದ ನರಸಿಂಹಸ್ವಾಮಿಯ ಮಹಿಮೆಯನ್ನು ಕೊಂಡಾಡಿದನು.

ತಮ್ಮನ್ನು ಅನುಗ್ರಹಿಸಿ ಕಾಪಾಡಿದ ಸ್ವಾಮಿಗೆ ಉಚಿತ ರೀತಿಯಲ್ಲಿ ಸೇವೆ ಸಲ್ಲಿಸಲು ರಾಯನು ನಿರ್ಧರಿಸಿದನು. ತನ್ನ ಭಕ್ತಿಯ ದ್ಯೋತಕವಾಗಿ, ಸಾಮ್ರಾಟರ ಘನತೆಗೆ ತಕ್ಕಂತೆ, ದಿವ್ಯವೂ, ಭವ್ಯವೂ ಆದ ಸುಂದರವಾದ ದೇವಾಲಯವನ್ನು ಕಟ್ಟಿಸಿಕೊಟ್ಟು ಆ ಮೂಲಕ ಸ್ವಾಮಿಯನ್ನು ಸೇವಿಸಬೇಕೆಂದು ರಾಯನಿಗೆ ಇಚ್ಛೆಯುಂಟಾಯಿತು. ಕೂಡಲೇ ತನ್ನ ಆಸ್ಥಾನದ ಶ್ರೇಷ್ಠ ರೂವಾರಿಗಳನ್ನೂ, ಶಿಲ್ಪಿಗಳನ್ನೂ, ಕಲಾವಿದರನ್ನೂ ಈ ಕಾರ್ಯಕ್ಕೆ ನಿಯೋಜಿಸಿದನು.

ದೇವಾಲಯದ ನಿರ್ಮಾಣದ ಕಾರ್ಯ ಭರದಿಂದ ಆರಂಭವಾಯಿತು.

ಸಿಂಹಾದ್ರಿಯು-ಸಿಂಹಾಚಲ, ಪ್ರಹ್ಲಾದನ ಬೆಟ್ಟ ಎನ್ನುವ ಅಭಿದಾನದಿಂದ ಪುರಾಣೇತಿಹಾಸಕಾಲದಿಂದಲೂ ಪ್ರಸಿದ್ಧವಾಗಿದ್ದ ಒಂದು ಪುಣ್ಯಕ್ಷೇತ್ರ. ಹಿಂದೆ ಕೃತಯುಗದಲ್ಲಿ ದುಷ್ಟಶಿಕ್ಷಣ, ಶಿಷ್ಟಪರಿಪಾಲನಾರ್ಥವಾಗಿ ಅವತರಿಸಿದ ಶ್ರೀಹರಿಯು, ಕಂಭದಲ್ಲಿ ನರಸಿಂಹನಾಗಿ ಮೈತೋರಿ ಹಿರಣ್ಯಕಶಪುವನ್ನು ಕೊಂದು, ಭಕ್ತಶಿರೋಮಣಿಯಾದ ಪ್ರಹ್ಲಾದನನ್ನು ಉದ್ಧರಿಸಿದ ಸ್ಥಳವೇ ಸಿಂಹಾದ್ರಿ. ಇಲ್ಲಿ ಉದ್ಭವವಾದ ಸ್ವಾಮಿಗೆ ಯಾರೋ ಒಂದು ಸಣ್ಣ ದೇಗುಲವನ್ನು ಕಟ್ಟಿಸಿಕೊಟ್ಟಿದ್ದರು. ಅದನ್ನು ವಿಸ್ತರಿಸಿ,

ವಿಶಾಲವಾದ ನವರಂಗ, ಮುಖಮಂಟಪ, ಗೋಪುರಗಳಿಂದ ಶೃಂಗರಿಸಲು ರಾಯನು ನಿರ್ಧರಿಸಿದ್ದನು.

ನೋಡುನೋಡುತ್ತಿದ್ದಂತೆ ದೇವಾಲಯದ ರಚನೆ ಬೃಹದಾಕಾರವಾಗಿ ಮೈತಾಳಿನಿಂತಿತು. ರೂವಾರಿಗಳೂ, ಶಿಲ್ಪಿಗಳೂ, ಇನ್ನಿತರ ಕೆಲಸಗಾರರೂ ಹಗಲು, ರಾತ್ರಿ ಎನ್ನದೆ ಕೆಲಸಮಾಡಿ ಅತ್ಯಲ್ಪಕಾಲದಲ್ಲಿ ರಾಯನ ದಿವ್ಯವಾದ ಕನಸನ್ನು ನನಸುಮಾಡಿದ್ದರು. ಈಗ ದೇವಾಲಯದ ಕಟ್ಟಡದ ಕೆಲಸವೆಲ್ಲ ಮುಗಿದು ಸುಣ್ಣಬಣ್ಣಗಳ ಕಾರಣೆ ಕೆಲಸವಷ್ಟೇ ಉಳಿಯಿತು.

ಶುಭದಿನದಲ್ಲಿ, ಮಂಗಳ ಮುಹೂರ್ತದಲ್ಲಿ ಪ್ರಾಣಪ್ರತಿಷ್ಠಾಪನಾ ಮಹೋತ್ಸವವನ್ನು ನೆರವೇರಿಸಿ, ಸ್ವಾಮಿಯ ಅನುಗ್ರಹವನ್ನು ಪಡೆದು ಪ್ರತಾಪರುದ್ರ ಗಜಪತಿಯ ಮೇಲೆ ದಂಡೆತ್ತಿ ಹೊರಡುವುದೆಂದು ರಾಯನು ನಿರ್ಧರಿಸಿದನು. ಅಂತಲೇ ಉತ್ಸವಕ್ಕೆ ಬೇಕಾಗುವ ಎಲ್ಲ ಸಿದ್ಧತೆಗಳನ್ನೂ ಭರದಿಂದ ಮಾಡಲು ಆಜ್ಞೆಯಿತ್ತನು.

ಪ್ರಾಣಪ್ರತಿಷ್ಠಾಪನಾಮಹೋತ್ಸವಕ್ಕೆ ಇನ್ನೆಲ್ಲಾ ಕೆಲವೇ ದಿನಗಳು. ಇದು ಮುಗಿಯಿತೆಂದರೆ ಸಿಂಹಾದ್ರಿಯಿಂದ ರಾಯನು ತಳ ಕೀಳುವವನೇ. ಅಂತಲೇ ರಾಯನು ಪೊಟ್ಟನೂರಿನ ದಂಡಯಾತ್ರೆಗೆ ಈಗಿನಿಂದ ಸಿದ್ಧತೆಗಳನ್ನು ಮಾಡಿಕೊಳ್ಳಲು ಆರಂಭಿಸಿದ್ದನು.

ಇಂತಿರುವಲ್ಲಿ ರಾಯನ ಪ್ರಧಾನ ಅಮಾತ್ಯನೂ, ಮಹಾದಂಡನಾಯಕನೂ ಆದ ಸಾಳ್ವ ತಿಮ್ಮರಸನು ಮಾಡಿದ ಒಂದು ಸಲಹೆ ರಾಯನ ಎಲ್ಲ ಸಮರೋತ್ಸಾಹಕ್ಕೂ ತಣ್ಣೀರು ಸುರಿದಂತೆ ಮಾಡಿತು.

ಅದು ಗಜಪತಿಯೊಂದಿಗೆ ಮತ್ತೊಮ್ಮೆ ಸಂಧಾನಕ್ಕೇಳಿಸಬಾರದೇಕೆ ಎನ್ನುವ ಸಲಹೆ.

ಈ ಮಾತು ಕೇಳಿ ಕೃಷ್ಣದೇವರಾಯನು ಬೆರಗಾಗಿ ನಿಂತನು. ತಿಮ್ಮರಸನಿಂದ ಈ ಮಾತು ಬರುವುದೆಂದು ರಾಯನು ನಿರೀಕ್ಷಿಸಿಯೇ ಇರಲಿಲ್ಲ. ಅಂತಲೇ ಹೇಳಿದ:

"ಅಪ್ಪಾಜಿ, ನೀವು ತಮಾಷೆಗೆ ಹೀಗೆ ಹೇಳುತ್ತಿಲ್ಲವಷ್ಟೇ?"

"ಇಲ್ಲ ಪ್ರಭು."

"ಹಾಗಾದರೆ ನೀವು ಉದ್ದಿಶ್ಯಪೂರ್ವಕವಾಗಿಯೇ ಈ ಸಂಧಾನದ ಮಾತು ಹೇಳುತ್ತಿದ್ದೀರಾ ?"

"ಹೌದು ಪ್ರಭು"

"ಅಪ್ಪಾಜಿ, ನಿಮ್ಮ ಮಾತು ಕೇಳಿ ನನಗೆ ಏನು ಹೇಳಬೇಕೆಂಬುದೇ ತಿಳಿಯದಾಗಿದೆ ! "

"ಏಕೆ ಪ್ರಭು ?"

"ನಾವು ಉತ್ಕಲದ ಬಹುಭಾಗವನ್ನು ಆಕ್ರಮಿಸಿಕೊಂಡಿರುವಾಗ ನಮ್ಮ ಹೆಸರು ಕೇಳಿದೊಡನೆಯೇ ಗಜಪತಿಯು ಗಡಗಡನೆ ನಡುಗಿ, ಯುದ್ಧ ಕೊಡಲು ಹೆದರಿ, ತಲೆ ತಪ್ಪಿಸಿಕೊಂಡು ತಿರುಗುತ್ತಿರುವಾಗ ಅವನ ಪತ್ನೀ ಪುತ್ರರು ನಮ್ಮ ವಶದಲ್ಲಿ ಕೃಪಾಭಿಕ್ಷೆ ಬೇಡುತ್ತಾ ಬಿದ್ದಿರುವಾಗ ನಾವು ಆ ಹೇಡಿ ಗಜಪತಿಯೊಂದಿಗೆ ಸಂಧಾನಕ್ಕೆ ಎಳೆಸುವುದೇ ? ಅದೂ ಯುದ್ಧಸನ್ನದ್ಧವಾಗಿರುವ, ವಿಜಯಮಾಲೆ ಬೀಳಲಿರುವ ಈ ಸಮಯದಲ್ಲಿ ?"

"ಹೌದು, ಪ್ರಭು. ಸಂಧಾನಕ್ಕೆ ಇದೇ ಸುಸಂಧಿ"

"ಏನು, ಸಂಧಾನಕ್ಕೆ ಇದೇ ಸುಸಂಧಿಯೆ ? ನಿಮ್ಮ ಮಾತು ಕೇಳಿ ನಗಬೇಕೋ ಅಳಬೇಕೊ, ತಿಳಿಯದಾಗಿದೆ. ಅಲ್ಲಾ ಅಪ್ಪಾಜಿ, ಶತ್ರು ಮೆತ್ತಗಾಗಿ ದಿಕ್ಕೆಟ್ಟಿರುವ ಸಮಯದಲ್ಲಿ ಅವನನ್ನು ಸದೆ ಬಡಿದು ಸೋಲಿಸುವುದನ್ನು ಬಿಟ್ಟು ಸಂಧಾನಕ್ಕೆ ಯಾರಾದರೂ ಎಳೆಸುವರೆ ? ನಿಮ್ಮ ವಿಚಾರದ ಕಣ್ಣಿಗೆ ಹೀಗೇಕೆ ಮಬ್ಬು ಕವಿಯಿತೋ ನನಗೆ ಆಶ್ಚರ್ಯವಾಗಿದೆ" ಎಂದು ಗಹಗಹಿಸಿ ನಕ್ಕನು ಕೃಷ್ಣದೇವರಾಯ.

"ಪ್ರಭುಗಳು ನನ್ನ ಮಾತನ್ನು ಉಪೇಕ್ಷೆ ಮಾಡಬಾರದು. ನಾನು ಚೆನ್ನಾಗಿ ಆಲೋಚಿಸಿಯೇ ಈ ಸಂಧಾನದ ಸಂಗತಿಯನ್ನು ಪ್ರಭುಗಳ ಗಮನಕ್ಕೆ ತಂದಿರುವುದು. ಶತ್ರು ಮೆತ್ತಗಾಗಿದ್ದಾನೆ, ದಿಟ. ಉತ್ಕಲದ ಬಹುಭಾಗ ನಮ್ಮ ವಶವಾಗಿದೆ, ದಿಟ. ಶತ್ರುವಿನ ಪತ್ನೀಪುತ್ರರು ನಮ್ಮ ಸೆರೆಯಲ್ಲಿದ್ದಾರೆ ನಿಜ. ಆದರೆ ನಮಗೆ ಈಗ ಬೇಕಾಗಿರುವುದು ಶತ್ರುದಮನನ ಜತೆಗೇ ಮಿತ್ರಲಾಭ. ನಮಗೆ ಸಾಮ್ರಾಜ್ಯದ ವಿಸ್ತರಣೆ ಮಾತ್ರವಲ್ಲದೆ, ಸಾಮ್ರಾಜ್ಯ ಕ್ಷೇಮ ಚಿಂತನೆಯಾಗಬೇಕು. ಗಜಪತಿಯಂತಹ

ಸಶಕ್ತ ಅರಸನನ್ನು ಮಿತ್ರರನ್ನಾಗಿ ಮಾಡಿಕೊಳ್ಳುವುದರಲ್ಲಿ ನಮಗೆ ಬಹಳ ಲಾಭವಿದೆ ಪ್ರಭು. ನಾವು ಮಿತ್ರತ್ವವನ್ನು, ಸ್ನೇಹಸೌಹಾರ್ದತೆಗಳನ್ನು ಯುದ್ಧದಿಂದ, ಬಲಪ್ರಯೋಗದಿಂದ ಎಂದಿಗೂ ಸಾಧಿಸಲು ಸಾಧ್ಯವಿಲ್ಲ. ಸ್ನೇಹಸೌಹಾರ್ದತೆಗಳು, ಪ್ರೀತಿ ವಿಶ್ವಾಸಗಳ ನಂದನದಲ್ಲಿ ಬೆಳೆಯುವ ಮಂದಾರಪುಷ್ಪವೇ ಹೊರತು, ಹಿಂಸೆಯ, ಸೇಡಿನ, ಹಗೆತನದ್ವೇಷಾ ಸೂಯೆಗಳ ಬರಡು ಭೂಮಿಯಲ್ಲಿ ಅರಳುವ ಹೂವಲ್ಲ. ಯುದ್ಧದಿಂದ ಸಾಧ್ಯವಾಗದೆ ಇರುವುದನ್ನು ನಾವು ಸಂಧಾನದಿಂದ ಸಾಧಿಸುವುದೇ ಶ್ರೇಯಸ್ಕರ, ಉತ್ತಮ ರಾಜನೀತಿ. ಅಂತಲೇ ಪ್ರಭುಗಳು, ಗಜಪತಿಗಳು ಹಿಂದೆ ಮಾಡಿರುವ ಅಪರಾಧಗಳನ್ನೆಲ್ಲಾ ಮರೆತು, ಅವರನ್ನು ಸರಿ ಸಮಾನರಂತೆ ಕಂಡು ಸ್ನೇಹ ಹಸ್ತವನ್ನು ನೀಡಬೇಕು. ಇದರಿಂದ ಎರಡು ರಾಷ್ಟ್ರಗಳಿಗೂ ಕಲ್ಯಾಣವಾಗುವುದು"

—ಎಂದು ಹೇಳಿದನು ತಿಮ್ಮರಸ ನಯವಿನಯದಲ್ಲಿ.

ಕೃಷ್ಣದೇವರಾಯನೂ ತಿಮ್ಮರಸನ ಗರಡಿಯಲ್ಲಿ ತಯಾರಾದ ರಾಜನೀತಿ ನಿಪುಣನೇ. ತಿಮ್ಮರಸನ ಅಭಿಪ್ರಾಯ ರಾಯನ ಮೇಲೆ ತಮ್ಮ ಪ್ರಭಾವವನ್ನು ಬೀರದೆ ಇರಲಿಲ್ಲ. ರಾಯನು ತಿಮ್ಮರಸನ ಮಾತನ್ನು ಕೂಲಂಕಶವಾಗಿ ವಿಚಾರಮಾಡಿ ನಿರ್ವಾಹವಿಲ್ಲವೆ ಸಂಧಾನಕ್ಕೆ ಸಮ್ಮತಿಸಿದನು.

ಅದರಂತೆ ಸಂಧಾನಕ್ಕಾಗಿ ತಿಮ್ಮರಸನ ಪುತ್ರನಾದ ಗೋವಿಂದರಾಜನನ್ನು ರಾಯಭಾರಿಯಾಗಿ ಪೊಟ್ಟನೂರಿನಲ್ಲಿ ಅಡಗಿದ್ದ ಪ್ರತಾಪರುದ್ರ ಗಜಪತಿಯ ಬಳಿಗೆ ಕಳುಹಿಸಲಾಯಿತು. ಈ ಸಂಧಾನ ಯಶಸ್ವಿಯಾದರೆ ಎರಡು ರಾಷ್ಟ್ರಗಳಿಗೂ ನಿರಂತರ ಸ್ನೇಹ ಬಾಂಧವ್ಯವೇರ್ಪಡುವುದು, ಶಾಂತಿನೆಮ್ಮದಿಗಳು ಉಂಟಾಗುವುದು. ಎರಡು ರಾಷ್ಟ್ರಗಳ ಕಲ್ಯಾಣ ಸಾಧಿಸುವುದು. ಸಂಧಾನ ವಿಫಲವಾದರೆ ಎರಡು ರಾಷ್ಟ್ರಗಳ ನಡುವೆ ಭಯಂಕರವಾದ ಹಗೆತನ, ದ್ವೇಷಗಳ ದಳ್ಳುರಿಯೇ ಎದ್ದು ಶಾಂತಿ ನೆಮ್ಮದಿಗಳನ್ನು ಕಬಳಿಸಿ, ರಕ್ತದಕೋಡಿಯಲ್ಲಿ, ದುಃಖದಾರಿದ್ರ್ಯಗಳ ಮಡುವಿನಲ್ಲಿ, ವಿದ್ರೋಹದ, ಸೇಡಿನ, ಪ್ರತೀಕಾರದ ಬೆಂಕಿಯಲ್ಲಿ ಬೇಯುವುದು ಖಂಡಿತ ಎಂದುಕೊಂಡ ತಿಮ್ಮರಸ.

ಎಲ್ಲರೂ ವಿಜಯನಗರ, ಉತ್ಕಲಗಳ ಭವಿಷ್ಯವನ್ನೇ ನಿರ್ಧರಿಸುವ ಈ ಸಂಧಾನದ ಸಫಲತೆ ವಿಫಲತೆಗಳನ್ನು ತಿಳಿಯಲು ಉತ್ಸುಕರಾಗಿ ಕುಳಿತಿದ್ದರು.

ಸಂಧಾನಕ್ಕೆಂದು ಹೊರಟ ಗೋವಿಂದರಾಜನಾಗಲೀ ಅವನ ಸಂಗಡಿಗರಾಗಲೀ, ಒಂದೆರಡು ವಾರಗಳಾದರೂ ಹಿಂದಿರುಗಿ ಬರಲಿಲ್ಲ. ಕೇವಲ ಕೆಲವೇ ಹರಿದಾರಿಗಳ ದೂರದಲ್ಲಿದ್ದ ಪೊಟ್ಟನೂರಿನಿಂದ ಹಿಂತಿರುಗಿಬರಲು ಇಷ್ಟು ಕಾಲ ಬೇಕಾಗಿರಲಿಲ್ಲ. ಆದರೂ ಯಾರೊಬ್ಬರೂ ಹಿಂದಿರುಗಿ ಬರಲಿಲ್ಲ. ಎಲ್ಲರಿಗೂ ಸಂಶಯಾಶ್ಚರ್ಯಗಳು ಏಕಕಾಲದಲ್ಲಿ ಬಂತು. ಸಂಧಾನ ಸಫಲವಾಗಲಿ, ಬಿಡಲಿ, ಈ ವೇಳೆಗೆ ಯಾವುದೊಂದು ಸಂಗತಿಯಾದರೂ ಹೊರಪಡಬೇಕಾಗಿತ್ತು. ಆದರೆ ಪೊಟ್ಟನೂರಿಗೆ ಹೊರಬಿದ್ದ ಯಾರೊಬ್ಬರ ಸುಳಿವೂ ಇಲ್ಲದುದನ್ನು ಕಂಡು, ಗೋವಿಂದರಾಜನೇನಾದರೂ ಯಾವುದಾದರೂ ತೊಂದರೆಗೆ ಸಿಲುಕಿರಬಹುದೆ ? ಎನ್ನುವ ಸಂಶಯ ಬಾಧಿಸಿತು ತಿಮ್ಮರಸನಿಗೆ. ಶತ್ರುಶಿಬಿರಕ್ಕೆ ಧೈರ್ಯವಾಗಿ ಹೊರಟಿದ್ದ ವೀರಾಗ್ರಣಿಯಾದ ಗೋವಿಂದರಾಜನು ಶತ್ರುಗಳ ಕೈಗೆ ಸಿಕ್ಕಿಬಿದ್ದಿರಬಹುದೇ ? ಎಂದು ಕಳವಳವಾಯಿತು ರಾಯನಿಗೆ. ಎಲ್ಲರ ಹೃದಯದ ಹಾರೈಕೆ—ಸಂಧಾನದ ಸಫಲತೆ, ವಿಫಲತೆ, ದೈವೇಚ್ಛೆಗೆ ಸೇರಿದುದು. ಗೋವಿಂದರಾಜ ಮಾತ್ರ ಕ್ಷೇಮವಾಗಿ ಹಿಂದಿರುಗಿದರೆ ಸಾಕು ಎಂಬುದೇ ಆಗಿತ್ತು.

ಅವರೆಲ್ಲರ ಹಾರೈಕೆ ನಿರರ್ಥಕವಾಗಲಿಲ್ಲ. ಶತ್ರುಶಿಬಿರಕ್ಕೆ ರಾಜದೂತನಾಗಿ ಹೋಗಿದ್ದ ಗೋವಿಂದರಾಜನು ಸುರಕ್ಷಿತವಾಗಿ ಹಿಂದಿರುಗಿ ಬಂದನು. ಆದರೆ ಅವನು ಹೋಗಿದ್ದ ಕಾರ್ಯದಲ್ಲಿ ಅವನಿಗೆ ಸಂಪೂರ್ಣ ಯಶಸ್ಸು ದೊರೆಯಲಿಲ್ಲವೆಂಬುದನ್ನು ತಿಳಿಸಲು ಅವನ ಕಳೆಗುಂದಿದ ಮುಖವೇ ಸಾಕ್ಷಿಯಾಗಿತ್ತು.

ಗೋವಿಂದರಾಜನು ತನ್ನ ಶಿಬಿರಕ್ಕೆ ಬಂದೊಡನೆಯೇ ಕೃಷ್ಣದೇವರಾಯನ ಸಮ್ಮುಖಕ್ಕೆ ಹೋಗಿ ತನ್ನ ರಾಯಭಾರದ ಕಥೆಯನ್ನು ಸವಿಸ್ತಾರವಾಗಿ ವಿವರಿಸಿದನು. ಗೋವಿಂದರಾಜನ ಮಾತಿನಿಂದ ಸಂಧಾನ ವಿಫಲವಾದ ಸಂಗತಿಯನ್ನು ತಿಳಿದು ರಾಯನಿಗೆ ವಿಷಾದವುಂಟಾಯಿತು. "ದೈವೇಚ್ಛೆ ಬೇರೆ ಇರುವಾಗ ತಮ್ಮ ಯಾವ ಪ್ರಯತ್ನ ಈಡೇರದು", ಎಂದು ತಿಮ್ಮರಸನು

ಒಂದು ಬಗೆಯ ಸಮಾಧಾನ ತಾಳಿದನು. ಆದರೆ ಕೃಷ್ಣದೇವರಾಯನು ತನ್ನ ರಾಯಭಾರಿಯನ್ನು ತಿರಸ್ಕಾರದಿಂದ ಕಂಡು, ಅವಮಾನಗೊಳಿಸಿ, ಅನೇಕ ದಿನಗಳವರೆಗೆ ಸಂದರ್ಶನವನ್ನೇ ಕೊಡದೆ, ಕಾಯಿಸಿದ ಸಂಗತಿಯನ್ನು ಕೇಳಿ ಸುಮ್ಮನಿರಲಾಗಲಿಲ್ಲ. ಕ್ರೋಧದಿಂದ ಮುಖ ಉರಿಯಿತು, ಹುಬ್ಬು ಗಂಟಿಕ್ಕಿತು. ಕಣ್ಣುಗಳು ಕ್ರೋಧದ ಕಾಲಾಗ್ನಿಯನ್ನು ಪ್ರತಿಬಿಂಬಿಸುತ್ತಿದ್ದವು.

ಗೋವಿಂದರಾಜನು ಕೃಷ್ಣದೇವರಾಯನ ಕೈಗೆ ಗಜಪತಿಯ ಓಲೆಯನ್ನು ಕೊಡಲು ಸಿದ್ಧನಾಗಿ ಮುಂದುವರೆದಾಗ ಕೃಷ್ಣದೇವರಾಯನು ಆ ಪತ್ರವನ್ನು ಒಮ್ಮೆ ತೀಕ್ಷ್ಣವಾಗಿ ನೋಡಿ, ಮತ್ತೆ ತಿಮ್ಮರಸನತ್ತ ದೃಷ್ಟಿ ಬೀರಿದಾಗ ಇವರ ಇಂಗಿತವನ್ನು ಅರಿತು ಗೋವಿಂದರಾಜನು ಪತ್ರವನ್ನು ತಿಮ್ಮರಸನತ್ತ ನೀಡಲು

ತಿಮ್ಮರಸನು ಆ ಪತ್ರವನ್ನು ಗಂಭೀರವಾಗಿ ಓದಿದನು.

ಸ್ವಸ್ತಿ ಶ್ರೀಮನ್ಮಹಾರಾಜಾಧಿರಾಜ, ರಾಜಪರಮೇಶ್ವರ ಇತ್ಯಾದಿ ಬಿರುದಾಂಕಿತರೂ, ವಿದ್ಯಾನಗರ ರತ್ನಸಿಂಹಾಸನಾಧೀಶ್ವರರೂ ಆದ ಶ್ರೀ ಕೃಷ್ಣದೇವರಾಯಭೂಪಾಲರ ಸನ್ನಿಧಿಗೆ —

ಉತ್ಕಲದ ಪ್ರತಾಪರುದ್ರ ಗಜಪತಿಯು ಮಾಡುವ ಅನೇಕ ಪ್ರಣಾಮಗಳು.

"ಈಗ ಬರೆಯುವುದೇನೆಂದರೆ, ತಾವು ನನ್ನ ಮೇಲಿನ ವಿಶ್ವಾಸದಿಂದ ಸಂಧಾನವನ್ನು ಕೋರಿ ನಿರೂಪವನ್ನು ಬರೆಸಿದ್ದೀರಿ. ಮೇಲಿಂದ ಮೇಲೆ ಯುದ್ಧದಲ್ಲಿ ಜಯಗಳಿಸಿದ್ದರೂ, ಉದಾರಮನಸ್ಸಿನಿಂದ ನನ್ನನ್ನು— ದೈವೀಶಾಪಕ್ಕೆ ತುತ್ತಾಗಿರುವ ದೌರ್ಭಾಗ್ಯನಾದ ನನ್ನನ್ನು ನಿಕೃಷ್ಟನೆಂದು ತಿಳಿಯದೆ ಗೌರವ ತೋರಿ, ಆದರಿಸಿದ್ದೀರಿ. ಇದಕ್ಕಾಗಿ ಅನೇಕ ವಂದನೆಗಳು."

ತಮ್ಮ ಅಭೀಷ್ಟದಂತೆ ನಾನೂ ಸಂಧಾನಕ್ಕೆ ಸಿದ್ಧನಾಗಿದ್ದೇನೆ. ನನ್ನೊಡನೆ ಸಂಧಿಮಾಡಿಕೊಳ್ಳುವ ನಿಜವಾದ ಆಸೆ ನಿಮಗೆ ಇದ್ದರೆ ನೀವು ಜಗನ್ಮೋಹಿನಿಯ ವಿವಾಹದ ಕನಸನ್ನು ಮರೆಯಬೇಕು. ಪವಿತ್ರವಾದ

ಚಂದ್ರವಂಶದಲ್ಲಿ ಹುಟ್ಟಿದ ಜಗನ್ಮೋಹಿನಿಯನ್ನು ಅಜ್ಞಾತಕುಲ ಸಂಜಾತರಾದ ತಮಗೆ, ಅಧರ್ಮವಾಗಿ ಸಿಂಹಾಸನವನ್ನು ಆಕ್ರಮಿಸಿಕೊಂಡಿರುವ ತಮಗೆ, ಈ ದೇಹದಲ್ಲಿ ಒಂದು ತೊಟ್ಟು ರಕ್ತವಿರುವ ತನಕ, ಕೊಟ್ಟು ಮದುವೆ ಮಾಡಲಾರೆ. ತಾವು ಜಗನ್ಮೋಹಿನಿಯ ರೂಪಲಾವಣ್ಯಗಳಿಗೆ ಮರುಳಾಗಿ ದೀಪವನ್ನು ಮುತ್ತುವ ಪತಂಗದಂತೆ ಹಾಳಾಗಲು ನನ್ನಮೇಲೆ ದಂಡೆತ್ತಿ ಬಂದಿದ್ದೀರಿ. ಇನ್ನಾದರೂ ಜಗನ್ಮೋಹಿನಿಯ ಮೇಲಣ ಮೋಹವನ್ನು ತೊರೆಯುವುದು ಮೇಲು. ಅವಳು ಈ ಜನ್ಮದಲ್ಲಿ ನಿಮಗೆ ಲಭ್ಯವಾಗುವ ಕನ್ಯೆಯಲ್ಲ. ನನ್ನ ಇಡೀ ದೇಶ, ಕೋಶ ಕೈಬಿಡಲಿ. ಪತ್ನೀಪುತ್ರರು ನಿರ್ಗತಿಕರಾಗಲಿ, ನಾನುಮಾತ್ರ ಜಗನ್ಮೋಹಿನಿಯನ್ನು ಕುಲವಿಲ್ಲದ ಅಧರ್ಮಿಗೆ ಕೊಟ್ಟು ಪವಿತ್ರವಂಶದ ಸತ್ಕೀರ್ತಿಗೆ ಮಸಿಯನ್ನು ಬಳಿಯಲಾರೆ, ಇದು ಖಂಡಿತ.

ಇನ್ನಾದರೂ ನೀವು ಅವಳನ್ನು ಮರೆತು ಬಂದ ದಾರಿಗೆ ಸುಂಕವಿಲ್ಲವೆಂದು ಉತ್ಕಲದಿಂದ ಹಿಂತಿರುಗುವುದು ಕ್ಷೇಮ. ನೀವು ಸದುದ್ದೇಶದಿಂದ ಸಂಧಾನಪ್ರೇರಿತರಾಗಿದ್ದರೆ ನನ್ನ ಈ ಎರಡು ಶರತ್ತುಗಳಿಗೆ ನೀವು ಒಪ್ಪುತ್ತೀರೆಂದು ನಂಬಿರುತ್ತೇನೆ. ಮೊದಲು ನೀವು ಉತ್ಕಲದ ಎಲ್ಲ ಸೀಮೆಯನ್ನು ಹಿಂದಿರುಗಿಸುವುದು. ಸೆರೆಯಲ್ಲಿರುವ ಎಲ್ಲ ರಾಜಬಂಧುಗಳನ್ನೂ ಇತರ ಅಧಿಕಾರಿಗಳನ್ನೂ ಬಿಡುಗಡೆ ಮಾಡುವುದು. ಇವುಗಳಿಗೆ ನೀವು ಒಪ್ಪುವುದಾದರೆ ನಿಮ್ಮೊಡನೆ ಸಂಧಾನಕ್ಕೆ ಬರಲು ನನ್ನ ಅಭ್ಯಂತರವಿಲ್ಲ. ಆದರೆ, ಈ ಎಲ್ಲ ಸಂಧಾನದ ಚರಮಗುರಿ, ಪ್ರೇರಣೆ ಜಗನ್ಮೋಹಿನಿಯನ್ನು ಪಡೆಯುವುದೇ ಆಗಿದ್ದರೆ ಮಾತ್ರ ಅಂತಹ ಯಾವ ಸಂಧಾನಕ್ಕೂ ನಾನು ಒಪ್ಪಲು ಸಿದ್ಧನಾಗಿಲ್ಲ. ಜಗನ್ಮೋಹಿನಿಯ ಸುಕುಮಾರ ಬದುಕನ್ನು ಸಂಧಾನದ ವಧುವಾಗಿ ಬಲಿ ಕೊಡಲಾರೆ, ಇದು ಅಕ್ಷರಶಃ ಸತ್ಯ.

ಒಂದು ವೇಳೆ ಸಂಧಾನ ವಿಫಲವಾಯಿತೆಂದು ನನ್ನ ಮೇಲೆ ನೀವು ದಂಡೆತ್ತಿ ಬಂದು ಜಗನ್ಮೋಹಿನಿಯನ್ನು ಬಲಾತ್ಕಾರದಿಂದ ಪಡೆಯಲಿಚ್ಛಿಸಬಹುದು. ಆದರೆ ಈ ಒಂದು ಮಾತನ್ನು ನೀವು ನೆನಪಿನಲ್ಲಿಡಬೇಕು. ಕಳಿಂಗಮಾತೆಯು ಬಂಜೆಯಲ್ಲ. ಅವಳ ಮಕ್ಕಳು ಹೇಡಿಗಳಲ್ಲ. ಅವರು ಉತ್ಕಲದ ಮರ್ಯಾದೆಗಾಗಿ, ಮಾನಸಂರಕ್ಷಣೆಗಾಗಿ, ತಮ್ಮ ತನು, ಮನ,

ಧನವನ್ನು ಬಲಿಕೊಡುವ ವೀರಪುತ್ರರು ಎಂಬುದನ್ನು ಮರೆಯಬಾರದು. ನೀವು ಕತ್ತಿ ಎತ್ತಿದರೆ ನಾವೂ ಕತ್ತಿಯಲ್ಲಿಯೇ ಉತ್ತರ ಹೇಳುತ್ತೇವೆ. ಕಳಿಂಗಪುತ್ರರ ಕೂರಸಿಯಲಗಿನ ರುಚಿ ಸವಿಯುವ ಇಚ್ಛೆ ಇದ್ದರೆ, ಪೊಟ್ಟ ನೂರಿನ ಸಮರಭೂಮಿಗೆ ಬರಲು—ಇದೋ ಆಮಂತ್ರಣ! ನೀವು ಪುರುಷ ರಾದರೆ ಈ ಸಮರಾಹ್ವಾನವನ್ನು ಮನ್ನಿಸುತ್ತೀರಿ. ಇಲ್ಲವಾದರೆ ಸಂಧಾನ ವನ್ನು ಅಪೇಕ್ಷಿಸುತ್ತೀರಿ. ಇವುಗಳಲ್ಲಿ ಯಾವುನು ಆರಿಸಿಕೊಳ್ಳಬೇಕೆಂಬು ದನ್ನು ನೀವೇ ನಿರ್ಧರಿಸಬೇಕು.''

ಇಂತು ನಿಮ್ಮ ಹಿತೈಷಿ,
ಪ್ರತಾಪರುದ್ರ ಗಜಪತಿ.

ಈ ಪತ್ರವನ್ನು ಓದಿಸಿ ಕೇಳುತ್ತಿದ್ದಂತೆ ಕೃಷ್ಣದೇವರಾಯನ ಮೈಯ್ಯೆಲ್ಲಾ ಕೋಪದಿಂದ ದಗದಗಿಸಿತು. ಹೊಗೆ ಕಾರುವಂತೆ ನಿಟ್ಟುಸಿರು ಚಿಮ್ಮಿತು. ಕಣ್ಣುಗಳಲ್ಲಿ ದಾವಾನಲ ಮಿಂಚಿತು. ಮುಖ ಗಂಭೀರವಾಗಿ ಗಂಟಿಕ್ಕಿತು. ರಾಯನು ಔಡುಕಚ್ಚಿ ತಿಮ್ಮರಸನ ಕೈಯ್ಯಲ್ಲಿದ್ದ ಪತ್ರವನ್ನು ತಿರಸ್ಕಾರದೃಷ್ಟಿಯಲ್ಲಿ ದಹಿಸಲೆಂಬಂತೆ ತೀಕ್ಷ್ಣವಾಗಿ ನೋಡಿದನು.

ತಿಮ್ಮರಸನಿಗೆ ಕೋಪದಿಂದ ಕೆರಳಿ ನಿಂತ ರಾಯನು ಮುನಿದ ಪರಶಿವನಂತೆ ಕಂಡನು. ರಾಯನು ಕೋಪದ ಹೊತ್ತಿನಲ್ಲಿ ಏನು ಹೇಳು ವನೋ ? ರಾಯನ ಬಾಯಿನಲ್ಲಿ ಎಂತಹ ಭೀಕರ ಮಾತು ಹೊರಬೀಳು ವುದೋ ? ಎಂದು ತಿಮ್ಮರಸನು ತತ್ತರಿಸಿದನು.

ಆದರೆ ರಾಯನು, ತನ್ನ ಎಲ್ಲ ಕೋಪವನ್ನು ಕಷ್ಟದಿಂದ ನುರಗಿ ಕೊಂಡು, ಏನೂ ಆಗದವನಂತೆ, ಗಂಭೀರವಾಗಿ ನುಡಿದನು.

"ಅಪ್ಪಾಜಿ, ನೀವು ನನ್ನ ಮಾತನ್ನು ಕೇಳಲಿಲ್ಲ. ಆ ದೂರ್ತ ಗಜಪತಿಯೊಂದಿಗೆ ಸಂಧಾನಕ್ಕೆಳೆಸುವುದು ಅವಿವೇಕವೆಂದು ಹೇಳಿದ ನನ್ನ ಮಾತನ್ನು ನೀವು ಮನಸ್ಸಿಗೆ ತಂದುಕೊಳ್ಳದೆ, ನನ್ನನ್ನು, ನನ್ನ ಮನಸ್ಸಿನ ವಿರುದ್ಧ ಸಂಧಾನಕ್ಕೆ ಪ್ರೇರೇಪಿಸಿದಿರಿ. ನಿಮ್ಮ ಮನಸ್ಸನ್ನು ನೋಯಿಸ ಬಾರದೆಂದು ನನಗೆ ಅಪ್ರಿಯವಾಗಿದ್ದ ಈ ಕಾರ್ಯಕ್ಕೆ ಒಡಂಬಟ್ಟೆ. ಆದರೆ ರಣಹೇಡಿಯೂ, ದುರಹಂಕಾರಿಯೂ ಆದ ಆ ಗಜಪತಿ ನಮ್ಮ ಸಂಧಾನಕ್ಕೆ ಯಾವ ಬೆಲೆ ಕೊಟ್ಟನೆಂಬುದನ್ನು ಈಗ ನೀವೇ ತಿಳಿದಿರಿ. ಅಂತಹ

ನೀಚನಿಗೆ ಬುದ್ಧಿ ಕಲಿಸಲು ನಮ್ಮದೇ ಸರಿಯಾದ ದಾರಿ. ಯುದ್ಧ ವೊಂದೇ ಮದ್ದು. ಆ ರಣಹೇಡಿಯನ್ನು ಕೈಸೆರೆಹಿಡಿದು ಶ್ರೇಷ್ಠವಂಶದ ಅವನ ಸೊಕ್ಕನ್ನು ನೆಲಕ್ಕಿಳಿಸಿ, ಅಪಮಾನಗೊಳಿಸದಿದ್ದರೆ ನಾನು ಕೃಷ್ಣದೇವ ರಾಯನೇ ಅಲ್ಲ

—ಎಂದು ಗುಡುಗಿದನು.

ತಿಮ್ಮರಸ, ಗೋವಿಂದರಾಜರು ರಾಯನ ಗಂಭೀರ ವಾಣಿಯನ್ನು ಕೇಳಿ ತಲ್ಲಣಗೊಂಡರು. ಅವರ ಮುಖ ಬಿಳಿಚಿಕೊಂಡಿತು. ಕೃಷ್ಣದೇವ ರಾಯನನ್ನು ಸಮಾಧಾನಗೊಳಿಸದಿದ್ದರೆ ಅವನ ಬಾಯಿಂದ ದ್ವೇಷದ ಲಾವಾ ರಸವೇ ಹೊರಡುವುದೆಂದು ಬಗೆದು ತಿಮ್ಮರಸನು ರಾಯನನ್ನು ಸಂತೈಸಲೆತ್ನಿಸಿ

"ಪ್ರಭು, ತಿಳಿಯದೆ ತಮಗೆ ಅಪಚಾರ ಮಾಡಿದ ಆ ಗಜಪತಿಯ ತಪ್ಪನ್ನು ತಾವು ಕ್ಷಮಿಸಬೇಕು. ಗಜಪತಿಯಂತೂ ತಾನು ಯಾರೊಡನೆ ವ್ಯವಹರಿಸುತ್ತಿರುವೆನೆಂಬುದನ್ನೂ ತಿಳಿಯದ, ದುಡುಕಿ, ಪ್ರಭುಗಳಿಗೆ ಅಪ ಚಾರ ಮಾಡಿದ್ದಾನೆ. ಘನತೆ, ಗಾಂಭೀರ್ಯಗಳನ್ನು ಮರೆತು ಅವಿವೇಕಿ ಯಾಗಿ ವರ್ತಿಸಿದ್ದಾನೆ. ಅವನ ಎಲ್ಲ ಅಪರಾಧಗಳನ್ನು ಪ್ರಭುಗಳು ಉದಾರಮನಸ್ಸಿನಿಂದ ಕ್ಷಮಿಸಬೇಕು" ಎಂದು ಮೊರೆ ಇಟ್ಟನು.

ಈ ಮಾತು ಕೃಷ್ಣದೇವರಾಯನ ಕಿವಿಯನ್ನು ಮುಟ್ಟಿತೋ ಇಲ್ಲವೊ ಹೇಳುವುದು ಕಷ್ಟ. ರಾಯನು ಯಾವುದೊಂದು ಮಾತನ್ನೂ ಆಡದೆ, ಏನನ್ನೋ ಆಲೋಚಿಸಿ ನಿರ್ಧರಿಸಿದವನಂತೆ, ಒಮ್ಮೆ ಹಲ್ಲು ಕಡಿದು, ನಸು ನಕ್ಕು, ತಿಮ್ಮರಸ,ಗೋವಿಂದರಾಜರಿಂದ ಬೀಳ್ಕೊಂಡು ಹೊರಟುಹೋದನು.

ರಾಯನು ಅಲ್ಲಿಂದ ಕಣ್ಮರೆಯಾದರೂ ತಂದೆಮಕ್ಕಳಿಬ್ಬರು ಬಹು ಕಾಲ ಅಲ್ಲೇ ನಿಂತಿದ್ದರು.—ರಾಯನು ಹೋದ ದಿಕ್ಕನ್ನೇ ನೋಡುತ್ತ, ರಾಯನ ಗಂಭೀರವಾದ ಮುಖ, ವಿಕಟವಾದ ನಗೆ, ಯಾವುದೋ ಅನಿಷ್ಟ ಸೂಚನೆಯಾಗಿ ತೋರಿದವು. ಅವರು ಅದನ್ನು ನೆನೆದು ತತ್ತರಿಸಿದರು. ಅವರ ಊಹೆ ಸುಳ್ಳಾಗಲಿಲ್ಲ.

ಸಿಂಹಾದ್ರಿಯ ಮೇಲೆ ಹೊಸದಾಗಿ ಕಟ್ಟಿಸಿದ್ದ ದೇವಾಲಯದ ಪ್ರಾಣಪ್ರತಿಷ್ಠಾಪನಾ ಮಹೋತ್ಸವ ನಡೆದ ದಿನದಂದೇ ದೇವಾಲಯದ ಪ್ರಾಕಾರದಲ್ಲಿ ಕಲ್ಲಿನ ಸ್ತಂಭವೊಂದರಲ್ಲಿ ಹೀಗೆ ಬರೆಸಿದನು.

“ಈ ಅಕ್ಷರಗಳು ಅಳಿಸಿಹೋದ ನಂತರ ಗಜಪತಿಯು ನನಗೆ ಯುದ್ಧ ಕೊಡಬಹುದು........! ”

“ ಈ ಬರಹವನ್ನು ಗಜಪತಿಯು ಅಳಿಸಿದುದಾದರೆ, ಅವನ ಮಗಳನ್ನು ತನ್ನ ಕುದುರೆಗೆ ಲಾಳಹೊಡೆಯುವ ಕಮ್ಮಾರನಿಗೆ ಕೊಟ್ಟು ಮದುವೆ ಮಾಡಲಾಗುವುದು ”

## ೨

ಕೃಷ್ಣದೇವರಾಯನು ಸಿಂಹಾದ್ರಿಯಲ್ಲಿ ಶಿಲಾಲೇಖನ ಕೊರೆಸಿರುವ ಸಂಗತಿ ಕರ್ಣಾಕರ್ಣಿತವಾಗಿ ಅಲ್ಲಿಬಿದ್ದು, ಇಲ್ಲಿಬಿದ್ದು, ಗಜಪತಿಯ ಕಿವಿಗೂ ಬಿದ್ದಿತು.

ಈ ವಾರ್ತೆಯನ್ನು ಕೇಳಿ ಗಜಪತಿಯು ಸಿಟ್ಟಿನಿಂದ ತನ್ನಲ್ಲೇ ವಿಸುಕಾಡಿದನು; ಕ್ರೋಧದಿಂದ ಹಲ್ಲುಕಡಿದನೇ ಹೊರತು ಬೇರೇನು ಮಾಡಲು ಗಜಪತಿಯಿಂದ ಸಾಧ್ಯವಾಗಲಿಲ್ಲ. ಕೃಷ್ಣದೇವರಾಯನು ತನ್ನನ್ನು ಈಪರಿಯಾಗಿ ಅಪಮಾನಗೊಳಿಸಿ, ಆ ಮೂಲಕ ಸೇಡು ತೀರಿಸಿಕೊಳ್ಳುವನೆಂಡು ತಿಳಿದಿರಲಿಲ್ಲ. ಅವನು ಅಪಮಾನದಿಂದ ಒಳಗೊಳಗೇ ಕುದಿದನು. ಅವನಿಗೆ ತನ್ನ ಅಸಹಾಯ ಸ್ಥಿತಿಯನ್ನು ನೆನೆದು ಒಂದು ಬಗೆಯ ಮೂಕ ಸಂಕಟವಾಯಿತು.

ಮೊದಲು ಕ್ರೋಧ......................ಅನಂತರ ಅಪಮಾನ........... ತನ್ನ ದುಸ್ಥಿತಿಯ ಬಗೆಗೆ ಮರುಕ........

ಹರಿದ ತಿದಿಯಿಂದ ಹೊರಬೀಳುವ ಗಾಳಿಯಂತೆ ಗಜಪತಿಯು ಸಿಟ್ಟುಸಿರು ಬಿಡುತ್ತಿದ್ದನು.

ಆ ಗಳಿಗೆಯಲ್ಲಿ ಅವನಿಗೆ ಪೂರ್ವದ ಘಟನೆಯೊಂದು ನೆನಪಿಗೆ ಬಂತು.

ಗಜಪತಿಯ ತಂದೆಯಾದ ಪುರುಷೋತ್ತಮ ಗಜಪತಿಯು ಸಾಳ್ವ ನರಸಿಂಹನ ಮೇಲಿನ ಸೇಡನ್ನು ಇದೇ ರೀತಿಯಾಗಿ ತೀರಿಸಿಕೊಂಡಿದ್ದನು....

ಪ್ರತಾಪರುದ್ರ ಗಜಪತಿಯ ತಂದೆ ಪುರುಷೋತ್ತಮ ಗಜಪತಿಯು ಉತ್ಕಲದರಸರಲ್ಲೆಲ್ಲಾ ಅತ್ಯಂತ ಪ್ರಬಲನಾದ ಅರಸು. ಅವನು ತನ್ನ ಬಾಹುಶಕ್ತಿಯಿಂದ ಉತ್ಕಲದ; ಉತ್ತರ ದಕ್ಷಿಣ ಗಡಿಗಳನ್ನು ವಿಸ್ತರಿಸಿ, ಉತ್ಕಲಸಾಮ್ರಾಜ್ಯವನ್ನು ಅನೇಕ ವರ್ಷಗಳ ಕಾಲ ಬಿಗಿಯಾಗಿ ಆಳಿ, ಖ್ಯಾತನಾಗಿದ್ದನು. ಅವನ ಕಾಲದಲ್ಲಿ ದೇಶದಲ್ಲಿ ಶಾಂತಿ ಸುಭಿಕ್ಷಗಳು ನೆಲೆಸಿತ್ತು. ಜನತೆಗೆ ಶತ್ರುಗಳ ಭಯ ನಿರ್ಮೂಲವಾಗಿತ್ತು. ಸಮರಧುರಂಧರನೂ, ರಾಜಕಾರಣನಿಪುಣನೂ ಆಗಿದ್ದ ಪುರುಷೋತ್ತಮ ಗಜಪತಿಯ ಆಳ್ವಿಕೆಯಲ್ಲಿ ಉತ್ಕಲ ತನ್ನ ಕೀರ್ತಿಶಿಖರವನ್ನು ಮುಟ್ಟಿತ್ತು. ಗಜಪತಿಯು ಧುರುಳರಿಗೆ ಯಮಸದೃಶವಾಗಿಯೂ, ಸಜ್ಜನರಿಗೆ ಮಿತ್ರನಾಗಿಯೂ ಇದ್ದನು. ಅವನ ಹೆಸರನ್ನು ಕೇಳಿದರೆ, ಸಣ್ಣಪುಟ್ಟ ರಾಜರುಗಳ ಮಾತು ಹಾಗಿರಲಿ, ವಿಜಯನಗರದ ಅರಸನೇ ನಡುಗುತ್ತಿದ್ದನು. ಗಜಪತಿಯ ಸ್ನೇಹ ಕೋರಿ ಬಹಮನಿಯ ಸುಲ್ತಾನರು ಅವನನ್ನು ಓಲೈಸುತ್ತಿದ್ದರು. ಇಂತಿರುವಲ್ಲಿ ಪುರುಷೋತ್ತಮ ಗಜಪತಿಯ ವಕ್ರನೋಟ ವಿಜಯನಗರಡ ಸಾಳ್ವನರಸಿಂಹನ ಮೇಲೆ ಬಿದ್ದುದು ಅವನ ದೌರ್ಭಾಗ್ಯವೆಂದೇ ಹೇಳಬೇಕು.

ವಿಜಯನಗರದ ಅರಸ ಸಾಳ್ವನರಸಿಂಹನಿಗೆ ಅಪೂರ್ವ ಲಾವಣ್ಯವತಿಯಾದ ಒಬ್ಬ ಮಗಳಿದ್ದಳು. ಅವಳ ಸೌಂದರ್ಯದ ಕೀರ್ತಿ ಉತ್ಕಲದ ತನಕ ಹಬ್ಬಿತ್ತು. ಇದನ್ನು ಕಿವಿಯಿಂದ ಕೇಳಿದ ಪುರುಷೋತ್ತಮ ಗಜಪತಿಯ ಲಕ್ಷ್ಯ ಅತ್ತ ಸರಿದಿತ್ತು.

ಒಂದು ಬಾರಿ ವೇಷಾಂತರದಲ್ಲಿ ವಿಜಯನಗರಕ್ಕೆ ಬಂದಿದ್ದ ಪುರುಷೋತ್ತಮ ಗಜಪತಿಗೆ ಸೌಂದರ್ಯದ ಖನಿಯಾಗಿದ್ದ ಹೇಮಾಂಬಿಕೆಯ ದರ್ಶನಯೋಗ ದೊರೆತಿತ್ತು. ಹೇಮಾಂಬಿಕೆ ಪಂಪಾಪತಿಯ ದರ್ಶನಕ್ಕೆ ಒಮ್ಮೆ ಬಂದಿದ್ದಾಗ ಆಕಸ್ಮಿಕವಾಗಿ ಅವಳ ದಿವ್ಯ ಸುಂದರವಾದ ಮುಖ ಕಾಣಿಸಿತು. ಗಜಪತಿ ಸಿಡಿಲು ಬಡಿದವನಂತೆ ಒಮ್ಮೆ ಬೆರಗಾಗಿ ನಿಂತ. ಎಲ್ಲ ಒಂದೇಕ್ಷಣ—ಆ ಸೌಂದರ್ಯರಾಶಿಯ ತಣ್ಣಗಿನ ಬೆಳುದಿಂಗಳಿನ ಅನುಭವ ! ಮರುಕ್ಷಣದಲ್ಲಿ ಗಜಪತಿಯನ್ನು ನಿರಾಶೆಯ ಮಡುವಿಗೆ ತಳ್ಳಿ

ಆಮೇಲೆ ಅಲ್ಲಿಂದ ಮಾಯವಾಗಿತ್ತು. ಬೆರಗಾಗಿ, ಸ್ತಂಭೀಭೂತನಾಗಿ ನಿಂತ ಗಜಪತಿಯನ್ನು ಸಂಗಡಿಗರು ಎಚ್ಚರಿಸಿ ಕರೆತರಬೇಕಾಯಿತು.

ಇದಾದ ಎಷ್ಟೋ ಕಾಲದವರೆಗೆ ಹೇಮಾಂಬಿಕೆಯ ಮನಮೋಹನ ರೂಪು ಗಜಪತಿಯ ಸ್ಮೃತಿಪಟಲದಿಂದ ಮರೆಯಲಾಗಲಿಲ್ಲ. ಅವಳನ್ನೇ ಕುರಿತು ಆಲೋಚಿಸಿದಂತೆ, ಗಜಪತಿಯು ಅವಳ ಚಲುವಿನ ಸಮ್ಮೋಹನಕ್ಕೆ ಒಳಗಾಗಿರುವಂತೆ ತೋರಿತು. ಹೇಮಾಂಬಿಕೆ ತನಗೆ ತಿಳಿಯದಂತೆಯೇ ಉತ್ಕಲದ ಚಕ್ರೇಶ್ವರನ ಹೃದಯವನ್ನು ಅಪಹರಿಸಿದ್ದಳು. ಗಜಪತಿಯ ಹೃದಯ ಮನಸ್ಸುಗಳ ತುಂಬಾ ಅವಳದೇ ರೂಪ ತುಂಬಿ, ಅವನಿಗೆ ಅವಳದೇ ಧ್ಯಾನವಾಯಿತು. ಅವಳನ್ನು ಹೇಗೆ ತನ್ನವಳನ್ನಾಗಿ ಮಾಡಿ ಕೊಳ್ಳಬೇಕೆಂಬುದೇ ಅವನ ಚಿಂತೆಯಾಯಿತು.

ಗಜಪತಿಯು ಎಲ್ಲರಂತೆ ಯುವಕನೇ ಆಗಿದ್ದರೆ ಹೇಮಾಂಬಿಕೆ ಯನ್ನು ಪಾಣಿಗ್ರಹಣವಾಗುವ ಬಗ್ಗೆ ಇಷ್ಟು ಚಿಂತಿಸಬೇಕಾಗಿರಲಿಲ್ಲ. ಆದರೆ ಗಜಪತಿಯು ಹೇಮಾಂಬಿಕೆಯನ್ನು ನೋಡಿ ಮಾರುಹೋದಕಾಲ, ಅವನ ಯೌವನ ಸರಿದು ವೃದ್ಧಾಪ್ಯಕ್ಕೆ ಎಡೆಗೊಡುತ್ತಿದ್ದ ಮಧ್ಯವಯಸ್ಸಿನ ಕಾಲ. ಆಗ ಗಜಪತಿಯ ವಯಸ್ಸು ಸುಮಾರು ನಲವತ್ತು ವರ್ಷಗಳು ಇರಬಹುದು. ಆದರೆ ಹೇಮಾಂಬಿಕೆಗಾದರೂ ಇನ್ನೂ ಇಪ್ಪತ್ತು ವರ್ಷ ಕೂಡಾ ತುಂಬಿರಲಿಲ್ಲ. ಆದರೂ ಅವಳು ಯುವತಿಯರನ್ನು ಮೀರಿಸು ವಂತೆ ಸೊಂಪಾಗಿ ಬೆಳೆದಿದ್ದಳು. ಅವಳ ಅಂಗಾಂಗಗಳಲ್ಲಿ ಯೌವನದ ಮಾಧುರ್ಯ ಒಡೆದು ಉಕ್ಕುತ್ತಿತ್ತು. ಆ ವಯಸ್ಸಿನಲ್ಲಿ ಎಂತಹ ಹೆಣ್ಣು ಗಳೂ ನೋಡಲು ಚೆಂದ. ಮಾಟವಾಗಿ, ದಂತದ ಪುತ್ಥಳಿಯಂತೆ ಕಡೆ ದಿಟ್ಟ ಅವಯವಗಳ ತುಂಬು ಯೌವನೆಯಾದ ಹೇಮಾಂಬಿಕೆ, ಸೃಷ್ಟಿಕರ್ತನ ಜಾಣ್ಮೆಯನ್ನೆಲ್ಲಾ ಹೀರಿಕೊಂಡು ರೂಪಗೊಂಡಂತೆ ಇದ್ದಳು. ಅರಮನೆಯ ಸುಖಸುಪ್ಪತ್ತಿಗೆಯಲ್ಲಿ ಕಷ್ಟ ಕಾರ್ಪಣ್ಯಗಳ ಸೋಂಕು ಇಲ್ಲದೆ ಲತೆಯಂತೆ ಬೆಳೆದ ಅವಳಿಗೆ ಅನುರೂಪನಾದ ವರನನ್ನು ಎಲ್ಲಿಂದ ಹುಡುಕಿ ತರುವುದು ಎಂಬುದು ಸಾಳ್ವ ನರಸಿಂಹನ ಚಿಂತೆಯಾಗಿತ್ತು.

ಅವನು ಹೇಮಾಂಬಿಕೆಯನ್ನು ಅತಿಶಯವಾಗಿ ಪ್ರೀತಿಸುತ್ತಿದ್ದ. ಹೇಮಾಂಬಿಕೆಯ ಮೇಲಣ ಅವನ ಪ್ರೀತಿ, ಮೋಹ ಒಂದು ರೀತಿಯಲ್ಲಿ

ಕುರುಡಾಗಿತ್ತೆಂದರೂ ಸಲ್ಲುತ್ತದೆ. ಅವನು ಮಗಳನ್ನು ಬಿಟ್ಟು ಒಂದು ನಿಮಿಷ ಇರುತ್ತಿರಲಿಲ್ಲ. ಹದಿನೆಂಟರ ಯುವತಿಯಾದ ಅವಳು ಅವನ ಭಾಗಕ್ಕೆ ಇನ್ನೂ ಹಾಲುಗಲ್ಲದ ಹಸುಳೆ. ತಾಯಿಯನ್ನು ಮೊದಲೇ ಕಳೆದುಕೊಂಡಿದ್ದ ಆ ನಿರ್ಭಾಗ್ಯಳಿಗೆ ಸಾಳ್ವನರಸಿಂಹನೇ ತಂದೆ, ತಾಯಿಯಾಗಿ ನೋಡಿಕೊಳ್ಳುತ್ತಿದ್ದನು. ಹೇಮಾಂಬಿಕೆಗೆ ಒಂದು ದಿನವಾದರೂ ಮಾತೃಪ್ರೇಮದ ಕೊರತೆ ಕಾಣಬಾರದೆಂಬುದೇ ಅವನ ಆಸೆಯಾಗಿತ್ತು. ಹೇಮಾಂಬಿಕೆಯೂ ತಂದೆಯ ತೋಳಿನಲ್ಲಿ ಬೆಳೆದು, ದೊಡ್ಡವಳಾದುದರಿಂದ ಅವಳಿಗೆ ತಾಯಿಯ ನೆನಪು ಅಷ್ಟಾಗಿ ಆಗುತ್ತಿರಲಿಲ್ಲ. ಒಮ್ಮೆ ಬಂದರೂ ಸ್ವಪ್ನದಲ್ಲಿ ಬಂದಂತೆ, ತಾಯಿಯ ನೆನಪಾಗುತ್ತಿತ್ತು, ಅಷ್ಟೆ.

ಹೀಗೆ ಕಷ್ಟ ಕಾಣದೆ, ಸುಖಸಾಮ್ರಾಜ್ಯದಲ್ಲಿ, ತಂದೆಯ, ಪರಿಜನರ ಪ್ರೇಮಾದರಗಳ ಸವಿಯುಂಡು, ಬೆಳೆದು ದೊಡ್ಡವಳಾದ ಹೇಮಾಂಬಿಕೆ ಗಜಪತಿಯ ಕಣ್ಣಿಗೆ ಬಿದ್ದುದು ಗೃಧ್ರದೃಷ್ಟಿಗೆ ಬಿದ್ದಂತೆ ಆಗಿತ್ತು.

ಯಾವ ದಿನ ಅವಳು ಗಜಪತಿಯ ಕೆಟ್ಟದೃಷ್ಟಿಗೆ ಬಿದ್ದಳೋ ಅಂದಿನಿಂದಲೇ ಅವಳ ಪಾಲಿನ ಕೆಟ್ಟದಿನಗಳು ಆರಂಭವಾಯಿತೆನ್ನಬೇಕು. ಏಕೆಂದರೆ ಹೇಮಾಂಬಿಕೆಯ ಮೇಲಣ ವ್ಯಾಮೋಹದಿಂದ ಹುಚ್ಚನಂತೆ ಆಗಿದ್ದ ಗಜಪತಿಯು ಸಾಮ, ದಾನ, ಭೇದಗಳಿಂದ ಅವಳನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿ ವಿಫಲನಾಗಿ ಈಗ ದಂಡಕ್ಕೆ ಶರಣು ಬಂದಿದ್ದ.

ಹೇಮಾಂಬಿಕೆಯನ್ನು ವಿವಾಹವಾಗುವುದರಲ್ಲಿ ಗಜಪತಿಗೆ ಮತ್ತೊಂದು ಸ್ವಾರ್ಥವೂ ಇತ್ತು. ಹೇಮಾಂಬಿಕೆಯನ್ನು ಮದುವೆಯಾದರೆ ಮುಂದೊಂದು ದಿನ ವಿಜಯನಗರವನ್ನು ಸುಲಭವಾಗಿ ಕಬಳಿಸಬಹುದೆಂದು ಅವನ ಹಂಚಿಕೆ.

ಅದಕ್ಕೆ ತಕ್ಕಂತೆ ಸಾಳ್ವನರಸಿಂಹನು ಅಂತಹ ಸಮರ್ಥವಾದ ದೊರೆ ಆಗಿರಲಿಲ್ಲ. ಅವನ ಕಾಲದಲ್ಲಿ, ದೇಶದಲ್ಲಿ ಆಡಳಿತದ ಬಿಗಿ ತಪ್ಪಿ ಅರಾಜಕತೆಯುಂಟಾಗಿತ್ತು. ಹೊರಗಿನ ಶತ್ರುಗಳು ಪ್ರಬಲಿಸಿ, ವಿಜಯನಗರದ ಗಡಿಯನ್ನು ಹಿಂದೊತ್ತುತ್ತಾ ಬಂದಿದ್ದರು. ಅವರ ಮೇಲೆ ಧಾಳಿ ಇಟ್ಟು ಅವರನ್ನೆಲ್ಲ ಪದೆಬಡಿದು ಪದಕ್ರಾಂತರನ್ನಾಗಿ ಮಾಡಿಕೊಳ್ಳುವ ಸಾಮರ್ಥ್ಯ ಸಾಳ್ವನರಸಿಂಹನಲ್ಲಿ ಇರಲಿಲ್ಲ. ಹೀಗಾಗಿ ದೇಶದಲ್ಲೆಲ್ಲಾ ಅರಾಜಕತೆ

ತಲೆದೋರಿತ್ತು, ಇಷ್ಟೇ ಸಾಲದೆಂಬಂತೆ ಬಹಮನಿ ಸುಲ್ತಾನರು ತಮ್ಮ ಹಿಂದಣ ವೈರವನ್ನು ಸಾಧಿಸಿಕೊಳ್ಳಲು ಇದೇ ತಕ್ಕ ಸಮಯವೆಂದು ಮೇಲಿಂದ ಮೇಲೆ ವಿಜಯನಗರದ ಮೇಲೆ ಧಾಳಿ ಇಟ್ಟು, ಕೊಲೆ, ಸುಲಿಗೆ, ದರೋಡೆಗಳಿಂದ ಪ್ರಜೆಗಳಿಗೆ ಕಂಟಕರಾಗಿದ್ದರು. ಇವರ ಜತೆಗೆ ಉತ್ಕಲದ ಗಜಪತಿ ಸಾಮ್ರಾಜ್ಯ ತೃಷ್ಣೆಯಿಂದ ವಿಜಯನಗರದ ಮೇಲೆ ಬಿದ್ದು ಉತ್ತರದ ಗಡಿಯ ಒಂದೊಂದೇ ಪ್ರಾಂತ್ಯಗಳನ್ನು ತನ್ನದಾಗಿ ಮಾಡಿಕೊಳ್ಳುತ್ತಾ ಬಂದಿದ್ದನು. ಅವರನ್ನು ಧೈರ್ಯವಾಗಿ ಎದುರಿಸಿ, ಸೋಲಿಸಿ ಹೊರಗಟ್ಟುವ ಶಕ್ತಿ ಸಾಮರ್ಥ್ಯಗಳಿಲ್ಲದೆ ಸಾಳ್ವನರಸಿಂಹನ ಸ್ಥಿತಿ ಕತ್ತರಿಯಲ್ಲಿ ಸಿಕ್ಕಿಕೊಂಡ ಅಡಿಕೆ ಗೋಟಿನಂತೆ ಆಗಿತ್ತು. ಇಂತಹ ಪ್ರಕ್ಷುಬ್ಧ ವಾತಾವರಣದಲ್ಲಿ ಸಾಳ್ವನರಸಿಂಹನು ಕಾಹಿಲೆ ಮುಗಿದುದು ತೂಕಡಿಸುತ್ತಿದ್ದ ಶತ್ರುಗಳಿಗೆ ಹಾಸಿಗೆ ಒದಗಿಸಿದಂತೆ ಆಯಿತು.

ಈ ಸುಸಂಧಿಯನ್ನು ಸಾಧಿಸಿ, ಹೇಮಾಂಬಿಕೆಯನ್ನು ತಾನು ಪಾಣಿಗ್ರಹಣವಾದರೆ, ಅಶಕ್ತರಾದ ರಾಜಬಂಧುಗಳನ್ನು ಮೂಲೆಗೊತ್ತಿ ತಾನೇ ವಿಜಯನಗರದ ಸಿಂಹಾಸನವನ್ನು ಹತ್ತಬಹುದೆಂಬ ದೂರದ ಆಸೆ ಗಜಪತಿಯದು. ಆದರೆ ಅವನ ಆಸೆ ಸುಲಭವಾಗಿ ಕೈಗೂಡುವಂತೆ ಇರಲಿಲ್ಲ. ಇದಕ್ಕೆ ಅನೇಕ ಅಡ್ಡಿ ಆತಂಕಗಳು ಇದ್ದುವು.

ಮೊದಲನೆಯದು, ಸಾಳ್ವನರಸಿಂಹನಿಗೇ ತನ್ನ ಮಗಳಾದ ಹೇಮಾಂಬಿಕೆಯನ್ನು ಗಜಪತಿಗೆ ವಿವಾಹ ಮಾಡಿಕೊಡಲು ಇಷ್ಟವಿರಲಿಲ್ಲ. ವಯಸ್ಸಿನಲ್ಲಿ ತಂದೆ ಮಕ್ಕಳ ವರಸೆಯಲ್ಲಿ ನಿಲ್ಲುವ ಗಜಪತಿಗೆ, ಯೌವನದ ಸಂಜೆಯಲ್ಲಿದ್ದ ಗಜಪತಿಗೆ, ಜೀವನದ ಸುಪ್ರಭಾತದಲ್ಲಿ ಮೊಗ್ಗು, ಹೂವಾಗಿ ಅರಳುತ್ತಿದ್ದ ಹೇಮಾಂಬಿಕೆಯನ್ನು ವಿವಾಹ ಮಾಡಿಕೊಡಲು ಅವನಿಗೆ ಲವಲೇಷವಾದರೂ ಇಷ್ಟವಿರಲಿಲ್ಲ. ಹೇಮಾಂಬಿಕೆಯ ಮನಸ್ಸಿನ ಭಾವನೆಗಳೇನೆಂಬುದನ್ನು ಚೆನ್ನಾಗಿ ತಿಳಿದಿದ್ದ ಸಾಳ್ವನರಸಿಂಹ ಈ ಜನ್ಮದಲ್ಲಿ ಗಜಪತಿ ಹಾಗೂ ಹೇಮಾಂಬಿಕೆಯ ಪರಿಣಯ ನಡೆಯುವುದಿಲ್ಲವೆಂದು ತಿಳಿದಿದ್ದ. ಆದರೆ ವಿಧಿ ಲಿಖಿತದ ಮುಂದೆ ಅವನ ನಿರ್ಧಾರವೇ ?

ಅವನು ಬಯಸಿದುದೊಂದು ; ಆದುದು ಮತ್ತೊಂದು. ಅವನು ಅಷ್ಟು ಬೇಗ ಕಾಹಿಲೆ ಮಲಗದೇ ಇದ್ದಿದ್ದರೆ ಅನುರೂಪನಾದ ಒಂದು

ವರನನ್ನು ಪತ್ತೆ ಮಾಡಿ ಮಗಳ ಮದುವೆಯನ್ನು ಮಾಡುತ್ತಿದ್ದನೋ ಏನೋ. ದುರ್ದೈವದಿಂದ ಸಾಳ್ವನರಸಿಂಹನು ಕಾಹಿಲೆ ಮಲಗಿದ್ದನು. ಹೇಮಾಂಬಿಕೆಯ ವಿವಾಹದ ಸಂಗತಿ ಅನಿಶ್ಚಿತವಾಗಿಯೇ ಉಳಿಯಿತು.

ಇದೇ ಸಮಯದಲ್ಲಿ ಪುರುಷೋತ್ತಮ ಗಜಪತಿಯ ಒತ್ತಾಯ ಜೋರಾಯಿತು. ಅನೇಕ ವರ್ಷಗಳಿಂದಲೂ, ಹೇಮಾಂಬಿಕೆಯನ್ನು ಪಾಣಿಗ್ರಹಣಮಾಡಿಕೊಳ್ಳಲು ಆಗ್ರಹಪಡುತ್ತಿದ್ದ ಗಜಪತಿಯ ವಿರೋಧ ಕಟ್ಟಿಕೊಳ್ಳಲು ಹೆಪರಿ, ಇಂದು ನಾಳೆ ಎಂದು ದಿನಗಳನ್ನು ಮುಂದೂಡಿ ಕೊಂಡು ಬರುತ್ತಿದ್ದ ಸಾಳ್ವನರಸಿಂಹನು ಈಗ ಯಾವುದೊಂದು ಉತ್ತರ ವನ್ನು ನಿರ್ಧರಿಸಿ ಹೇಳಬೇಕಾಗಿತ್ತು. 'ಆಗಲಿ' ಎಂದರೆ ತಾನಾಗಿ, ಅತಿ ಮುದ್ದಿನಿಂದ ಸಾಕಿದ ಗಿಳಿಯನ್ನು ಬೆಕ್ಕಿನ ಪಾಲುಮಾಡಿದಂತೆ. 'ಇಲ್ಲ'ವೆಂದರೆ, ಸಾಮ್ರಾಜ್ಯದ ಅಸ್ತಿತ್ವಕ್ಕೆ ಪೆಟ್ಟುಬಿದ್ದಂತೆ. ಇವುಗಳಲ್ಲಿ ಯಾವುದನ್ನೂ ನಿರ್ಣಯಿಸಲಾರದೆ ಸಾಳ್ವನರಸಿಂಹನು ತತ್ತರಿಸಿದನು. ಕಾಹಿಲೆಯಿಂದ ಹಣ್ಣಾಗಿದ್ದ ಅವನನ್ನು ಈ ಹೇಮಾಂಬಿಕೆಯ ವಿವಾಹದ ಸಮಸ್ಯೆ ಮತ್ತಷ್ಟು ಹಣ್ಣುಮಾಡಿತು.

ತಂದೆಯ ಸ್ಥಿತಿಯನ್ನು ಕಂಡು ಹೇಮಾಂಬಿಕೆ ಕನಲಿದಳು, ಕಂಬನಿ ಮಿಡಿದಳು. ತನ್ನ ಚಿಂತೆಯಿಂದಲೇ ಹಾಸಿಗೆ ಹಿಡಿದ ತಂದೆಯ ಕಳೆ ಗುಂದಿದ ಮುಖವನ್ನು ನೋಡಿ ಹೇಮಾಂಬಿಕೆಯೂ ಸೊರಗಿದಳು. ಪ್ರೀತಿಯ ನೀರುಂಡು, ಲತೆಯಂತೆ ಬೆಳೆದಿದ್ದ ಅವಳು ಪ್ರೀತಿಯ ಸೆಲೆ ಬತ್ತಿದ ಲತೆಯಂತೆಯೇ ಬಾಡಿದ್ದಳು.

ಸುರಸುಂದರಿಯಂತೆ ಕಾಣುತ್ತಿದ್ದ ಹೇಮಾಂಬಿಕೆ ಕೆಲವು ದಿನ ಗಳಲ್ಲೇ ನಿರ್ಜೀವ ಲತೆಯಂತೆ ಆದಳು.

ಅವಳಿಗೆ ತಂದೆಯ ಮನಸ್ಸಿನ ಹಾಯ್ದಾಟದ ಸಂಪೂರ್ಣ ಜ್ಞಾನ ವಿತ್ತು. ಅತ್ತ ಪುರುಷೋತ್ತಮ ಗಜಪತಿಯ ಹಗೆತನವನ್ನು ಕಟ್ಟಿ ಕೊಳ್ಳಲು ಮನಸ್ಸಿಲ್ಲ. ಇತ್ತ ತನ್ನನ್ನು ಆ ಮಧ್ಯಮ ವಯಸ್ಸಿನ ಗಜಪತಿಗೆ ವಿವಾಹಮಾಡಿಕೊಡಲು ಮನಸ್ಸಿಲ್ಲ. ಈ ಹಾಯ್ದಾಟವಲ್ಲಿ ಪಾರಾಗುವ ದಾರಿಕಾಣದೆ ವಿಹ್ವಲನಾಗಿದ್ದ ಸಾಳ್ವನರಸಿಂಹನ ಮನೋವೇದನೆಯನ್ನು

ಚೆನ್ನಾಗಿ ಬಲ್ಲ ಹೇಮಾಂಬಿಕೆಗೂ ಈ ವಿಪತ್ತಿನಿಂದ ಪಾರಾಗುವ ದಾರಿ ಮಾತ್ರ ಕಾಣದಾಗಿತ್ತು.

ಒಮ್ಮೊಮ್ಮೆ ತನ್ನ ಕಾರಣದಿಂದೇಕೆ ಎರಡು ರಾಷ್ಟ್ರಗಳ ನಡುವೆ ಹಗೆತನ, ದ್ವೇಷದ ದಳ್ಳುರಿ ಏಳಬೇಕು ? ಅದನ್ನು ತಾನೇಕೆ ನಂದಿಸಲೆತ್ನಿಸ ಬಾರದು ? ಎಂದೆನಿಸುತ್ತಿತ್ತು.

ಮರುಗಳಿಗೆಯಲ್ಲೇ ವೃದ್ಧಾಪ್ಯದ ಕಡೆಗೆ ಜಾರುತ್ತಿದ್ದ ಗಜಪತಿಯ ಚಿತ್ರ ಕಣ್ಣಿನ ಮುಂದೆ ಬಂದು ನಿಂತಾಗ ಗಜಪತಿಯನ್ನು ವಿವಾಹವಾಗು ವುದಕ್ಕಿಂತಲೂ ಪ್ರಾಣಹತ್ಯೆ ಮಾಡಿಕೊಳ್ಳುವುದೇ ಮೇಲೆಂದು ಅನಿಸುತ್ತಿತ್ತು.

ಎಷ್ಟೋಬಾರಿ ಸಖಿಯರ ಮುಂದೆ ಅವಳು ಹೇಳಿದ್ದಳು : "ಅಪ್ಪಾಜಿ ಯವರು, ಆ ಗಜಪತಿಗೆ ನನ್ನನ್ನು ಮದುವೆ ಮಾಡಿಕೊಡುವುದಾದರೆ ನಾನು ವಿಷ ತೆಗೆದುಕೊಂಡು ಸಾಯುತ್ತೇನೆ."

ಈ ಮಾತು ಅವಳ ಹೃದಯಾಂತರಾಳದಿಂದ ಬಂದ ನಿಜವಾದ ಭಾವನೆಗಳ ಪಲುಕೇ ಆಗಿದ್ದಿತು.

ಇದು ಸಾಳ್ವನರಸಿಂಹನ ಕಿವಿಗೂ ಬೀಳದೇ ಇರಲಿಲ್ಲ. ಹೇಮಾಂ ಬಿಕೆಯ ನಿಜವಾದ ಭಾವನೆಗಳೇನೆಂಬುದನ್ನು ಒಮ್ಮೆ ಅರಿತುಕೊಂಡು, ಈ ಮದುವೆಯ ಪ್ರಸ್ತಾಪದಿಂದ ಅವಳೆಷ್ಟು ನೊಂದಿರುವಳೋ ಎಂದು ಅವಳನ್ನು ಸಂತೈಸಲು ಅಂತಃಪುರಕ್ಕೆ ಬಂದಿದ್ದ.

"ಮಗು, ಪ್ರತಾಪರುದ್ರ ಗಜಪತಿಯು ವಿವಾಹಾಕಾಂಕ್ಷಿಯಾದ ಮಾತ್ರಕ್ಕೆ ನಿನ್ನನ್ನು ಅವನಿಗೆ ಮದುವೆ ಮಾಡಿಕೊಡುವೆನೆಂದು ಭಾವಿ ಸಿರುವೆಯಾ ? ನನ್ನ ವಯಸ್ಸಿನ ಆ ಗಜಪತಿಗೆ, ಹಾಲುಗಲ್ಲದ ಕಂದಮ್ಮ— ನಿನ್ನನ್ನು ಕೊಟ್ಟು ಮದುವೆಮಾಡಿಕೊಡುವೆನೆಂದು ಎಣಿಸಿದೆಯಾ ? ಇಲ್ಲ, ಕಂದ. ನಾನು ಇನ್ನೂ ಅಷ್ಟು ಅವಿಚಾರಿಯಾಗಿಲ್ಲ. ನಿನ್ನ ಆಸೆ ಆಕಾಂಕ್ಷೆ ಗಳೇನೆಂದು ನಾನು ಬಲ್ಲೆ. ಧೀರನೂ, ಸುಂದರನೂ, ಸದ್ಗುಣಿಯೂ ಆದ ರಾಜಪುತ್ರನ ಪಟ್ಟಮಹಿಷಿಯಾಗಬೇಕಾದ ನಿನ್ನನ್ನು ಆ ಮುದಿಗೂಬೆಗೆ ನಾನೆಂದಿಗೂ, ಯಾವ ಪ್ರಸಂಗದಲ್ಲೂ ಬಲಿಕೊಡಲಾರೆ. ನನ್ನ ಮಾತನ್ನು ನಂಬು. ಆತ್ಮಹತ್ಯೆಯ ಅವಿಚಾರಗಳನ್ನು ತಲೆಯಿಂದ ತೆಗೆದುಹಾಕು ಮಗು !"

ಎಂದು ಮಗಳ ಮೈದಡವಿ ಸಮಾಧಾನಪಡಿಸಿದ್ದನು.

"ಅಪ್ಪಾಜಿ, ನೀವು ನನಗೆ ಇಷ್ಟವಿಲ್ಲದ ಕಾರ್ಯವನ್ನು ಎಂದಿಗೂ ಮಾಡುವುದಿಲ್ಲವೆಂದು ನನಗೆ ಚೆನ್ನಾಗಿ ತಿಳಿದಿದೆ ಅಪ್ಪಾಜಿ. ಆದರೆ ನನ್ನ ಕಾರಣದಿಂದ ಎರಡು ರಾಷ್ಟ್ರಗಳಿಗೆ ಯುದ್ಧವಾದರೆ ಹೇಗೆ? ಎನ್ನುವುದೇ ನನ್ನ ಚಿಂತೆ........"

"ಯಾವ ಕಾರಣದಿಂದಲೂ ಯುದ್ಧ ಸಂಭವಿಸದಂತೆ ಆದಷ್ಟು ಪ್ರಯತ್ನಿಸುತ್ತೇನೆ ಮಗು. ಒಂದುವೇಳೆ ಯುದ್ಧ ಅನಿವಾರ್ಯವಾದರೆ ನಾವು ಭಯಪಡುವ ಕಾರಣವಿಲ್ಲ. ಶತ್ರುವನ್ನು ಎದುರಿಸಿ ವೀರಾವೇಶ ದಿಂದ ಹೋರಾಡೋಣ. ಮಡಿದರೆ ವೀರಸ್ವರ್ಗ, ಬದುಕಿ ಉಳಿದರೆ ವೈರಿ ನಿರ್ಯಾಣ!"

"ನನ್ನ ದೆಸೆಯಿಂದ ಇಷ್ಟೆಲ್ಲ ರಕ್ತಪಾತ, ನಿರಪರಾಧಿಗಳ ಬಲಿದಾನ ನಡೆಯಬೇಕೆ?"

"ದೈವಚಿತ್ತವಿದ್ದಂತೆ ಆಗುತ್ತದೆ ಮಗು. ನೀನು ಈ ಬಗ್ಗೆ ಯೋಚಿಸ ಬಾರದು. ನಮ್ಮ ಅವರ ಹಗೆತನ, ಇಂದು ನಿನ್ನೆಯದಲ್ಲ. ಇಂದು ನೀನೊಂದು ನೆಪ—ನಿಮಿತ್ತಮಾತ್ರ. ಅವರ ದುರಾಲೋಚನೆ ಬೇರೆಯಿದೆ ಎಂದು ನನಗೆ ಚೆನ್ನಾಗಿ ಮನದಟ್ಟಾಗಿದೆ. ಆ ದುರುಳ ಗಜಪತಿಯು ಸಮಯ ಸಾಧಿಸಿ ವಿಜಯನಗರವನ್ನು ಕಬಳಿಸಿ, ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುವ ಹವಣಿಕೆಯುಳ್ಳವನಾಗಿದ್ದಾನೆ. ಇದಕ್ಕೊಂದು ನೆಪವಾಗಿ ನಿನ್ನ ವಿವಾಹದ ಮಾತು. ನಾನು ಒಲ್ಲೆನೆಂದರೆ ಇದೇ ನೆಪದಿಂದ ಯುದ್ಧ ಹೂಡಬಹುದಲ್ಲ?"

"ಮಗು ನೀನು ಅಧೀರಳಾಗಬಾರದು. ಗಜಪತಿಯು ಬೆದರಿಕೆಗಳಿಗೆ ನಾನು ಬೆದರಬೇಕಾಗಿಲ್ಲ. ಅಂತಹ ಸಮಯ ಬಂದರೆ, ಕೈಗೆ ಕೈಕೊಟ್ಟು ಯುದ್ಧಮಾಡಿ ರಣರಂಗದಲ್ಲಿ ಮಡಿಯುವನೇ ಹೊರತು, ರಾಜ್ಯಲಕ್ಷ್ಮಿ ಯಂತಿರುವ ನಿನ್ನನ್ನು ಆ ದುರುಳನಿಗೆ ಒಪ್ಪಿಸುವುದಿಲ್ಲ. ನೀನು ಈಗಲೇ ಹತಾಶಳಾಗಬಾರದು. ನಿನ್ನ ರಕ್ಷಣೆಗಾಗಿ, ಸ್ವದೇಶ ರಕ್ಷಣೆಗಾಗಿ ಶಕ್ತಿ ಮೀರಿ ಹೋರಾಡುತ್ತೇನೆ. ದೈವಲೀಲೆ ಬೇರೆ ಇದ್ದರೆ, ನಮ್ಮ ಪ್ರಯತ್ನ ವಿಫಲವಾದರೆ ನೀನು ಯೋಚಿಸಿರುವ ದಾರಿಯಲ್ಲಿ ನೀನು ನಡೆಯಬಹುದು.

ಅಂತಹ ವಿಷಮ ಪರಿಸ್ಥಿತಿ ಬರುವ ತನಕ ನೀನು ಯಾವ ಬಗೆಯ ಚಿಂತೆಗೂ ತಲೆಯಲ್ಲಿ ಅವಕಾಶಕೊಡಬಾರದು. ನೀನು ವೃಥಾ ಚಿಂತಿಸಿ ಸೊರಗಿದರೆ, ನನ್ನಾಣೆ ಇದೆ."

ಈಗ ಹೇಮಾಂಬಿಕೆಯು ಸಾಳ್ವನರಸಿಂಹನನ್ನೂ ಸಮಾಧಾನ ಪಡಿಸಬೇಕಾದ ಹೊತ್ತು ಬಂದಿತ್ತು. ತಂದೆಗೆ ಸೂಕ್ತರೀತಿಯಲ್ಲಿ ಆಶ್ವಾಸನ ವಿತ್ತು, ಸಮಾಧಾನಪಡಿಸಿದ್ದಳು.

ಈಗ್ಗೆ ಮತ್ತೆ ಅಂತಹದೇ ಪ್ರಸಂಗ ಬಂದಿತ್ತು.

ಪುರುಷೋತ್ತಮ ಗಜಪತಿಯು, ಸಾಳ್ವನರಸಿಂಹನು ಕಾಹಿಲೆ ಮಲಗಿದ ವಾರ್ತೆಯನ್ನು ಕೇಳಿ, ವಿಜಯನಗರವನ್ನು ಮುತ್ತಲು ಇದೇ ಸೂಕ್ತ ಸಮಯವೆಂದು ಭಾವಿಸಿ, ಮತ್ತೆ ಹೇಮಾಂಬಿಕೆಯ ವಿವಾಹದ ಕೋರಿಕೆ ಯನ್ನು ಮುಂದೊಡ್ಡಿದ್ದನು. ಈ ಸುದ್ದಿಯನ್ನು ತಂದ ದೂತನನ್ನು ಸಾಳ್ವನರಸಿಂಹನು ಅಪಮಾನಿಸಿ ಕಳುಹಿಸಿದನು. ಅಲ್ಲದೆ, ಅವಳು ಸಂಗಡ ತಂದಿದ್ದ ಅನೇಕ ಬೆಲೆಬಾಳುವ ಒಡವೆ, ವಸ್ತುಗಳನ್ನು ಹಿಂದಿರುಗಿಸಿ ಬಿಟ್ಟಿದ್ದನು.

ಕಟಕಪುರಿಗೆ ಹಿಂತಿರುಗಿದ ಚಾರರು, ಸಾಳ್ವನರಸಿಂಹನು ತಮಗೆ ಮಾಡಿದ ಎಲ್ಲಾ ಅಪಮಾನವನ್ನು ಬಣ್ಣಕಟ್ಟಿ ಹೇಳಿದರು. ಇದನ್ನು ಕೇಳಿ ಕುಪಿತನಾದ ಗಜಪತಿಯು ಸಾಳ್ವನರಸಿಂಹನಮೇಲೆ ಯುದ್ಧ ಘೋಷಿ ಸಿದನು. ತನಗೆ ಹೇಮಾಂಬಿಕೆಯನ್ನು ಕೊಡಲು ತಿರಸ್ಕರಿಸಿದ ಸಾಳ್ವನರಸಿಂಹನನ್ನು ಅಪಮಾನಗೊಳಿಸಲು ವೀರಪ್ರತಿಜ್ಞೆಯನ್ನು ಮಾಡಿದನು. ವಿಜಯನಗರದ ಮೇಲೆ ದಂಡೆತ್ತಿಹೋಗಿ, ಸಾಳ್ವನರಸಿಂಹ ನನ್ನೂ ಹೇಮಾಂಬಿಕೆಯನ್ನೂ ಸೆರೆ ಹಿಡಿದು, ಹೇಮಾಂಬಿಕೆಯನ್ನು ತನ್ನ ರಾಜಧಾನಿಯ, ಬೀದಿ ಗುಡಿಸುವ ಜಲಗಾರನಿಗೆ ಕೊಟ್ಟು ವಿವಾಹಮಾಡು ವುದಾಗಿ ಪ್ರತಿಜ್ಞೆಮಾಡಿದನು. ಇದನ್ನು ಕಾರ್ಯರೂಪಕ್ಕೆ ತರಲು ವಿಜಯನಗರದ ಮೇಲೆ ದಂಡೆತ್ತಿಹೊರಟನು.

ಇಂತು ಯುದ್ಧ ಅನಿವಾರ್ಯವಾಯಿತು.

ದುರದೃಷ್ಟವಶಾತ್ ಇದೇ ಸಮಯದಲ್ಲಿ ಸಾಳ್ವನರಸಿಂಹನ ಕಾಹಿಲೆ ಉಲ್ಬಣಿಸಿ, ದೇಹಸ್ಥಿತಿ ಚಿಂತಾಜನಕವಾಗಿತ್ತು. ರಾಜವೈದ್ಯರು ಮಾಡಿದ

ಎಲ್ಲ ಔಷಧೋಪಚಾರಗಳೂ ವ್ಯರ್ಥವಾದವು. ದಿನದಿನಕ್ಕೆ ಕಾಹಿಲೆ ವಾಸಿಯಾಗುವ ಬದಲು, ಹೆಚ್ಚುತ್ತಲೇ ಹೋಗಿತ್ತು. ಅವನು ಈ ಕುತ್ತ ದಿಂದ ಉಳಿದುಕೊಂಡರೆ ಪುನರ್ಜನ್ಮ ಪಡೆದಂತೆ ಎಂದು ಪರಿಜನರೆಲ್ಲರೂ ಭಾವಿಸಿದನು.

ಇಂತಿರುವಲ್ಲಿ ಸಾಳ್ವನರಸಿಂಹನ ಮನ ಕ್ಷೋಭೆಯನ್ನು ಹೆಚ್ಚಿಸಲು ಪುರುಷೋತ್ತಮ ಗಜಪತಿಯು ವಿಜಯನಗರದ ಮೇಲೆ ಅಪಾರ ಸೈನ್ಯ ದೊಂದಿಗೆ ದಂಡೆತ್ತಿ ಬಂದಿರುವನೆಂಬ ವಾರ್ತೆ ಕರ್ಣಕಠೋರವಾಗಿ ಬಂದೊ ದಗಿತು. ತಾನು ಸಾವುಬದುಕುಗಳ ಹೋರಾಟದಲ್ಲಿ ಇದ್ದರೂ ಸಾಮ್ರಾಜ್ಯದ ರಕ್ಷಣೆಗಾಗಿ, ಕೂಡಲೇ ಅಮಾತ್ಯರನ್ನೂ, ದಂಡನಾಯಕ ರನ್ನೂ ಕರೆಸಿಕೊಂಡು, ಯುದ್ಧಸನ್ನದ್ಧರಾಗಲು ತಿಳಿಸಿದನು.

ಶತ್ರುಗಳ ಸೈನ್ಯ ವಿಜಯನಗರದ ಕೋಟೆಯನ್ನು ಮುತ್ತುವ ವೇಳೆಗೆ ಕೋಟೆಯ ರಕ್ಷಣೆಗೆ ಬೇಕಾಗುವ ಸೈನ್ಯ ಸಿದ್ಧವಾಗಿತ್ತು. ಸುಲಭವಾಗಿ ವಿಜಯನಗರ ತನ್ನ ವಶವಾಗುವುದೆಂದು ಭಾವಿಸಿದ್ದ ಪುರುಷೋತ್ತಮ ಗಜಪತಿಯ ಎಣಿಕೆ ಸುಳ್ಳಾಯಿತು. ವಿಜಯನಗರದ ಸೈನ್ಯವು ಎರಡು ಭಾಗವಾಗಿ ಒಡೆದು, ಒಂದು ಭಾಗ ಕೋಟೆಯ ರಕ್ಷಣೆಗೆ ನಿಂತು, ಮತ್ತೊಂದು ಭಾಗ ಪುರುಷೋತ್ತಮ ಗಜಪತಿಯನ್ನು ನಡುದಾರಿಯಲ್ಲೇ ಅಡ್ಡಕಟ್ಟಿ, ಮುಂದೊತ್ತಿಬರದಂತೆ ತಡೆಯಿತು. ಅದನ್ನು ಸೋಲಿಸಿ ಹಿಮ್ಮೆಟ್ಟಿಸಿದ ಹೊರತು, ರಾಜಧಾನಿಯ ಮೇಲೆ ಏರಿಹೋಗುವಂತೆ ಇರಲಿಲ್ಲ. ಹೀಗಾಗಿ ಗಜಪತಿಯ ಆಸೆ—ತೀವ್ರಗತಿಯಲ್ಲಿ ನಡೆದು ರಾಜಧಾನಿಯನ್ನು ವಶಪಡಿಸಿಕೊಂಡು. ಸಾಳ್ವನರಸಿಂಹ ಹಾಗೂ ಹೇಮಾಂಬಿಕೆಯರನ್ನು ಜೀವ ಸಹಿತ ಕೈಸೆರೆ ಹಿಡಿಯಬೇಕೆನ್ನುವ ಸಂಕಲ್ಪ ಈಡೇರಿಸಿಕೊಳ್ಳಲು ಕೊಂಚ ತಡೆಯುಂಟಾಯಿತು. ತಮ್ಮನ್ನು ಎದುರಿಸಿದ ಸೇನೆಯನ್ನು ವಿಚಾರಿಸಿಕೊಳ್ಳಲು ಸಾಕಷ್ಟು ಸೈನ್ಯವನ್ನು ಹಿಂದುಳಿಸಿ, ತನ್ನ ಮೂಲ ಬಲದೊಂದಿಗೆ ವಿಜಯನಗರದ ಮೇಲೆ ತಾನೇ ಏರಿಹೋದನು. ಅವನು ವಿಜಯನಗರದ ಕೋಟೆಗೆ ಮುತ್ತಿಗೆ ಹಾಕಿದ ಅತ್ಯಲ್ಪಕಾಲದಲ್ಲೇ ಹಿಂದು ಳಿಸಿದ್ದ ಗಜಪತಿಯ ಸೈನ್ಯ, ಸಾಳ್ವನರಸಿಂಹನ ಸೈನ್ಯವನ್ನು ಸೋಲಿಸಿ,

ಓಡಿಸಿ, ಗಜಪತಿಯನ್ನು ಸಕಾಲದಲ್ಲಿ ಬಂದು ಕೂಡಿಕೊಂಡರು. ಇದರಿಂದ ಗಜಪತಿಯ ಬಲ ಇಮ್ಮಡಿಸಿತು.

ಮೇಲಿಂದ ಮೇಲೆ ನುಗ್ಗಿಬರುತ್ತಾ, ವೀರಾವೇಶದಿಂದ ಹೋರಾಡುತ್ತಿದ್ದ ಗಜಪತಿಯ ಸೈನಿಕರ ಮುಂದೆ ವಿಜಯನಗರದ ಕೋಟೆಯ ಬಾಗಿಲು ಬಹುಕಾಲ ನಿಲ್ಲದೇಹೋಯಿತು. ಗಜಪತಿಯ ಗಜಸೈನ್ಯ ಕೋಟೆಯ ಬಾಗಿಲಿನ ಕೂರಿಗೆಯನ್ನು ಎತ್ತಿ ಬಾಗಿಲನ್ನು ಮುರಿದು ನಗರದೊಳಗೆ ನುಗ್ಗಿದವು. ಕೋಟೆ ಗಜಪತಿಯ ವಶವಾಗಲು ಹೆಚ್ಚುಕಾಲ ಬೇಕಾಗಲಿಲ್ಲ.

ಕೋಟೆ ಗಜಪತಿಯ ವಶವಾದ ಸುದ್ದಿಯನ್ನು ಕೇಳಿ ಸಾಳ್ವ ನರಸಿಂಹನು ಹಾಸಿಗೆ ಬಿಟ್ಟೆದ್ದು ಕುಳಿತನು. ರಾಜವೈದ್ಯರ ಸಲಹೆ ನಿರರ್ಥಕವಾಯಿತು. ಅವನು ತಲೆಗೆ ಶಿರಸ್ತ್ರಾಣ, ಎದೆಗೆ ಉಕ್ಕಿನಕವಚಗಳನ್ನೂ ಧರಿಸಿ, ಕತ್ತಿಹಿರಿದು, ಹೇಮಾಂಬಿಕೆಯನ್ನು ಸೆರೆಹಿಡಿಯಲು ನುಗ್ಗಿಬರುತ್ತಿದ್ದ ಗಜಪತಿಯ ಸೈನಿಕರನ್ನು ತಡೆಯಲು ಹೊರಟನು. ಆದರೆ ಬಹುಕಾಲದ ಕಾಹಿಲೆ ಅವನ ಜೀವಸತ್ವವನ್ನೇ ಹೀರಿ ನಿಶ್ಯಕ್ತನನ್ನಾಗಿ ಮಾಡಿದ್ದುದರಿಂದ ಅರಮನೆಯ ಮುಂಭಾಗಕ್ಕೆ ಬರುವ ವೇಳೆಗೇ ದೇಹಕ್ಕೆ ಹೆಚ್ಚು ದಣಿವುಂಟಾಗಿ, ಹಾಗೆಯೇ ನೆಲಕ್ಕೆ ಕುಸಿದು ಬಿದ್ದನು. ಅದೇ ವೇಳೆಗೆ ಅಲ್ಲಿಗೆ ಬಂದಿದ್ದ ಗಜಪತಿಯ ಸೈನಿಕರು ಸುಲಭವಾಗಿ ಸಾಳ್ವನರಸಿಂಹನನ್ನು ಸೆರೆ ಹಿಡಿದರು.

ಸಾಳ್ವನರಸಿಂಹನು ಸೆರೆ ಸಿಕ್ಕಿದ ಸಂಗತಿ ಅರಮನೆಯಲ್ಲೆಲ್ಲಾ ಕಾಳ್ಗಿಚ್ಚಿನಂತೆ ಹರಡಿತು.

ಹೇಮಾಂಬಿಕೆ ಹತಾಶಳಾಗಿ ಆತ್ಮಹತ್ಯ ಮಾಡಿಕೊಂಡು, ಇನ್ನೆಲ್ಲಿ ತನ್ನ ಕೈಯಿಂದ ತಪ್ಪಿಸಿಕೊಂಡು ಹೋಗುವಳೋ ಎಂದು ಪುರುಷೋತ್ತಮ ಗಜಪತಿಯು ಹೇಮಾಂಬಿಕೆಯ ಅಂತಃಪುರಕ್ಕೆ ನುಗ್ಗಿದನು—ಅವಳನ್ನು ಸೆರೆ ಹಿಡಿಯಲು. ಆದರೆ ಈ ವೇಳೆಗೆ ಹಕ್ಕಿ ಪಂಜರದಿಂದ ಹಾರಿಹೋಗಿತ್ತು. ಗಜಪತಿಗೆ ತುಂಬಾ ನಿರಾಶೆಯಾಯಿತು.

ಪುರುಷೋತ್ತಮ ಗಜಪತಿಯ ಪ್ರತಿಜ್ಞೆ ಈಡೇರಲು ಹೇಮಾಂಬಿಕೆಯನ್ನು ಜೀವಂತವಾಗಿ ಕೈಸೆರೆಹಿಡಿಯುವುದು ಅನಿವಾರ್ಯವಾಗಿತ್ತು. ಅವಳು ತಪ್ಪಿಸಿಕೊಂಡು, ಗಜಪತಿಯ ಪ್ರತಿಜ್ಞಾಭಂಗಕ್ಕೆ ಕಾರಣಳಾ

ಗಿದ್ದಳು. ಇಷ್ಟೆಲ್ಲ ಕಷ್ಟಪಟ್ಟು, ಶ್ರಮವಹಿಸಿ, ವಿಜಯನಗರವನ್ನು ಗೆದ್ದರೂ ತನ್ನ ಪ್ರತಿಜ್ಞೆಯನ್ನು ಪಾಲಿಸಿಕೊಳ್ಳಲು ಗಜಪತಿಯಿಂದ ಸಾಧ್ಯವಾಗದೇ ಹೋಗಿತ್ತು. ಈ ವಚನ ಭಂಗಕ್ಕಾಗಿ ಅವನಿಗೆ ತುಂಬಾ ಪರಿತಾಪ ಉಂಟಾಯಿತು. ಅವನು ಮೊದಲು ಹೇಮಾಂಬಿಕೆ ಜೀವಂತಳಾಗಿರುವ ಸಂಗತಿಯನ್ನು ದೃಢಪಡಿಸಿಕೊಂಡು, ಅನಂತರ ಅವಳ ಶೋಧನೆಗಾಗಿ ಚತುರರಾದ ದೂತರನ್ನು ನಾಲ್ಕುದಿಕ್ಕಿಗೂ ಕಳುಹಿಸಿ ಕೊಟ್ಟನು.

ಹೇಮಾಂಬಿಕೆ ತನ್ನ ಆಪ್ತ ಗೆಳತಿಯೊಂದಿಗೆ, ರಾಜಧಾನಿ ಶತ್ರುವಶ ವಾದ ಕೂಡಲೇ, ಗುಪ್ತಮಾರ್ಗದಲ್ಲಿ ನಗರವನ್ನು ತೊರೆದು ತಲೆತಪ್ಪಿಸಿ ಕೊಂಡಿದ್ದಳು. ಪುರುಷವೇಷದಲ್ಲಿದ್ದ ಅವರನ್ನು ಪತ್ತೆಹಚ್ಚುವುದು ಕಠಿಣ ವಾಗಿತ್ತು. ಅವರು ಬೀಳುವುದನ್ನೂ, ಏಳುವುದನ್ನೂ ನೋಡದೆ, ವೇಗ ವಾಗಿಹೋಗುವ ಕುದುರೆಗಳ ಮೇಲೆ ದಿನವೆಲ್ಲಾ ಪ್ರಯಾಣ ಮಾಡಿ, ಬಂದು ತಲಪಿದರು. ಅಲ್ಲಿನ ನಾಡಗೌಡನ ಮನೆಯಲ್ಲಿ ರಾತ್ರಿ ಯನ್ನು ಕಳೆಯಲು ನಿರ್ಧರಿಸಿದರು. ದಿನವೆಲ್ಲಾ ಬಳಲಿ ಆಯಾಸ ಗೊಂಡಿದ್ದ ಅವರಿಗೆ ತುಂಬಾ ದಣಿವಾಗಿತ್ತು. ರಾತ್ರಿ ಮೈಮೇಲೆ ಎಚ್ಚರ ವಿಲ್ಲದಷ್ಟು ಗಾಢವಾದ ನಿದ್ರೆ ಬಂದಿತ್ತು. ಮರುದಿನ ಅವರನ್ನು ಯಾರೋ ಎಚ್ಚರಿಸಿದಂತಾಗಲು ಕಣ್ಣುಬಿಟ್ಟು ನೋಡಿದರು. ಅವರ ದುರ್ದೈವಕ್ಕೆ ಎಚ್ಚರಿಸಿದವರು ಬೇರಾರೂ ಆಗಿರದೆ, ಹೇಮಾಂಬಿಕೆಯ ಜಾಡುಹಿಡಿದು ಅನುಸರಿಸಿಕೊಂಡು ಬಂದಿದ್ದ ಗಜಪತಿಯ ಗುಪ್ತಚಾರರೇ ಆಗಿ ದ್ದರು. ಇಷ್ಟೆಲ್ಲ ಪ್ರಯಾಸಪಟ್ಟುದು ಲಾಭವಾಯಿತೇ ಹೊರತು, ಗಜಪತಿಯು ಬೀಸಿದ್ದ ಬಲೆಯಿಂದ ತಪ್ಪಿಸಿಕೊಳ್ಳಲು ಆ ಹತಭಾಗಿನಿ ಹೇಮಾಂಬಿಕೆಯಿಂದ ಸಾಧ್ಯವಾಗಲಿಲ್ಲ. ಗುಪ್ತಚಾರರು ಅವರಿಬ್ಬರನ್ನು ಕೈಸೆರೆ ಹಿಡಿದು, ಗಜಪತಿಯ ಬಳಿಗೆ ಕರೆದುಕೊಂಡು ಹೋದರು.

ಪುರುಷೋತ್ತಮ ಗಜಪತಿಗೆ ಕೈತಪ್ಪಿಹೋಗಿದ್ದ ಹೇಮಾಂಬಿಕೆ ಮರಳಿ ಲಭ್ಯವಾದ ಸಂಗತಿಯನ್ನು ಕೇಳಿ ಆದ ಸಂತೋಷ ಅಷ್ಟಿಷ್ಟಲ್ಲ. ಸೆರೆಯಾಳುಗಳನ್ನು ವಿಚಾರಿಸಿ ತಕ್ಕ ರೀತಿಯಲ್ಲಿ ಶಿಕ್ಷಿಸಲು ನಿರ್ಧರಿಸಿ, ಅವರನ್ನು ತನ್ನೊಡನೆ ಕಟಕಪುರಿಗೆ ಕರೆದೊಯ್ದನು. ಅಲ್ಲಿ ವಿಶೇಷವಾದ ಒಡ್ಡೋಲಗವನ್ನು ಕರೆದು, ಅಮಾತ್ಯರು, ಸಾಮಂತರು, ದಂಡನಾಯಕರು,

ಮನ್ತ್ರಿತರ ಸಭಾಸದರ ಸಮ್ಮುಖದಲ್ಲಿ ಬಹಿರಂಗ ವಿಚಾರಣೆಗೆ ಗುರಿ ಪಡಿಸಿದನು.

ಸೆರೆಯಾಳುಗಳ ವಿಚಾರಣೆ ನಡೆದು, ಗಜಪತಿಯನ್ನು ಅಪಮಾನ ಗೊಳಿಸಿದ ಸಾಳ್ವನರಸಿಂಹನನ್ನು ತಕ್ಕ ರೀತಿಯಲ್ಲಿ ಶಿಕ್ಷಿಸಲು, ಹೇಮಾಂಬಿಕೆ ಯನ್ನು ಕಟಕಪುರಿಯ ದೇವಸ್ಥಾನದ ಬೀದಿಯನ್ನು ಗುಡಿಸುವ ಜಲಗಾರನಿಗೆ ಕೊಟ್ಟು ಮದುವೆ ಮಾಡಬೇಕೆಂದು ರಾಜಾಜ್ಞೆಯಾಯಿತು.

ಅದರಂತೆ, ಹೇಮಾಂಬಿಕೆಯನ್ನು ಜಲಗಾರನೊಡನೆ ವಿವಾಹಮಾಡಿ ಕೊಡಲು, ಅವಳನ್ನು ಕರೆದೊಯ್ಯಲಾಯಿತು.

ಆಸ್ಥಾನದ ಎಲ್ಲಾ ಜನ ಗಜಪತಿಯ ಭೀಕರವಾದ ಆಜ್ಞೆಯನ್ನು ಕೇಳಿ ತಲ್ಲಣಗೊಂಡರು. ವಿಜಯನಗರದ ರಾಜಪುತ್ರಿಯನ್ನು ಈ ಪರಿ ಯಲ್ಲಿ ಅಪಮಾನಗೊಳಿಸಿದುದು ಅವರಲ್ಲಿ ಯಾರಿಗೂ ಪ್ರಿಯವಾಗಲಿಲ್ಲ. ಎಲ್ಲರೂ ರಾಜಾಜ್ಞೆಯನ್ನು ಕೇಳಿ ತಮ್ಮಲ್ಲೇ ಖೇದಪಟ್ಟರು. ಆ ರಾಜಪುತ್ರಿಗೆ ಒದಗಿದ ದುಃಸ್ಥಿತಿಗಾಗಿ ಅವರಿಗೆ ಮರುಕ ಉಂಟಾಗಿತ್ತು. ಅವಳ ದೌರ್ಭಾಗ್ಯಕ್ಕಾಗಿ ತಮ್ಮಲ್ಲೇ ಮಿಡುಕಿದರು.

ಆದರೆ ಈ ವಿಚಾರಣೆಯ ಎಲ್ಲಾ ನಾಟಕದ ಹಿಂದೆ ನಡೆದಿದ್ದ ಸಂಗತಿಯೇ ಬೇರೆಯಾಗಿತ್ತು. ಪುರುಷೋತ್ತಮ ಗಜಪತಿಯು, ಹೇಮಾಂಬಿಕೆಯನ್ನು ತನ್ನ ಪ್ರತಿಜ್ಞೆಯಂತೆ, ಜಲಗಾರನಿಗೆ ಕೊಟ್ಟು ಮದುವೆಮಾಡಲು ನಿಶ್ಚಯಿಸಿರುವುದನ್ನು ಕೇಳಿ ತಲ್ಲಣಗೊಂಡ ಅಮಾತ್ಯರು, ಗಜಪತಿಯು ಪ್ರಸನ್ನಚಿತ್ತನಾಗಿರುವ ಸಮಯ ಸಾಧಿಸಿ, ಅವನನ್ನು ಕಂಡು ನಿರಪರಾಧಿನಿಯಾದ, ವಿಜಯನಗರದ ಶ್ರೇಷ್ಠವಾದ ಅರಸು ಮನೆತನದಲ್ಲಿ ಹುಟ್ಟಿದ, ರಾಜಪುತ್ರಿಯಾದ ಹೇಮಾಂಬಿಕೆಯನ್ನು, ಯಾರದೋ ಮೇಲಿನ ಸೇಡಿನಿಂದ, ಈ ರೀತಿಯಲ್ಲಿ ಶಿಕ್ಷಿಸುವುದು ತುಂಬಾ ಅನ್ಯಾಯವೆಂದು, ಗಜಪತಿಯ ಮಾನವೀಯ ಪ್ರಜ್ಞೆಗೆ ಮೊರೆಯಿಟ್ಟರು. ಅವರ ಮೊರೆ ನಿರರ್ಥಕವಾಗಲಿಲ್ಲ. ಆ ಹತಭಾಗಿನಿಯಾದ ರಾಜಪುತ್ರಿಯ ಬಗ್ಗೆ ಗಜಪತಿಯ ಮನಸ್ಸು ಕರಗಿತು. ಆದರೆ ಅವಳನ್ನು ಉದ್ಧರಿಸಲು, ಯಾವ ಕಾರ್ಯ ಮಾಡಲು ಗಜಪತಿಯ ಕೈಯ್ಯನ್ನು ಅವನು ಮಾಡಿದ್ದ 'ಪ್ರತಿಜ್ಞೆ' ಕಟ್ಟಿತ್ತು. ಗಜಪತಿಯ ಅಂತರಂಗದಲ್ಲಿ ಹೇಮಾಂಬಿಕೆಯ

ಬಗೆಗೆ ಸಹಾನುಭೂತಿ ಉಂಟಾಗಿದ್ದರೂ, ಅದನ್ನು ಯಾವರೀತಿಯಲ್ಲೂ ತೋರಿಸಲಾಗದ ಸ್ಥಿತಿಯಲ್ಲಿ ಗಜಪತಿಯು ಇದ್ದನು.

ಇಂತಹ ವಿಷಮಪರಿಸ್ಥಿತಿಯಿಂದ ಪಾರಾಗುವ ದಾರಿಯೊಂದನ್ನು ಅಮಾತ್ಯರು ಹುಡುಕಿಕೊಟ್ಟು, ಗಜಪತಿಗೆ ಉಂಟಾಗಿದ್ದ ಧರ್ಮಸಂಕಟ ದಿಂದ ಅವನನ್ನು ಪಾರುಮಾಡಿದ್ದರು.

ಅದರಂತೆಯೇ ಇಂದು ಬಹಿರಂಗಸಭೆಯಲ್ಲಿ ವಿಚಾರ ನಡೆದು ಹೇಮಾಂಬಿಕೆಯನ್ನು ಜಲಗಾರನಿಗೆ ಮದುವೆ ಮಾಡಿಕೊಡಲು ರಾಜಾಜ್ಞೆ ಯಾಗಿತ್ತು. ಇದರಿಂದ ಪುರುಷೋತ್ತಮ ಗಜಪತಿಯ ಪ್ರತಿಜ್ಞೆ ನೆರ ವೇರಿದಂತೆ ಆಯಿತು. ಇನ್ನು ಉಳಿದುದು ಹೇಮಾಂಬಿಕೆಯ ಉದ್ಧಾರ !

ಇದೇ ಸಮಯದಲ್ಲಿ ಕಟಕಪುರಿಯಲ್ಲಿ ಕಾರ ಹುಣ್ಣಿಮೆಯ ಉತ್ಸವ ನಡೆದಿತ್ತು. ಈ ಉತ್ಸವದ ಒಂದು ವಿಶೇಷವೆಂದರೆ, ಉತ್ಕಲದ ಗಜಪತಿಯು ಶ್ರೀ ಜಗನ್ನಾಥನಿಗೆ ಮಾಡುವ ವಿಶಿಷ್ಟವಾದ ಸೇವೆ. ಉತ್ಸವದ ದಿನ ಗಜಪತಿಯು ಜಲಗಾರನಂತೆ ವೇಷ ಧರಿಸಿ, ದೇವಸ್ಥಾನದ ಬೀದಿಯನ್ನು ಗುಡಿಸಬೇಕಾಗಿತ್ತು. ಇದು ಬಹಳ ಹಿಂದಿನಕಾಲದಿಂದಲೂ ನಡೆದು ಬಂದಿದ್ದ ಒಂದು ಪದ್ಧತಿ.

ಈ ಬಾರಿ ಪದ್ಧತಿಯಂತೆ ಪುರುಷೋತ್ತಮ ಗಜಪತಿಯು ಜಲಗಾರ ನಂತೆ ವೇಷತೊಟ್ಟು ದೇವಾಲಯದ ಬೀದಿಯನ್ನು ಗುಡಿಸಲು ಬಂದಾಗ, ಅಮಾತ್ಯರು ಗಜಪತಿಯನ್ನು ಆ ವೇಷದಲ್ಲೇ ಕರೆತಂದು ಅವನೊಡನೆ ಹೇಮಾಂಬಿಕೆಯ ವಿವಾಹವನ್ನು ಮಾಡಿದರು. ಇದರಿಂದ ಗಜಪತಿಯ ಎರಡು ಅಭೀಷ್ಟಗಳು ಏಕ ಕಾಲದಲ್ಲಿ ನೆರವೇರಿದಂತೆ ಆಯಿತು.

ಉತ್ಕಲದ ಜನತೆ ಈ 'ವಿಚಿತ್ರವಿವಾಹ'ವನ್ನು ಕಂಡು, ಕೇಳಿ, ಬಹಳ ಸಂತೋಷಪಟ್ಟರು. ಪುರುಷೋತ್ತಮ ಗಜಪತಿಯು ಮಾಡಿದ ಪ್ರತಿಜ್ಞೆ ಹೀಗೆ ಯಾರಿಗೂ ನೋವಾಗದ ರೀತಿಯಲ್ಲಿ ನೆರವೇರಿದುದಕ್ಕಾಗಿ ಹರ್ಷಿಸಿದರು.

ಆದರೆ ಹೇಮಾಂಬಿಕೆಯ ಪಾಲಿಗೆ ಇದು ಒಂದು ಸಂತೋಷದ ಸನ್ನಿವೇಶವೂ ಅಲ್ಲ, ದುಃಖದ ಸನ್ನಿವೇಶವೂ ಅಲ್ಲ. ತನ್ನ ಜಡದೇಹಕ್ಕೆ ಸಂಬಂಧಿಸಿದಂತೆ ಒಂದು ಸಾಮಾನ್ಯ ಘಟನೆ ಈ ವಿವಾಹ. ಅವಳ

ಮನಸ್ಸು ಮಾತ್ರ ಜಡದೇಹದಿಂದ ದೂರ ಸಿಡಿದು, ಬೇರೊಂದು ಲೋಕದಲ್ಲಿ ತೊಳಲುತ್ತಿತ್ತು ! ಹುಳು ತಿಂದು ಜೀರ್ಣವಾದ ದೇಹದಲ್ಲಿ ಮರಳಿ ಜೀವ ಬಂದರೆ, ಆ ಜೀವಕ್ಕೆ ಯಾವ ಬಗೆಯ ಸಂಕಟ ಯಾತನೆಗಳು ಉಂಟಾಗ ಬಹುದೋ ಅದೇ ಬಗೆಯ ಸಂಕಟ ಯಾತನೆಗಳು ಹೇಮಾಂಬಿಕೆಯ ಜೀವಕ್ಕೆ ಉಂಟಾಗಿತ್ತು. ಅವಳು ಇದಾವ ಸಂಗತಿಯೂ ತನಗೆ ಸಂಬಂಧಿ ಸಿಲ್ಲವೆನ್ನುವಂತೆ ನಿರ್ಲಿಪ್ತಳಾಗಿದ್ದಳು.

ಪುರುಷೋತ್ತಮ ಗಜಪತಿಯು ಹೇಮಾಂಬಿಕೆಯನ್ನು ಮದುವೆ ಯಾದರೂ ಅವನ ಮೂಲೋದ್ದೇಶಗಳೊಂದೂ ಈಡೇರಲಿಲ್ಲ. ಹೇಮಾಂಬಿಕೆಯ ವಿವಾಹದಿಂದ ಎರಡು ರಾಷ್ಟ್ರಗಳ ನಡುವೆ ಸ್ನೇಹ ಸೌಹಾರ್ದಗಳು ಏರ್ಪಡಲಿಲ್ಲ. ಸಾಳ್ವನರಸಿಂಹನು ತನಗಾದ ಪರಾಭವ ವನ್ನೂ ಅಪಮಾನವನ್ನೂ ಮರೆಯಲಿಲ್ಲ. ಅದರ ಸೇಡು ತೀರಿಸಿಕೊಳ್ಳುವ ಮೊದಲೇ ಅವನು ಕಾಲನ ಬಾಯಿಗೆ ತುತ್ತಾದನು.

ಪುರುಷೋತ್ತಮ ಗಜಪತಿಯ ಕೈಹಿಡಿದು, ಅಂತಃಪುರದ ಮಹಾ ರಾಣಿಯರಲ್ಲಿ ಒಬ್ಬಳಾದರೂ ಹೇಮಾಂಬಿಕೆ ತಾನೂ ಸುಖಪಡಲಿಲ್ಲ. ಗಜಪತಿಯನ್ನೂ ಸುಖಪಡಿಸಲಿಲ್ಲ. ಭಗ್ನಹೃದಯಿಯಾದ ಹೇಮಾಂಬಿಕೆ ಮನೋವ್ಯಥೆಯಿಂದ ಕೊರಗಿ ಕೊರಗಿ, ಕಡೆಗೊಂದು ದಿನ ಕಣ್ಣುಮುಚ್ಚಿ ಕೊಂಡಳು. ಅವಳ ಸುಕುಮಾರ ಬಾಳುವೆ ಗಜಪತಿಯ ಕ್ರೋಧಾಗ್ನಿ ಯಲ್ಲಿ ಬೆಂದು, ಕಮರಿಹೋಯಿತು.

ಹೇಮಾಂಬಿಕೆಯ ಮೇಲಣ ಅತ್ಯಾಚಾರ ಕಡೆತನಕ ಗಜಪತಿಯ ಅಮಲಕೀರ್ತಿಗೆ ಕಳಂಕವಾಗಿಯೇ ಉಳಿಯಿತು. ಇದನ್ನು ಗಜಪತಿಯು ಮರೆತರೂ ವಿಜಯನಗರದ ಅರಸರು ಮಾತ್ರ ಮರೆಯಲಿಲ್ಲ. ಹೇಮಾಂ ಬಿಕೆಗಾದ ಈ ಅನ್ಯಾಯವನ್ನು ಮರೆಯುವುದು ವಿಜಯನಗರದ ಸಿಂಹಾ ಸನವನ್ನೇರಿದ ಯಾರಿಂದಲೂ ಸಾಧ್ಯವಿರಲಿಲ್ಲ........

ಇದನ್ನು ನೆನಪಿಗೆ ತಂದುಕೊಂಡೇ ಕೃಷ್ಣದೇವರಾಯನು ಜಗನ್ಮೋ ಹಿನಿಯ ಮೇಲೆ ಸೇಡು ತೀರಿಸಿಕೊಳ್ಳಲು, ಸಿಂಹಾದ್ರಿಯ ದೇಗುಲದ ಬಳಿ ಆ ಶಿಲಾಶಾಸನವನ್ನು ಕೊರೆಸಿರಬೇಕು ಎಂದು ಗಜಪತಿಯು ಭಾವಿಸಿದನು.

ಅವನಿಗೆ ಕೂಡಲೇ ತನ್ನ ಮಗಳಾದ ಜಗನ್ಮೋಹಿನಿಯ ನೆನಪಾ

ಯಿತು. ಭವಿಷ್ಯದ ಬೃಹದ್ ಗರ್ಭದಲ್ಲಿ ಅವಳಿಗೆ ಏನು ಕಾದಿದೆಯೋ ಎಂದು ಕಳವಳವಾಯಿತು.

ಅವನು ಹಾಗೆಯೇ ಆಸನಕ್ಕೊರಗಿ, ಶೂನ್ಯದೃಷ್ಟಿಯಿಂದ ಸಿಂಹಾದ್ರಿಯಕಡೆಗೆ ನೋಡಿದನು, ಅದರಿಂದ ಭಾರವಾದ ನಿಟ್ಟುಸಿರು ಹೊರಬಿತ್ತು.

೩

ಕೃಷ್ಣದೇವರಾಯನು ವಿಜಯನಗರದ ರತ್ನಸಿಂಹಾಸನವನ್ನೇರಿದ ಸಮಯದಲ್ಲಿ ವಿಜಯನಗರ ಸಾಮ್ರಾಜ್ಯ ರಾಹುಗ್ರಸ್ತವಾಗಿತ್ತು. ಅವನ ಹಿಂದೆ ಆಳಿದ ವೀರ ನರಸಿಂಹನು ದುರ್ಬಲನೂ, ಅಸಮರ್ಥನೂ ಆಗಿದ್ದ ದೊರೆ. ವಿಷಯಸುಖಗಳಲ್ಲಿ ಮೈಮರೆತು ಮುಳುಗಿದ್ದ ಅವನಿಗೆ ಪ್ರಜಾ ಹಿತ ಪಾಲನೆಗೆ ವೇಳೆಯುರಲಿಲ್ಲ. ಹೀಗಾಗಿ ಆಡಳಿತದಲ್ಲಿ ಬಿಕ್ಕಟ್ಟು ತಪ್ಪಿ ಅಧಿಕಾರಿಗಳು ಸ್ವೇಚ್ಛಾಪರರಾಗಿ, ದುರಹಂಕಾರದಿಂದ, ಉದ್ಧಟರಾಗಿ ವರ್ತಿಸುತ್ತಿದ್ದರು. ಅವರ ನೂರಾರು ಬಗೆಯ ಶೋಷಣೆಗೆ, ದರ್ಪಕ್ಕೆ ಸಿಕ್ಕಿ ಸಾಮ್ರಾಜ್ಯದ ಜನತೆ ಹಣ್ಣಾಗಿತ್ತು. ದೇಶದಲ್ಲೆಲ್ಲಾ ಅಶಾಂತಿ, ಕ್ಷೋಭೆಗಳು ತಾಂಡವಾಡುತ್ತಿದ್ದವು.

ಒಳದೇಶದ ಕಥೆ ಹೀಗಾದರೆ, ಹೊರಾಡಳಿತದ ಕಥೆ ಮತ್ತೊಂದು ರೀತಿ. ಅಸಮರ್ಥನೂ, ಹೇಡಿಯೂ, ವಿಷಯಲಂಪಟನೂ ಆದ ದೊರೆ ಸಿಂಹಾಸನದಲ್ಲಿರುವ ಸಂಗತಿ ಹೊರಗಿನ ಶತ್ರುಗಳ ರೆಕ್ಕೆ ಬಲಿತುಕೊಳ್ಳಲು ಅವಕಾಶ ಕೊಟ್ಟಿತ್ತು. ಇದೇ ಸಮಯವನ್ನು ಸಾಧಿಸಿ, ಬಹಮನಿ ಅರಸರು ವಿಜಯನಗರದ ಮೇಲೆ ನುಗ್ಗಿ ವಿಜಯನಗರಕ್ಕೆ ಸೇರಿದ್ದ ರಾಯಚೂರು, ಮುದ್ಗಲ್ಲು ಮೊದಲಾದ ಪ್ರದೇಶಗಳನ್ನು ತಮ್ಮದಾಗಿ ಮಾಡಿಕೊಂಡಿದ್ದರು. ಅತ್ತ ಉತ್ಕಲದ ಪ್ರತಾಪರುದ್ರ ಗಜಪತಿಯು ಬಹಮನೀಯರ ಮಿತ್ರನಾಗಿ, ಹಿಂದೂ ಸಾಮ್ರಾಜ್ಯವಾದ ವಿಜಯನಗರವನ್ನು ಆಪೋಶನ ತೆಗೆದು ಕೊಳ್ಳಲು ಸಮಯ ಸಾಧಿಸುತ್ತಿದ್ದನು.

ಹೀಗೆ ಎಲ್ಲೆಲ್ಲೂ ಶತ್ರುಗಳೇ ಪ್ರಬಲರಾಗಿ, ಸಾಮ್ರಾಜ್ಯದ ಅಸ್ತಿತ್ವವೇ ಗಂಡಾಂತರದಲ್ಲಿ ಇರುವಾಗ ಕೃಷ್ಣದೇವರಾಯನು ಪಟ್ಟಕ್ಕೆ ಬಂದಿದ್ದನು.

ಕೃಷ್ಣದೇವರಾಯನು ಪಟ್ಟಕ್ಕೆ ಬಂದೊಡನೆಯೇ ಮಾಡಿದ ಮೊದಲನೆಯ ಕೆಲಸ ಒಳಾಡಳಿತದಲ್ಲಿ ಬಿಗಿಯನ್ನು ತಂದು ಆಡಳಿತದ ವ್ಯವಸ್ಥೆಯನ್ನು ಭದ್ರವಾದ ಬುನಾದಿಯ ಮೇಲೆ ನಿಲ್ಲಿಸಿದನು. ಮದೋನ್ಮತ್ತ ಅಧಿಕಾರಿಗಳನ್ನು ಕೆಲಸದಿಂದ ತೆಗೆದುಹಾಕಿ, ಪ್ರಜೆಗಳನ್ನು ಶೋಷಿಸಿ, ತೊಂದರೆ ಕೊಡುತ್ತಿದ್ದ ಅಧಿಕಾರಿಗಳನ್ನು ಅವರು ಅರಸು ಮನೆತನದವರೆಂಬುದನ್ನು ನೋಡದೆ ಕ್ರೂರವಾಗಿ ದಂಡಿಸಿ, ಪ್ರಜೆಗಳ ಕಷ್ಟವನ್ನು ಪರಿಹರಿಸಿದನು. ಅಲ್ಲದೆ, ತಿಮ್ಮರಸನಂತಹ ಚತುರ ರಾಜಕಾರಣ ನಿಪುಣರ ಸಲಹೆಯಂತೆ, ಮಾಂಡಲೀಕರನ್ನು, ಸಾಮಂತರನ್ನು ರಾಜಧಾನಿಗೆ ಬರಮಾಡಿಕೊಂಡು ಅವರನ್ನು ಉಚಿತ ರೀತಿಯಲ್ಲಿ ಸನ್ಮಾನಿಸಿ, ಅವರ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾದನು. ಇದೇ ಸಮಯದಲ್ಲಿ ದುರ್ಬಲರಾದ ಮಾಂಡಲೀಕರನ್ನು ಸ್ಥಳಾಂತರಿಸಿ, ಆಡಳಿತದಲ್ಲಿ ದಕ್ಷತೆಯುಳ್ಳ ಅಧಿಕಾರಿಗಳನ್ನೇ ಅವರ ಸ್ಥಾನಕ್ಕೆ ನೇಮಿಸಿದನು. ಅವರು ವರ್ಷಂಪ್ರತಿ ರಾಜಬೊಕ್ಕಸಕ್ಕೆ ಸಲ್ಲಿಸಬೇಕಾಗಿದ್ದ ಕಪ್ಪಕಾಣಿಕೆಗಳನ್ನು ಮತ್ತೆ ಪರಾಮರ್ಶಿಸಿ, ನಿಗದಿ ಮಾಡಿ, ಪ್ರಜೆಗಳ ಸುಲಿಗೆಯಾಗದಂತೆ ನೋಡಿಕೊಂಡನು.

ದೇಶದ ಒಳಾಡಳಿತದಲ್ಲಿ ಒಂದು ವ್ಯವಸ್ಥೆ ತಲೆದೋರಿದ ಮೇಲೆ ಹೊರಾಡಳಿತದ ಕಡೆಗೆ ಗಮನ ಕೊಟ್ಟನು ಮೊದಲು ಹೊರಗಿನ ಶತ್ರುಗಳ ಬಲಾಬಲಗಳನ್ನು ತಿಳಿದುಕೊಳ್ಳಲು ಚತುರರಾದ ಗುಪ್ತಚಾರರನ್ನು ನೇಮಿಸಿದನು. ಅವರು ಸಂಗ್ರಹಿಸಿಕೊಂಡು ಬಂದ ಸುದ್ದಿಗಳಿಂದ, ಅವರ ಶಕ್ತಿ ಸಾಮರ್ಥ್ಯಗಳ ಸ್ಥೂಲ ಸ್ವರೂಪ ಅರಿವಾಯಿತು. ಅವರಲ್ಲಿ ಅಶ್ವಪತಿಗಳೆಂದು ಖ್ಯಾತನಾಗಿದ್ದ ಬಿಜಾಪುರದ ಸುಲ್ತಾನನ, ಗಜಪತಿಗಳೆಂದು ಪ್ರಖ್ಯಾತನಾಗಿದ್ದ ಉತ್ಕಲದರಸನ ಮೇಲೆ ಯುದ್ಧ ಮಾಡಲು ತಾನು ನರಪತಿಯಾಗಿದ್ದರೆ ಮಾತ್ರ ಸಾಲದೆಂಬ ವಿಷಯವನ್ನು ಮನಗೊಂಡು, ಅದರಂತೆ ತಾನೂ ತನ್ನ ಸೈನ್ಯವನ್ನು ದ್ವಿಗುಣಗೊಳಿಸಿ, ಆನೆ, ಕುದುರೆಗಳಿಂದ ತುಂಬಿದನು. ಇಷ್ಟು ಸಾಲದೆಂದು, ತನ್ನ ಮಾಂಡಲೀಕರು, ಸಾಮಂತರು ಸಾಮ್ರಾಟರ ಸೈನ್ಯಕ್ಕೆ ಇಷ್ಟಿಷ್ಟು ಸಂಖ್ಯೆಯಲ್ಲಿ ಸೈನ್ಯವನ್ನು ಒದಗಿಸಬೇ

ಕೆಂದು ನಿರೂಪ ಕಳುಹಿಸಿದನು. ಇದಕ್ಕೆ ತಪ್ಪಿದವರು ನಿಗದಿಯಾದ ಸೈನ್ಯ ವನ್ನು ಒದಗಿಸಲು ಇಷ್ಟವಿಲ್ಲದಿದ್ದವರು ಅಷ್ಟು ಹಣವನ್ನು ತಲೆ ದಂಡವಾಗಿ ತೆರಬೇಕೆಂದು ಕಟ್ಟಪ್ಪಣೆ ಮಾಡಿದನು. ಇದರಿಂದಾಗಿ, ದೇಶದ ಮೂಲೆ ಮೂಲೆಗಳಿಂದ ಪಟುಭಟರು ಅಸಂಖ್ಯಾತರಾಗಿ ರಾಜಧಾನಿಯಲ್ಲಿ ನೆರೆದರು. ಸಾಮ್ರಾಟರ ಬೆಂಗಾವಲಿಗೆ ದೊಡ್ಡದೊಂದು ಸೈನ್ಯವೇ ರಾಜ ಧಾನಿಯಲ್ಲಿ ಸಮರ ಸನ್ನದ್ಧರಾಗಿ ನಿಂತಿತು. ಅವರಿಗೆ ಸರಿಯಾದ ಶಸ್ತ್ರಾ ಸ್ತ್ರಗಳನ್ನು ಒದಗಿಸಿ, ಸಮರ ವಿದ್ಯೆಗಳಲ್ಲಿ ಪಾರಂಗತರನ್ನಾಗಿ ಮಾಡಿ, ನರಪತಿಗಳೆನ್ನುವ ಬಿರುದನ್ನು ಸಾರ್ಥಕಪಡಿಸಿಕೊಂಡನು.

ಇಷ್ಟೆಲ್ಲ ಸಿದ್ಧತೆಯನ್ನು ಗುಪ್ತಚಾರರ ಮೂಲಕ ಈ ವಾರ್ತೆಯನ್ನು ಕೇಳಿ ತಿಳಿದ ಹಳೆಯ ಶತ್ರುಗಳಾದ ಬಹಮನಿ ಸುಲ್ತಾನರೂ, ಹಾಗೂ ಉತ್ಕಲದರಸೂ ತಾವೂ ಯುದ್ಧಸನ್ನದ್ಧರಾದರು. ಕೃಷ್ಣದೇವರಾಯನು ತಮ್ಮಲ್ಲಿ ಯಾರೊಬ್ಬರಮೇಲೆ ದಂಡೆತ್ತಿ ಬಂದರೂ ಅವರದನ್ನು ತಾವು ಒಟ್ಟುಗೂಡಿ ಸೋಲಿಸಬೇಕೆಂದು ಬಹಮನಿ ಸುಲ್ತಾನರಿಗೂ, ಗಜಪತಿಗೂ ಗೋಪ್ಯವಾದ ಒಪ್ಪಂದವೂ ಏರ್ಪಟ್ಟಿತು. ಅವರು ತಾವಾಗಿ ಕಾಲು ಕೆರೆದು ಯುದ್ಧಕ್ಕೆ ಹೊರಡದೆ, ಕೃಷ್ಣದೇವರಾಯನ ಚಲನ ವಲನಗಳನ್ನೇ ದೂರದಿಂದ ನಿರೀಕ್ಷಿಸುತ್ತಾ ಸುಮ್ಮನೆ ಕುಳಿತಿದ್ದರು.

ಉತ್ಕಲವಲ್ಲಿ ವಿವಿಧ ವೃತ್ತಿಯಲ್ಲಿ ವಿವಿಧ ವೇಷಗಳಲ್ಲಿ ತಲೆ ಮರೆಸಿ ಕೊಂಡಿದ್ದ ರಾಯನ ಗೂಢಚಾರರಲ್ಲಿ ಪ್ರಮುಖರಾದ ಗೋಪೋಜಿ ಮತ್ತು ರಾಮು ಒಂದು ಮಹತ್ವದ ಸುದ್ದಿಯನ್ನು ತಂದು ರಾಯನ ಕಿವಿಯ ಮೇಲೆ ಹಾಕಿದರು.

ಕೃಷ್ಣದೇವರಾಯನು ತನ್ನಮೇಲೆ ಧಾಳಿ ಇಡಬಹುದೆಂದು ಊಹಿಸಿ ಪ್ರತಾಪರುದ್ರ ಗಜಪತಿಯು ತನ್ನ ಸಾಮಂತರಾದ ಮಹಾಪತ್ರರನ್ನೆಲ್ಲಾ ರಾಜಧಾನಿಗೆ ಆಹ್ವಾನಿಸಿ, ಅವರೊಂದಿಗೆ ಬರಲಿರುವ ದಂಡಯಾತ್ರೆಯ ಬಗ್ಗೆ ಮಾತನಾಡಿದನಂತೆ. ಈ ಮಹಾಪಾತ್ರರ ಸಭೆಯಲ್ಲಿ ನಿರ್ಣಯವಾದ ಪ್ರಮುಖ ಸಂಗತಿಗಳಲ್ಲಿ ಮಹಾಪಾತ್ರರೆಲ್ಲರೂ ತಮ್ಮ ತಮ್ಮ ಸಕಲ ಸೈನ್ಯ ಗಳೊಂದಿಗೆ ಯುದ್ಧ ಸನ್ನದ್ಧರಾಗಬೇಕೆಂಬುದು ಒಂದು. ಅಲ್ಲದೆ ಬಹಮನಿ ಸುಲ್ತಾನರ ಸ್ನೇಹ, ಸಹಾಯಗಳನ್ನು ದೊರಕಿಸಿಕೊಳ್ಳಲು ಆಪ್ತ ಅನುಚರ

ರಾದ ವೆಂಕೋಜಿ ಮತ್ತು ದಡ್ಡೋಜಿ ಎನ್ನುವ ಚತುರ ಗೂಢಚಾರರನ್ನು ಬಿಜಾಪುರಕ್ಕೆ ಕಳುಹಿಸಲ್ಪಟ್ಟರು. ಅವರು ಮಾಡಿದ ಸಂಧಾನ ಸಫಲಗೊಂಡು ಬಹಮನಿ ಸುಲ್ತಾನರೆಲ್ಲರೂ ತಮ್ಮ ಸಹಾಯಗಳನ್ನು ಕೊಡುವುದಾಗಿ ತಿಳಿಸಿ ತಮ್ಮ ಸಂಸ್ಥಾನಿಕರೊಂದಿಗೆ ನಿರೂಪ ಕಳುಹಿಸಿಕೊಟ್ಟರಂತೆ. ಅದರಂತೆ, ಬಿದರೆಯ ನಿಜಾಂಸಾಹುವಿನ ಆಸ್ಥಾನಿಕ ನೀಲಾದ್ರಿಪಂತ, ಓರಂಗಲ್ಲಿನ ದಂಡನಾಯಕ ಚಿತಪ್ರಖಾನ್, ಅಹಮದ್‌ನಗರ, ಬಿಜಾಪುರ ಸುಲ್ತಾನರ ರಾಯಭಾರಿಗಳು ಕಟಕಪುರಿಯಲ್ಲಿ ನೆರೆದು ಕೃಷ್ಣದೇವರಾಯನ ಧಾಳಿಯನ್ನು ಎದುರಿಸಲು ಸಿದ್ಧರಾದರು.

ಕೃಷ್ಣದೇವರಾಯನು ಈ ಮಹತ್ವದ ಸಂಗತಿಗಳನ್ನು ಕೇಳಿ ಅಚ್ಚರಿಪಡುವುದಕ್ಕಿಂತ, ಅವರು ಸಂಗ್ರಹಿಸಿಕೊಂಡು ಬಂದಿದ್ದ ಇತರ ವಿಚಿತ್ರ ಸುದ್ದಿಗಳನ್ನು ಕೇಳಿ ಅಚ್ಚರಿಯುಂಟಾಯಿತು.

ಕೃಷ್ಣದೇವರಾಯನು ಉತ್ಕಲದಮೇಲೆ ದಂಡೆತ್ತಿ ಬಂದರೆ, ತಮ್ಮನ್ನು ಕಾಪಾಡಲು ಕಟಕಪುರಿಯ ಜಗನ್ನಾಥಸ್ವಾಮಿಯೇ ಇರುವುದಾಗಿ ಮಹಾಪತ್ರರ ಸಭೆಯಲ್ಲಿ ಗಜಪತಿ ಹೇಳಿದನಂತೆ. ದೈವಸಹಾಯವಿರುವ ನಮಗೇ ಜಯ ಖಂಡಿತ ದೊರೆಯುವುದೆಂದು ಗಜಪತಿಯು ನಿಶ್ಚಿಂತೆಯಿಂದ ಇರುವನಂತೆ ! ಇದನ್ನು ಕೇಳಿ ರಾಯನು ಬೆರಗಾಗದೆ ಇರಲಿಲ್ಲ.

ಗೂಢಚಾರರಿಂದ ತಿಳಿದ ಮತ್ತೊಂದು ವಿಸ್ಮಯಕಾರಕ ಅಂಶವೆಂದರೆ ಗಜಪತಿಯ ಸೈನಿಕರು ಯುದ್ಧಸನ್ನದ್ಧರಾಗುತ್ತಿದ್ದ ರೀತಿ.

ಕಟಕಪುರಿಯಲ್ಲಿ ಅಸಂಖ್ಯಾತ ಜಗಜಟ್ಟಿಗಳು ನೆರದಿರುವರಂತೆ. ಅವರು ಹಗಲು, ರಾತ್ರಿ ಮಾಡಿದ ವ್ಯಾಯಾಮದ ಫಲವಾಗಿ ಅವರು ಅನೇಕ ಚಮತ್ಕೃತಿಗಳನ್ನು ಸಾಧಿಸಬಲ್ಲವರಾಗಿದ್ದರಂತೆ.

ನೂರಡಿ ಇರುವ ಗೋಡೆಯನ್ನು ಕೈಯ್ಯಿಂದ ತಳ್ಳಿ ಸುಲಭವಾಗಿ ನೆಲಕ್ಕುರುಳಿಸುತ್ತಿದ್ದಾರಂತೆ.

ಹುಣಿಸೆಮರದ ಖಾಂಡವನ್ನು, ಕತ್ತಿಯನ್ನು ಬೀಸಿ ಒಂದೇ ಏಟಿಗೆ ತುಂಡರಿಸಿ ಕೆಡಹುತ್ತಿದ್ದರಂತೆ.

ಕಬ್ಬಿಣದ ಸಲಾಕಿಗಳನ್ನು ಮುಷ್ಟಿಯಿಂದ ತಿರುಚಿ, ಮುರಿಯುತ್ತಿದ್ದರಂತೆ.

ಕಬ್ಬಿಣದ ಸಲಾಕಿಗಳನ್ನು ಒಮ್ಮೆ ತಿರುಚಿದರೆ ಅವುಗಳನ್ನು ಜೇರ್ಪಡಿಸಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲವಂತೆ.

ಕಬ್ಬಿಣದ ತೂಕವಾದ ಗದೆಗಳನ್ನು ಬುಗುರಿಯಂತೆ ತಿರುಗಿಸಿ ಬಿಸುಡುತ್ತಿದ್ದರಂತೆ.

ಇಂತಹ ಮಲ್ಲಯೋಧರು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಗಜಪತಿಯ ಸೈನ್ಯದಲ್ಲೂ ಇರುವರೆಂಬ ಸಂಗತಿಯನ್ನು ಕೇಳಿ ರಾಯನು ವಿಸ್ಮಯಪಟ್ಟನು.

ಈ ಎಲ್ಲ ಸುದ್ದಿಯನ್ನು ಚಾರರ ಮೂಲಕ ಕೇಳಿ ತಿಳಿದ ತಿಮ್ಮರಸನಿಗೆ, ಯುದ್ಧಮಾಡಿ ಗಜಪತಿಯ ಹಗೆತನ ಕಟ್ಟಿಕೊಳ್ಳುವುದಕ್ಕಿಂತಲೂ ಸಂಧಾನದ ಮೂಲಕ ಮಿತ್ರತ್ವವನ್ನು ಗಳಿಸುವುದು ಶ್ರೇಯಸ್ಕರವೆನಿಸಿತು. ಏಕೆಂದರೆ ತಿಮ್ಮರಸನಿಗೆ ವಿಜಯನಗರದ ಸೈನ್ಯಶಕ್ತಿ, ಕಾಲ, ಹಣ ಗಜಪತಿಯ ಮೇಲೆ ಯುದ್ಧಮಾಡಿ ವ್ಯರ್ಥಗೊಳಿಸುವುದು ಇಷ್ಟವಿರಲಿಲ್ಲ. ಏಕೆಂದರೆ ವಿಜಯನಗರದ ಜನ್ಮಶತ್ರುಗಳಾದ ಬಹಮನಿ ಸುಲ್ತಾನರನ್ನು ಸೋಲಿಸಿ ಸದೆಬಡಿಯುವುದು ಪ್ರಥಮ ಕರ್ತವ್ಯವಾಗಿತ್ತು. ಅವರೇ ವಿಜಯನಗರದ ಅನೇಕ ಪ್ರದೇಶಗಳನ್ನು ಆಕ್ರಮಿಸಿಕೊಂಡಿದ್ದರು. ಅವರ ಕೈಯ್ಯಿಂದ ಆ ಪ್ರದೇಶಗಳನ್ನು ಮತ್ತೆ ಗೆದ್ದುಕೊಳ್ಳುವುದು ಅನಿವಾರ್ಯವಾಗಿತ್ತು. ಅವರ ಮೇಲೆ ಯುದ್ಧಕ್ಕೆ ಹೊರಟರೆ, ಅವರಿಗೆ ಸಹಾಯಕನಾಗಿ ಗಜಪತಿಯು ಬರುವನೆಂದು ತಿಮ್ಮರಸನು ಊಹಿಸಿರಲಿಲ್ಲ. ಗಜಪತಿಯು ವಿಜಯನಗರದರಸರಿಗೆ ಸಹಾಯಮಾಡುವ ಬದಲು ಬಹಮನಿ ಸುಲ್ತಾನರ ಪಕ್ಷಕ್ಕೆ ಸೇರಿದುದು ಬಹಳ ಕೆಡುಕೆನಿಸಿತು. ಹೇಗಾದರೂ ಮಾಡಿ ಬಹಮನಿ ಸುಲ್ತಾನರಿಂದ ಅವನು ದೂರ ಸಿಡಿದು ನಿಲ್ಲುವಂತೆ ಮಾಡಿದರೆ, ಮಹಮದೀಯ ಸೈನ್ಯವನ್ನು ಎದುರಿಸುವುದು ದೊಡ್ಡ ಕೆಲಸವಲ್ಲ—ಎಂದು ಆಲೋಚಿಸಿ, ಗಜಪತಿಯನ್ನು ಚತುರೋಪಾಯಗಳ ಮೂಲಕ ತಮ್ಮ ಪಕ್ಷಕ್ಕೆ ಸೇರಿಸಿಕೊಳ್ಳಲು ಪ್ರಯತ್ನಿಸಬೇಕೆಂದು ನಿರ್ಧರಿಸಿದನು.

ಬಹಮನಿ ಸುಲ್ತಾನರು ವಿಜಯನಗರದ ಮೇಲೆ ಹಗೆತನದ ಕತ್ತಿ ಮಸೆಯುತ್ತಿರುವಾಗ, ಉತ್ಕಲದ ಪ್ರತಾಪರುದ್ರ ಗಜಪತಿಯ ಸ್ನೇಹ, ಸಹಾಯಗಳು ತುಂಬಾ ಅಮೂಲ್ಯವಾಗಿದ್ದವು. ಸಂಧಾನದಿಂದ ಇದನ್ನು

ಸಾಧಿಸಿಕೊಂಡರೆ, ಎರಡು ರಾಷ್ಟ್ರಗಳಿಗೂ ಚಿರಂತನವಾದ ಸ್ನೇಹಸೌಹಾರ್ದತೆಗಳು ಏರ್ಪಡುವುದು ; ಇದರಿಂದ ಎರಡು ರಾಷ್ಟ್ರಗಳ ಕಲ್ಯಾಣ ಸಾಧಿಸುವುದು. ಉತ್ಕಲ ಹಾಗೂ ವಿಜಯನಗರದ ಅರಸರಲ್ಲಿ ಶರೀರ ಸಂಬಂಧ ಬೆಳೆದರಂತೂ ಎರಡು ರಾಷ್ಟ್ರಗಳ ಸ್ನೇಹಕ್ಕೆ ಭದ್ರವಾದ ಬುನಾದಿ ಹಾಕಿದಂತೆ ಎಂದು ತಿಮ್ಮರಸನು ಕನಸು ಕಂಡನು. ತಿಮ್ಮರಸನ ಈ ಕನಸು ಕೇವಲ ಗಾಳಿಗೋಪುರವಾಗಿರಲಿಲ್ಲ. ಸತ್ಯಸಂಗತಿಗಳ ಮೇಲೇ ರೂಪುಗೊಂಡಿತ್ತು.

ಉತ್ಕಲದ ಪ್ರತಾಪರುದ್ರ ಗಜಪತಿಯ ಕುಮಾರಿ ಜಗನ್ಮೋಹಿನಿ ರೂಪ, ಯೌವನ, ಗುಣಗಳಲ್ಲಿ ಕೃಷ್ಣದೇವರಾಯನ ಕೈಹಿಡಿಯಲು ತಕ್ಕವಳಾಗಿದ್ದಳು. ಅವಳ ಸೌಂದರ್ಯಾತಿಶಯ ಗುಣಗಳನ್ನು ಕೇಳಿ ಈ ವಿವಾಹದ ವಿಷಯದಲ್ಲಿ ತಿಮ್ಮರಸನು ಆಸಕ್ತಿ ತಳೆದಿದ್ದನು. ಜಗದೀಶ್ವರನ ಕೃಪೆಯಿಂದ ಈ ವಿವಾಹ ನೆರವೇರಿದರೆ, ಉತ್ಕಲ ಹಾಗೂ ವಿಜಯನಗರಗಳಿಗೆ ಎಂದೆಂದೂ ಅಳಿಯದ ಚಿರಬಾಂಧವ್ಯ ಏರ್ಪಡುವುದು ಖಂಡಿತವೆಂದು ತಿಮ್ಮರಸನು ಬಹಳ ಕಾಲದಿಂದಲೂ ಎಣಿಕೆ ಹಾಕುತ್ತಿದ್ದನು. ಈ ವಿಷಯ ಪ್ರಸ್ತಾಪಕ್ಕೆ ಇದುವರೆಗೆ ಉಚಿತವಾದ ಸನ್ನಿವೇಶ ದೊರೆಯುತ್ತಿರಲಿಲ್ಲ. ಈಗ ಈ ವಿಷಯ ಪ್ರಸ್ತಾಪಕ್ಕೆ ಸುಸಂಧಿ ದೊರೆಯುತ್ತಿತ್ತು.

ಈ ವಿಷಯವನ್ನು ರಾಯನಿಗೆ ಹೇಳಿದಾಗ, ರಾಯನಿಗೂ ಪ್ರಿಯವೇ ಆಯಿತು. ಅವನು ಈ ಮೊದಲೇ ಅನೇಕರ ಬಾಯಿಂದ ಜಗನ್ಮೋಹಿನಿಯ ಗುಣ, ರೂಪಗಳ ಬಗ್ಗೆ ಸಾಕಷ್ಟು ಹೊಗಳಿಕೆಯನ್ನು ಕೇಳಿದ್ದನು. ಚತುರರಾದ ವರ್ಣಶಿಲ್ಪಿಗಳು ಚಿತ್ರಿಸಿ ತಂದ ಭಾವಚಿತ್ರವನ್ನು ನೋಡಿ, ಜಗನ್ಮೋಹಿನಿ ನಿಜವಾಗಿಯೂ ತ್ರಿಭುವನ ಮೋಹಿನಿಯಾಗಿರುವಳೆಂದು ಅರಿತ. ಅಂದಿನಿಂದಲೇ ರಾಯನ ಹೃದಯಾಂತರಾಳದಲ್ಲಿ ಜಗನ್ಮೋಹಿನಿಯ ಬಗೆಗೆ ಒಂದು ಬಗೆಯ ಆತ್ಮೀಯಭಾವನೆ ಉಂಟಾಗಿತ್ತು. ಅದು ಯಾವ ಸ್ವರೂಪ ತೆಗೆದುಕೊಂಡಿದೆ ಎಂಬುದನ್ನು ರಾಯರು ತಿಳಿದಿರಲಿಲ್ಲ. ಈಗ ತಿಮ್ಮರಸನ ಮಾತುಗಳನ್ನು ಕೇಳಿದಮೇಲೆ ರಾಯನು ಸುಪ್ರಸನ್ನನೇ ಆದನು. ಈ ವಿಷಯ ರಾಯನ ಹೃದಯಕ್ಕೆ ಆಪ್ಯಾಯಮಾನವಾಗಿತ್ತು.

ಆದರೂ ತನ್ನ ಹೃದ್ಗಗತವನ್ನು ಪ್ರಕಟಿಸಲಿಚ್ಛಿಸದೆ, ರಾಯನು ನಗೆಯಾಡಿದ.

"ಅಪ್ಪಾಜಿಯವರು ಯಾರೋ ಯುದ್ಧಕ್ಕೆ ಹೆದರಿಸುವಂತೆ ಇದೆ. ಅಂತಲೇ ಯುದ್ಧದ ಬದಲು ಸಂಧಾನದ ಮಾತು ತೆಗೆದಿರುವುದು."

ಈ ಮಾತು ಕೇಳಿ ತಿಮ್ಮರಸನೂ ನಗುತ್ತಲೇ ಹೇಳಿದ.

"ಇಲ್ಲ ಪ್ರಭು, ತಿಮ್ಮರಸನೆಂದಿಗೂ ಯುದ್ಧಕ್ಕೆ ಅಂಜುವುದಿಲ್ಲ. ಈ ದೇಹ ಮುಪ್ಪಾಗಿರುವುದು ರಣರಂಗದಲ್ಲೇ. ನನ್ನ ವಯಸ್ಸಿನ ಹೆಚ್ಚು ಭಾಗವನ್ನು ಯುದ್ಧದಲ್ಲಿಯೇ ಕಳೆದಿದ್ದೇನೆ. ಹೀಗಿರುವಲ್ಲಿ ನಾನು ಯುದ್ಧಕ್ಕೆ ಅಂಜುವೆನೇ?"

"ಅದು ನಿಜ ಅಪ್ಪಾಜಿ, ಆದರೂ ಗಜಪತಿಯ ಮೇಲೆ ಯುದ್ಧಕ್ಕೆ ನಿಲ್ಲಲು ನಿಮಗೆ ಯಾಕೋ ಹುರುಪಿಲ್ಲ. ಬಹುಶಃ ಗಜಗತಿಯ ಬಳಿ ಅಸಂಖ್ಯಾತ ಮಲ್ಲ ಯೋಧರಿದ್ದಾರೆ, ಅಸಂಖ್ಯಾತ ಮದಗಜಗಳಿವೆ. ಎಂದು ಚಾರರು ತಂದ ವಾರ್ತೆಯನ್ನು ಕೇಳಿ ನಿಮಗೆ ಭೀತಿಯುಂಟಾಗಿರ ಬಹುದು. ಆದರೆ ಈ ಭೀತಿಗೆ ಬುಡವಿಲ್ಲ ಅಪ್ಪಾಜಿ, ಗಜಪತಿಯ ಆ ಮದ ಗಜ ಮಲ್ಲರ ಕೋಟಿಯನ್ನು ನಿಮಿಷಾರ್ಧದಲ್ಲಿ ಪುಡಿಪುಡಿ ಮಾಡುವ ಸಿಂಹ ಶಾರ್ದೂಲಗಳು ನಮ್ಮ ಸೈನ್ಯದಲ್ಲಿವೆ ಎಂಬುದನ್ನು ನೀವು ಮರೆಯ ಬಾರದು."

"ಹೌದು ಪ್ರಭು, ಅದನ್ನು ನಾನು ಬಲ್ಲೆ. ಸ್ವಶಕ್ತಿಯಲ್ಲಿ ಪ್ರಭು ಗಳಿಗೆ ಇರುವ ನಂಬಿಕೆ ಹೆಮ್ಮೆಯ ಸಂಗತಿಯಾಗಿದೆ. ಆದರೂ ಯುದ್ಧ ದಿಂದ ಸಾಧ್ಯವಾಗದೆ ಇರುವುದು ಸಂಧಾನದಿಂದ ಸಾಧಿಸಬಹುದೆಂದು ನಾನು ಹಾಗೆ ಹೇಳಿದೆ. ಅಷ್ಟೆ. ಪ್ರಭುಗಳಿಗೆ ನನ್ನ ಮಾತು ಅಪ್ರಿಯ ವಾದರೆ ದಯವಿಟ್ಟು ಕ್ಷಮಿಸಬೇಕು."

"ಅದನ್ನು ನಾನರಿಯೆನೇ ಅಪ್ಪಾಜಿ! ನಾನೂ ವಿನೋದಕ್ಕೆ ಹಾಗೆ ಹೇಳಿದೆ!"

"ಹಾಗಾದರೆ ಪ್ರಭುಗಳಿಗೆ ನನ್ನ ಸಲಹೆ ಪ್ರಿಯವಾಯಿತೆಂದು ತಿಳಿಯಲೆ?"

"ಅದನ್ನು ನಾನು ಬಾಯಿಬಿಟ್ಟು ಹೇಳಬೇಕೇ ಅಪ್ಪಾಜಿ?"

"ಹಾಗಾದರೆ ನಾನು ಧನ್ಯ ಪ್ರಭು!"

"ನೀವೊಬ್ಬರು ಮಾತ್ರವೇ ಧನ್ಯರಲ್ಲ ಅಪ್ಪಾಜಿ! ಈ ಸಂಧಾನ ಫಲಿಸಿದರೆ ಇಡೀ ಸಾಮ್ರಾಜ್ಯವೇ ಸಂತೋಷಪಡುವುದು. ಪಂಪಾಪತಿಯ ಅನುಗ್ರಹದಿಂದ ಇದು ಸಾಧ್ಯವಾಗಬೇಕು!"

"ಪುರುಷಪ್ರಯತ್ನ ನಮ್ಮದು ಪ್ರಭು, ಮುಂದಿನದು ದೈವೇಚ್ಛೆ"—ಎಂದು ಮಾತು ಮುಗಿಸಿದನು ತಿಮ್ಮರಸ.

ಕೃಷ್ಣದೇವರಾಯನೂ ಸಂಧಾನಾಕಾಂಕ್ಷಿಯಾಗಿರುವುದನ್ನು ಅರಿತ ಮೇಲೆ ತಿಮ್ಮರಸನು ತಡಮಾಡದೆ, ಉತ್ಕಲದ ಪ್ರತಾಪರುದ್ರ ಗಜಪತಿಯ ಬಳಿಗೆ ರಾಯಭಾರಿಯನ್ನು ಕಳುಹಿಸಿಕೊಟ್ಟನು. ರಾಯಭಾರಿಯೊಂದಿಗೆ ಒಂದು ನಿರೂಪವನ್ನು ಬರೆದುಕೊಡಲಾಗಿತ್ತು. ಎಲ್ಲರೂ ಈ ರಾಯಭಾರ ಯಶಸ್ವಿಯಾಗುವುದೆಂದು ಭಾವಿಸಿದ್ದರು. ಆದರೆ ರಾಯಭಾರಕ್ಕೆಂದು ಹೊರಟಿದ್ದ ದೂತರು ಉತ್ಕಲದಿಂದ ಹಿಂತಿರುಗಿ ಯಾರೂ ನಿರೀಕ್ಷಿಸದ ಅಪ್ರಿಯ ವಾರ್ತೆಯನ್ನೇ ತಂದರು.

ಗಜಪತಿಯು ಕೃಷ್ಣದೇವರಾಯನ ನಿರೂಪವನ್ನು ತಿರಸ್ಕರಿಸಿದ್ದನು. ಅವನು ಕೃಷ್ಣದೇವರಾಯನನ್ನು ಹೇಡಿ ಎಂದು ಭಾವಿಸಿದ್ದನು. ಜಗನ್ಮೋಹಿನಿಯ ಮೇಲಣ ಮೋಹದಿಂದ, ಸಂಧಾನಕಾಂಕ್ಷಿಯಾಗಿರುವನೆಂದು ಬಗೆದು ರಾಯನ ನಿರೂಪವನ್ನು ತುಂಬಾ ನಿರ್ಲಕ್ಷ್ಯದಿಂದ ಕಂಡನು. ಅಷ್ಟೇ ಅಲ್ಲ. ಕೃಷ್ಣದೇವರಾಯನ ಬಗ್ಗೆ ತನಗಿರುವ ಅಭಿಪ್ರಾಯಗಳನ್ನು ಪತ್ರ ಮುಖೇನ ಬರೆದು ಕಳುಹಿಸಿಕೊಟ್ಟಿದ್ದನು.

ಆ ಪತ್ರವನ್ನು ಓದಿಕೊಂಡು ಕೃಷ್ಣದೇವರಾಯನು ಬೆಂಕಿಬೆಂಕಿಯಾದನು. ಮೈಯ್ಯೆಲ್ಲಾ ಭಗಭಗನೆ ಉರಿಯಿತು. ಗಜಪತಿಯ ಮೇಲೆ ಭಯಂಕರ ಸಿಟ್ಟು ಬಂದಿತು.

ತನ್ನನ್ನು ಗಜಪತಿಯು ಹೇಡಿ ಎಂದು ಕರೆದುದಕ್ಕೆ ಕೃಷ್ಣದೇವರಾಯನಿಗೆ ಸಿಟ್ಟು ಬರಲಿಲ್ಲ. ತನ್ನನ್ನು ಮೋಹಾಂಧನೆಂದು ಕರೆದುದಕ್ಕೆ ಸಿಟ್ಟು ಬರಲಿಲ್ಲ. ಗಜಪತಿಯು ಕೃಷ್ಣದೇವರಾಯನ ಕುಲಗೋತ್ರಗಳನ್ನು

ಎತ್ತಿ ಆಡಿದುದರಿಂದ, ತನ್ನನ್ನು 'ಅಧರ್ಮಿ' ಎಂದು ಬರೆದುದರಿಂದ ಸಿಟ್ಟು ಬಂದಿತು.

ತಮ್ಮ ಕುಲಗೋತ್ರಗಳ ಬಗ್ಗೆ ಕೆಣಕಿದಾಗ ಸಾಮಾನ್ಯ ಮನುಷ್ಯರಿಗೆ ಸಿಟ್ಟು ಬರುವಾಗ ಸಾಮ್ರಾಟ್ ಕೃಷ್ಣದೇವರಾಯನಿಗೆ ಸಿಟ್ಟು ಬರುವುದ ರಲ್ಲಿ ಅಚ್ಚರಿಯಿಲ್ಲ.

ಪ್ರತಾಪರುದ್ರ ಗಜಪತಿಯು ಕೃಷ್ಣದೇವರಾಯನನ್ನು 'ಅಜ್ಞಾತ ಕುಲಗೋತ್ರಜ', 'ದಾಸೀಪುತ್ರ' ಎಂದು ಕರೆದು ಹೀಯಾಳಿಸಿದ್ದನು. ಮೋಸದಿಂದ, ಅಧರ್ಮದಿಂದ ಸಿಂಹಾಸನವನ್ನೇರಿರುವನೆಂದು ಮಿಥ್ಯಾ ಪವಾದ ಹೊರಿಸಿದ್ದನು. ಇಂತಹವನಿಗೆ ಪವಿತ್ರವಾದ ಚಂದ್ರವಂಶದಲ್ಲಿ ಹುಟ್ಟಿದ ಜಗನ್ಮೋಹಿನಿಯನ್ನು ಈ ಜನ್ಮದಲ್ಲಿ ಕೊಟ್ಟು ಮದುವೆ ಮಾಡ ಲಾರೆನೆಂದು ಉದ್ಘೋಷಿಸಿದ್ದನು.

ಜಗನ್ಮೋಹಿನಿಯನ್ನು ಕೈಹಿಡಿಯಲು ಕೃಷ್ಣದೇವರಾಯನ ಈ ಎಲ್ಲ ಅನರ್ಹತೆಗಳು, ಅರ್ಥಶೂನ್ಯವಾದುದು, ಕೇವಲ ಪೂರ್ವಾಭಿಪ್ರಾಯದಿಂದ ಪ್ರೇರಿತವಾದವು ಎಂದು ಗಜಪತಿಗೇ ತಿಳಿಯುತ್ತಿತ್ತು. ಕೊಂಚ ಸಮಾಧಾನ ಚಿತ್ತದಿಂದ ಈ ಎಲ್ಲ ವಿಷಯವನ್ನು ಕೂಲಂಕುಷವಾಗಿ ವಿಚಾರ ಮಾಡಿದ್ದರೆ. ಆದರೆ ಮುಂದೆ ನಡೆಯಬೇಕಾಗಿದ್ದ ರುದ್ರನಾಟಕಕ್ಕೆ ಗಜಪತಿಯ ತಪ್ಪು ಗ್ರಹಿಕೆಯೇ, ದುಡುಕು ವರ್ತನೆಯೇ ನಾಂದಿಯಾಗಬೇಕೆಂದು ವಿಧಿಲಿಖಿತ ವಿದ್ದರೆ ಯಾರೇನು ಮಾಡಲು ಸಾಧ್ಯ ?

ಕೃಷ್ಣದೇವರಾಯನು ಅಜ್ಞಾತ ಕುಲಸಂಜಾತನಾಗಿರಲಿಲ್ಲ. ದಾಸಿ ಪುತ್ರನಾಗಿದ್ದನೆಂಬುದೂ ಸತ್ಯ ದೂರವಾದ ಮಾತು. ಏಕೆಂದರೆ ಕೃಷ್ಣದೇವ ರಾಯನು ನರಸರಾಜೇಂದ್ರನ ಧರ್ಮಪತ್ನಿಯರಲ್ಲಿ ಒಬ್ಬಳಾದ ನಾಗಲಾ ದೇವಿಯ ಹೊಟ್ಟೆಯಲ್ಲಿ ಹುಟ್ಟಿದವನು. ಆಕೆ ನರಸರಾಜೇಂದ್ರನ ಭೋಗ ಕಾಂತೆಯಾಗಿದ್ದಳೆಂಬುದು ವಸ್ತು ಸ್ಥಿತಿಯನ್ನು ತಿಳಿಯದಿದ್ದವರು ಹೊರಿಸು ತ್ತಿದ್ದ ಮಿಥ್ಯಾರೋಪವಷ್ಟೇ.

ಇನ್ನು ಕೃಷ್ಣದೇವರಾಯನು ವಿಜಯನಗರ ಸಿಂಹಾಸನವನ್ನು ಮೋಸದಿಂದ ಅಧರ್ಮದಿಂದ ಆಕ್ರಮಿಸಿದನೆಂಬ ಮಾತು. ಇದೂ ಮಿಥ್ಯಾ ರೋಪಣೆಯೇ ಸರಿ. ವೀರನರಸಿಂಹನು ತೀರಿಕೊಂಡಾಗ ಅವನ ಮಗ

ವಿರೂಪಾಕ್ಷನೆನ್ನುವ ಆರೇಳು ವರ್ಷದ ಹಸುಳೆ ಸಿಂಹಾಸನಕ್ಕೆ ಅಧಿಕಾರಿ ಯಾಗಿದ್ದನು. ಆದರೆ ಅವನು ದುರ್ಬಲನೂ, ಸಣ್ಣ ವಯಸ್ಸಿನವನೂ ಆಗಿದ್ದುದರಿಂದ, ರಾಜ್ಯಾಡಳಿತವನ್ನು ನಿರ್ವಹಿಸಲು ಸಮರ್ಥನಾಗಿದ್ದ ಕೃಷ್ಣ ದೇವರಾಯನನ್ನೇ ಮಂತ್ರಿ ಪರಿಷತ್ತು ಆರಿಸಿತ್ತು. ಅದರ ಕೋರಿಕೆಯಂತೆ, ಕೃಷ್ಣದೇವರಾಯನು ಸಿಂಹಾಸನವನ್ನೇರಿದ್ದನು. ಮುಂದೆ ವಿರುಪಾಕ್ಷನು ತೀರಿಕೊಂಡನು. ಇದರಿಂದ ಕೃಷ್ಣದೇವರಾಯನೇ ಸಿಂಹಾಸನಕ್ಕೆ ನಿಜ ವಾದ ಹಕ್ಕುದಾರನಾದನು. ಅವನು ಸಿಂಹಾಸನವನ್ನು ಹತ್ತಿದುದರಲ್ಲಿ ಯಾವ ದೋಷ, ಅನ್ಯಾಯ, ಅಧರ್ಮಗಳು ಇರಲಿಲ್ಲ. ಇದೆಲ್ಲವೂ ಪ್ರತಾಪ ರುದ್ರ ಗಜಪತಿಯ ಸ್ವಕಪೋಲ ಕಲ್ಪನೆ ಅಷ್ಟೇ.

ಸೊಕ್ಕಿ ಮೆರೆದ ಗಜಪತಿಯ ಉದ್ಧಟತನಕ್ಕೆ ಸಾಣೆ ಹಿಡಿಯಲು ಕೃಷ್ಣದೇವರಾಯನು ಗಜಪತಿಯ ಮೇಲೆ ಯುದ್ಧ ಘೋಷಿಸಿದನು.

ಹೀಗೆ ಯುದ್ಧ ಅನಿವಾರ್ಯವಾಯಿತು.

ಕೃಷ್ಣದೇವರಾಯನು ಯುದ್ಧಕಲೆಯಲ್ಲಿ ಚನ್ನಾಗಿ ನುರಿತ ಅಮರ ನಾಯಕರನ್ನೂ, ಹರಿವಾಣಕೊಮ್ಮಲು ಹದಿನೆಂಟು ಕಂಪಣಿಗಳ ನಾಯಕ ರನ್ನೂ, ರೆಡ್ಡಿಕೊಮ್ಮಲ ವೀರರನ್ನೂ, ಕಾಮನಾಯಕರನ್ನೂ ಕರೆಸಿಕೊಂಡು ಸೂಕ್ತವಾಗಿ ಮರ್ಯಾದೆಮಾಡಿ, ಸೈನ್ಯದಲ್ಲಿ ಬೇರೆಬೇರೆ ದಳಗಳಿಗೆ ದಳಪತಿ ಗಳನ್ನಾಗಿ ಮಾಡಿದನು. ಇವರ ಮೇಲ್ವಿಚಾರಣೆ, ಮಹಾ ದಂಡನಾಯ ಕರೂ, ಅಮಾತ್ಯರೂ ಆಗಿದ್ದ, ತಿಮ್ಮರಸ, ಅಯ್ಯಮರಸ, ಕೊಂಡಮ ರಸಯ್ಯ ಮತ್ತು ಬಚ್ಚರಸ ಮೊದಲಾದ ವೀರರು ನಿಂತಿದ್ದರು. ಈ ದಂಡ ನಾಯಕರಿಗೆ, ನಿರ್ದೇಶನ ಕೊಡಲು ಸಾಮ್ರಾಟ್ ಕೃಷ್ಣದೇವರಾಯನೇ ನಿಂತುಕೊಂಡನು.

ಹೀಗೆ ರಾಯನು ಸಮರಸನ್ನಾಹಗೊಂಡು, ಒಂದು ಶುಭದಿನ, ಶುಭಲಗ್ನದಲ್ಲಿ ತನ್ನ ಅಪಾರ ಸೇನಾಂಬುಧಿಯೊಂದಿಗೆ, ಹೊರಟನು.

ಮೊದಲು ರಾಯನ ದೃಷ್ಟಿ ಬಿಜಾಪುರದ ಸುಲ್ತಾನನ ನಾಯಕತ್ವ ದಲ್ಲಿ. ಕೃಷ್ಣೆಯ ದಂಡೆಯಲ್ಲಿ ಬೀಡು ಬಿಟ್ಟಿದ್ದ ಮುಹಮದೀಯರ ಸೈನ್ಯದ ಮೇಲೆ ಬಿತ್ತು. ಅವರನ್ನು ಕೂಡಿಕೊಳ್ಳಲು ಗಜಪತಿಯು ತನ್ನ ಸೇನೆ ಯೊಂದಿಗೆ ಬರುವ ಮೊದಲೇ ಆ ಮುಹಮದೀಯ ಸೈನ್ಯವನ್ನು ಸೋಲಿಸ

ಬೇಕೆಂಬುದು ರಾಯನ ಆಲೋಚನೆಯಾಗಿತ್ತು. ಇಬ್ಬರ ಸೈನ್ಯಗಳು ಒಟ್ಟಾದರೆ, ಅವರನ್ನು ಸೋಲಿಸುವುದು ಕಠಿಣವಾಗುವುದೆಂದು, ಗಜಪತಿಯ ನೆರವು ದೊರೆಯುವ ಮೊದಲೇ ಮಹಮದೀಯ ಸೈನ್ಯವನ್ನು ಸದೆಬಡಿಯ ಬೇಕೆಂದೇ ರಾಯನ ಹಂಚಿಕೆ. ಅದರಂತೆ, ತನ್ನ ಸೈನ್ಯದೊಂದಿಗೆ ಹೊರಟು, ಶತ್ರುಗಳ ಗಡಿ ಸೀಮೆಯಲ್ಲಿ ಮುವತ್ತು ಮೈಲಿಗಳಷ್ಟು ಒಳಹೊಕ್ಕು, ಅಲ್ಲಿ ಶತ್ರುಗಳಿಗೆ ಯಾವ ಬಗೆಯ ಹಸು, ಆಡು, ಕುರಿ, ಕೋಳಿಗಳೂ ದೊರೆಯ ದಂತೆ ಮಾಡಿ ಎಲ್ಲವನ್ನು ಕ್ರಯಕ್ಕೆ ಕೊಳ್ಳಲಾಯಿತು. ಇದರಿಂದ ಶತ್ರು ಗಳಿಗೆ ಆಹಾರ ಸರಬರಾಜು ಆಗಲು ತುಂಬಾ ತೊಂದರೆಯಾಯಿತು.

ಬಿಜಾಪುರ, ಅಹಮದ್‌ನಗರ, ಬಿದರೆ ಮತ್ತು ಗೋಲ್ಕಂಡಗಳ ಸುಲ್ತಾನರು ತಮ್ಮ ಸಕಲ ಬಲಗಳೊಂದಿಗೆ ಕೃಷ್ಣೆಯ ತೀರದಲ್ಲಿ ಬೀಡು ಬಿಟ್ಟಿದ್ದರು. ಅದರ ಬಳಿಯಲ್ಲಿ ಹತ್ತುಸಾವಿರ ಕುದುರೆಗಳೂ ಒಂದು ಸಾವಿರ ಆನೆಗಳೂ ಇದ್ದವು.

ರಾಯನು ತನ್ನ ಸೈನ್ಯದೊಂದಿಗೆ ಕೃಷ್ಣೆಯ ಇನ್ನೊಂದು ದಡದಲ್ಲಿ ಬಂದಿಳಿದನು.

ಕೃಷ್ಣೆಯ ತೀರದುದ್ದಕ್ಕೂ ಬೀಡುಬಿಟ್ಟಿದ್ದ ಅಸಂಖ್ಯಾತ ಸೈನಿಕ ಶಿಬಿರವನ್ನು ಕಂಡು ಹೇಗಾದರೂ ಮಾಡಿ ಉಪಾಯಾಂತರವಾಗಿ, ಅವರನ್ನು ಸೋಲಿಸಿ ಓಡಿಸಬೇಕೆಂದು ರಾಯನು ಆಲೋಚಿಸಿದನು. ಈ ಕಾರ್ಯಕ್ಕೆ ಪೆಮ್ಮಸಾನಿ ರಾಮಲಿಂಗನೆಂಬ ಆಂಧ್ರ ವೀರನನ್ನು ನಿಯೋಜಿಸಿದನು.

ಅವನು ತನ್ನ ಎಂಟು ಸಾವಿರ ವೀರಭಟರೊಂದಿಗೆ ಹೊರಟನು. ಪೆಮ್ಮಸಾನಿ ರಾಮಲಿಂಗನಿಗೆ ನಿಸರ್ಗವೂ ಅನುಕೂಲವಾಗಿತ್ತು.

ಮಳೆಗಾಲವಾದುದರಿಂದ ಕೃಷ್ಣೆಯು ಪೂರ್ಣಪ್ರವಾಹದಲ್ಲಿದ್ದಳು. ಅಂದು ಕೃಷ್ಣಪಕ್ಷದ ಕಗ್ಗತ್ತಲೆಯ ರಾತ್ರಿ. ನಕ್ಷತ್ರಗಳ ಮಿಣುಕು ಬೆಳಕಲ್ಲದೆ ಬೇರೆ ಬೆಳಕಿಲ್ಲ. ಇಂತಹ ಅವೇಳೆಯಲ್ಲಿ ರಾಮಲಿಂಗನು ತನ್ನ ದಂಡಿ ನೊಡನೆ ಬಂದು, ನಿದ್ರೆಯಲ್ಲಿ ಮೈಮರೆತಿದ್ದ ಶತ್ರುಗಳ ಮೇಲೆ ಬಿದ್ದನು. ಶತ್ರುಗಳು ಧಾಳಿಯನ್ನು ಇಷ್ಟು ಹಠಾತ್ತಾಗಿ ನಿರೀಕ್ಷಿಸಿರಲಿಲ್ಲ. ಅಂತಲೇ ಅವರು ಯುದ್ಧಸನ್ನದ್ಧರಾಗಿರಲಿಲ್ಲ. ಶತ್ರುಗಳು ತಮ್ಮಮೇಲೆ ಬಿದ್ದಮೇಲೆ ಒಮ್ಮೆಲೇ ಎಚ್ಚೆತ್ತುಕೊಂಡು ಶಸ್ತ್ರಾಸ್ತ್ರಗಳನ್ನು ಧರಿಸಿ ಶತ್ರುಗಳ ಮೇಲೆ

ಬೀಳುವುದರೊಳಗಾಗಿ, ಪಾಳೆಯದ ಎಲ್ಲಾ ಗುಡಾರಗಳ ಹಗ್ಗಗಳನ್ನು ಕತ್ತರಿಸಿಹಾಕಿ, ಅವುಗಳನ್ನು ಅಗ್ನಿನಾರಾಯಣನಿಗೆ ಆಹುತಿ ಕೊಡಲಾಗಿತ್ತು. ಈ ಸಂಕೇತವನ್ನು ಅರಿತು ನಿಯೋಜಿಸಿದ್ದ ಕಾರ್ಯಕ್ರಮದಂತೆ ಕೃಷ್ಣದೇವರಾಯನು ಸೈನ್ಯಸಮೇತ ಬಂದು, ಅಸ್ತವ್ಯಸ್ತವಾಗಿದ್ದ ಮಹಮ್ಮದೀಯ ಸೈನ್ಯದಮೇಲೆ ಬಿದ್ದಿತು. ರಾತ್ರಿಯ ಆಕಸ್ಮಿಕ ಧಾಳಿಯಿಂದ ದಿಕ್ಕುಗೆಟ್ಟ ಸುಲ್ತಾನರ ಸೈನಿಕರು ಶತ್ರುಧಾಳಿಯನ್ನು ಎದುರಿಸಲಾರದೆ ಚಲ್ಲಾಪಿಲ್ಲಿಯಾಗಿ ಓಡಿಹೋದರು. ಒಂದು ದಿಕ್ಕಿಗೆ ನದಿಯ ವಿಶಾಲವಾದ ಪ್ರವಾಹ. ಮತ್ತೆ ಮೂರು ದಿಕ್ಕಿನಿಂದ ಒತ್ತಿ ಬರುವ ರಾಯನ ಸೈನ್ಯ. ಅದರ ಹೊಡೆತವನ್ನು ತಡೆಯಲಾರದೆ, ಹತಾಶರಾಗಿ, ಸೈನಿಕರು ಪ್ರಾಣ ಉಳಿಸಿಕೊಳ್ಳಲು ನದಿಯ ನೀರಿಗೆ ಹಾರಿದರು. ನೀರಿಗಿಳಿದ ಸಮರದಾನೆಗಳು ಅವರನ್ನು ತಪ್ಪಿಸಿಕೊಂಡು ಹೋಗಲು ಬಿಡಲಿಲ್ಲ. ನೀರಿಗೆ ಬಿದ್ದ ಸೈನಿಕರು ಮತ್ತೆ ದಡಕ್ಕೆ ಈಜಿದರು. ಈ ಪ್ರಯತ್ನದಲ್ಲಿ ತೊಡಗಿರುವಾಗ ಆನೆಗಳಿಗೆ ಸಿಕ್ಕಿ, ಪ್ರವಾಹಕ್ಕೆ ಸಿಕ್ಕಿ, ಮಡಿದವರು ಅನೇಕಮಂದಿ. ಹೀಗಾಗಿ ಕೇವಲ ಮೂರನೆಯ ಒಂದು ಪಾಲು ಸೈನ್ಯ ಪ್ರಾಣ ಉಳಿಸಿಕೊಂಡರು. ಯುದ್ಧದಲ್ಲಿ ಸುಲ್ತಾನರ ಕಡೆಯ ನಾಲ್ಕುಸಾವಿರ ಕುದುರೆಗಳೂ, ಅನೇಕ ಆನೆಗಳೂ ಮಡಿದವು. ಉಳಿದ ಸೈನ್ಯವು ರಾಯನಿಗೆ ಶರಣಾಗತವಾಯಿತು. ಶತ್ರು ಶಿಬಿರದಲ್ಲಿದ್ದ ಯುದ್ಧ ಸಾಮಗ್ರಿಗಳೂ, ಆಹಾರ ಪದಾರ್ಥಗಳೂ ರಾಯನ ವಶವಾದವು.

ಮರುದಿನ ರಾಯನು ತನಗೆ ಈ ದಿಗ್ವಿಜಯವನ್ನು ಸಂಪಾದಿಸಿಕೊಟ್ಟ ಪೆಮ್ಮಸಾನಿ ರಾಮಲಿಂಗನನ್ನು ವೈಭವ ರೀತಿಯಲ್ಲಿ ಸನ್ಮಾನ ಮಾಡಿ ಅನೇಕ ಬಹುಮಾನಗಳನ್ನು ಕೊಟ್ಟು ಸನ್ಮಾನಿಸಿದನು. ಆರಂಭದಲ್ಲಿ ದೊರೆತ ಈ ವಿಜಯ ಮುಂದಿನ ಎಲ್ಲ ವಿಜಯ ಯಾತ್ರೆಗಳಿಗೆ ನಾಂದಿಯಾಯಿತು.

೪

ಮಹಮದೀಯ ಸೈನ್ಯವನ್ನು ಕೃಷ್ಣೆಯ ದಂಡೆಯಲ್ಲಿ ಸಂಪೂರ್ಣವಾಗಿ ಸೋಲಿಸಿದಮೇಲೆ ಕೃಷ್ಣದೇವರಾಯನ ಗಮನ ಉತ್ಕಲದ ಕಡೆಗೆ ತಿರುಗಿತು. ಮೊದಲು ಪ್ರತಾಪರುದ್ರ ಗಜಪತಿಯ ಅಧೀನದಲ್ಲಿದ್ದ ಉದಯಗಿರಿ ಕೋಟೆಯನ್ನು ವಶಪಡಿಸಿಕೊಳ್ಳಲು ನಿರ್ಧರಿಸಿದನು.

ಉದಯಗಿರಿ ಹಿಂದಿನಿಂದಲೂ ವಿಜಯನಗರದ ಅರಸರಿಗೆ ಸೇರಿದ್ದ ಕೋಟೆ. ಸಾಳ್ವ ನರಸಿಂಹನ ಕಾಲದಲ್ಲಿ ಕೈಬಿಟ್ಟುಹೋಗಿದ್ದ ಈ ಕೋಟೆ ಇನ್ನೂ ಗಜಪತಿಯ ಸ್ವಾಧೀನದಲ್ಲೇ ಇತ್ತು. ಇದರಂತೆ ರಾಯಚೂರು, ಮುದ್ಗಲ್ಲುಗಳು ಸಹ ಬಿಜಾಪುರದ ಸುಲ್ತಾನರ ವಶದಲ್ಲಿತ್ತು. ಇವುಗಳನ್ನು ಮರಳಿ ಸಾಧಿಸುವ ಸಾಳ್ವ ನರಸಿಂಹನ ಆಶಯ ಅವನ ಕಾಲದಲ್ಲಿ ಈಡೇರದೆ ಹೋಗಿತ್ತು. ಅವನು ತನ್ನ ಮರಣ ಶಾಸನದಲ್ಲಿ ತನ್ನ ಆಶಯವನ್ನು ತಿಳಿಸಿ ತೀರಿಕೊಂಡಿದ್ದನು. ಅವನ ಕಡೆಯ ಇಚ್ಛೆಯನ್ನು ನೆರವೇರಿಸಿ, ಆ ಮೂಲಕ ತನ್ನ ಪೂರ್ವಜರ ಆತ್ಮಕ್ಕೆ ಶಾಂತಿಯನ್ನು ದೊರಕಿಸಿಕೊಡಬೇಕೆಂಬುದೇ ಕೃಷ್ಣದೇವರಾಯನ ಆಶಯವಾಗಿತ್ತು.

ಈ ಉದ್ದೇಶಸಾಧನೆಗಾಗಿಯೇ ಉದಯಗಿರಿಯ ಮೇಲೆ ಧಾಳಿಯಿಡಲು ಹೊರಟದ್ದು.

ಮಾರ್ಗಮಧ್ಯದಲ್ಲೇ ಗುಪ್ತಚಾರರು ವಾರ್ತೆಯನ್ನು ತಂದರು— ಬಹಮನಿ ಸುಲ್ತಾನರ ಸಹಾಯಕ್ಕೆಂದು ಹೊರಟು ಬಂದಿದ್ದ ಉತ್ಕಲದ ಗಜಪತಿಯು ಮಹಮದೀಯ ಸೈನ್ಯಕ್ಕಾದ ಪರಾಭವದ ಕಥೆಯನ್ನು ಕೇಳಿ ನಡುದಾರಿಯಲ್ಲೇ ಹೆದರಿ ಹಿಂದಿರುಗಿ, ಉದಯಗಿರಿಯ ರಕ್ಷಣೆಗೆ ಧಾವಿಸಿ

ದನಂತೆ. ಇದನ್ನು ಕೇಳಿ ರಾಯನ ಉತ್ಸಾಹ ಇಮ್ಮಡಿಸಿತು. ಆದರೆ ಉದಯಗಿರಿಯ ಒಳಗೆ ಬಂದಾಗ, ಗಜಪತಿಯು ತನ್ನ ಚಿಕ್ಕಪ್ಪನಾದ ತಿರುಮಲರಾಯನನ್ನು ದುರ್ಗರಕ್ಷಣೆಗೆ ಇಟ್ಟು ಕೊಂಡವೀಡ, ಕೊಂಡಪಲ್ಲಿಗಳ ರಕ್ಷಣೆಗೆ ಹೋಗಿರುವನೆಂಬ ಸುದ್ದಿಯನ್ನು ಕೇಳಿ ರಾಯನಿಗೆ ನಿರಾಶೆಯೇ ಆಯಿತು.

ಉದಯಗಿರಿಯ ಕೋಟೆ ಶತ್ರುಗಳಿಂದ ಭೇದಿಸಲಾಗದ ದುರ್ಭೇದವಾದ ಕೋಟೆಯಾಗಿತ್ತು. ಅದು ಬೆಟ್ಟದ ನೆತ್ತಿಯಲ್ಲಿ ಇದ್ದು ಹತ್ತಲು ತುಂಬಾ ಕಡಿದಾಗಿತ್ತು. ಹೊರಗನ ಕಲ್ಲಿನ ಕೋಟೆಯ ಜತೆಗೆ ಒಳಗೆ ಬೇರೊಂದು ಕೋಟೆಯೂ ಇತ್ತು. ಕೋಡುಗಲ್ಲುಗಳಮೇಲೆ ನಿಂತಿದ್ದ ಅದನ್ನು ಸಮೀಪಿಸುವುದೇ ಕಠಿಣವಾಗಿ, ಮುತ್ತಿ ವಶಪಡಿಸಿಕೊಳ್ಳುವುದು ಸಾಹಸದ ಮಾತಾಗಿತ್ತು. ಉದಯಗಿರಿ ಕೋಟೆಯಲ್ಲಿ ಶತ್ರುಗಳ ಧಾಳಿಯನ್ನು ಬಹುಕಾಲ ತಡೆಯಲು ಅನುಕೂಲವಾಗುವಂತೆ ಯಥೇಚ್ಛವಾದ ಆಹಾರಸಾಮಗ್ರಿಗಳೂ, ನೀರಿನ ಅನುಕೂಲವೂ, ಶಸ್ತ್ರಾಸ್ತ್ರಗಳ ಸಂಗ್ರಹವೂ ಇದ್ದವು. ಅಲ್ಲದೆ ದುರ್ಗರಕ್ಷಣೆಗಾಗಿ ಹತ್ತುಸಾವಿರ ಪದಾತಿಗಳೂ, ನಾಲ್ಕುಸಾವಿರ ಕುದುರೆಗಳೂ ಇದ್ದವು.

ಕೃಷ್ಣದೇವರಾಯನು ತನ್ನ ಮುವತ್ತುನಾಲ್ಕುಸಾವಿರ ಪದಾತಿ ಸೈನ್ಯದೊಂದಿಗೆ, ಎಂಟುನೂರು ಯುದ್ಧದಾನೆಗಳೊಂದಿಗೆ, ಉದಯಗಿರಿ ಕೋಟೆಯನ್ನು ಮುತ್ತಿದನು. ಆನೆಗಳಿಂದ ದುರ್ಗದ ಬಾಗಿಲುಗಳನ್ನು ಒಡೆಸಲು ನಡೆಸಿದ ರಾಯನ ಪ್ರಯತ್ನ ವಿಫಲವಾಯಿತು. ಕೋಟೆಯನ್ನು ಸಮೀಪಿಸಲು ಇದ್ದ ಒಂದೇ ಒಂದು ದಾರಿ, ತುಂಬಾ ಇಕ್ಕಟ್ಟಾಗಿದ್ದು, ಕಲ್ಲುಗುಂಡುಗಳ ನಡುವೆ ಹಾದುಹೋಗಿತ್ತು. ಈ ದಾರಿಯಲ್ಲಿ ಒಬ್ಬನು ಮಾತ್ರ ಪ್ರಯಾಸದಿಂದ ನುಸುಳಿಹೋಗಬಹುದಾಗಿತ್ತು. ಇದರಿಂದಾಗಿ ರಾಯನ ಆನೆಕುದುರೆಗಳು ಮುತ್ತಿಗೆಯಲ್ಲಿ ಯಾವ ಭಾಗವನ್ನು ವಹಿಸದಾದವು.

ಸುಮಾರು ಒಂದು ವರ್ಷ ದುರ್ಗಕ್ಕೆ ಮುತ್ತಿಗೆ ಹಾಕಿದರೂ ಅದರ ಒಂದು ಕಲ್ಲನ್ನು ಕದಲಿಸಲು ರಾಯನ ಸೈನಿಕರಿಂದ ಸಾಗಲಿಲ್ಲ. ಸೈನಿಕರಿಗೆ ಕೋಟೆಯ ಗೋಡೆಯನ್ನು ಸಮೀಪಿಸುವುದೇ ದುಸ್ತರವಾಗಿತ್ತು. ಕೋಟೆಯ ಮೇಲಿಂದ ಶತ್ರುಸೈನಿಕರು ಸುರಿಯುತ್ತಿದ್ದ ಕಲ್ಲುಗುಂಡುಗಳ ಮಳೆಯನ್ನೂ,

ಕುದಿದ ತೈಲಗಳ ಕಾಟವನ್ನೂ, ಸಹಿಸದೆ ಎಲ್ಲರೂ ದುರ್ಗವನ್ನು ಸಮೀಪಿಸಲು ಹಿಂಜರಿಯುತ್ತಿದ್ದರು. ನೂಲೇಣಿಯಿಂದ ಕೋಟೆಯನ್ನೇರಲು ಮಾಡಿದ ಸಾಹಸವೂ ವಿಫಲವಾಗಿತ್ತು. ಈಗ ಇದ್ದ ಒಂದೇ ಒಂದು ದಾರಿ ಎಂದರೆ ದುರ್ಗವನ್ನು ಉಪವಾಸ ಕೆಡಹಿ. ತಾವಾಗಿ ಶರಣಾಗತವಾಗುವಂತೆ ಮಾಡುವುದು. ಇದಕ್ಕೆ ದೀರ್ಘಕಾಲ ಹಿಡಿಯುತ್ತಿತ್ತು. ಉದಯಗಿರಿ ದುರ್ಗವೊಂದನ್ನು ಸಾಧಿಸಲು ಇಷ್ಟು ದೀರ್ಘ ಅವಧಿ ಹಿಡಿದರೆ, ತಾವು ಉತ್ಕಲನನ್ನು ಗೆಲ್ಲುವುದಕ್ಕೆ ಇಡೀ ಆಯುಷ್ಯ ಮೀಸಲಾಗಿಡಬೇಕಾದೀತೆಂದು ರಾಯನು ಹೆದರಿದನು.

ಇಂತಹ ವಿಷಮಸ್ಥಿತಿಯಲ್ಲಿ ರಂಗಪತಿರಾಜ ಮುಂದೆ ಬಂದು, ತಾನು ಹೇಗಾದರೂ ಮಾಡಿ ಉದಯಗಿರಿಯನ್ನು ವಶಪಡಿಸಿಕೊಳ್ಳುವುದಾಗಿ ಹೇಳಿ ರಾಯನನ್ನು ಸಮಾಧಾನಗೊಳಿಸಿ. ಅಗ್ರವೀಳ್ಯವನ್ನು ಪಡೆದುಕೊಂಡನು.

ರಂಗಪತಿಯ ವಿಷಯದಲ್ಲಿ ರಾಯನಿಗೆ ಮೊದಲಿನಿಂದಲೂ ಅಭಿಮಾನವಿತ್ತು. ತನ್ನ ದಂಡಯಾತ್ರೆಯಲ್ಲಿ ರಂಗಪತಿರಾಜುವಿನಂತಹ ಶಕ್ತ ದಳಪತಿ ಜತೆಯಲ್ಲಿದ್ದರೆ ಇಮ್ಮಡಿ ಧೈರ್ಯ ಬರುವುದೆಂದು ತನ್ನ ಆಶ್ರಿತನಾಗಿದ್ದ ಪೆಮ್ಮಸಾನಿ ತಿಮ್ಮನಾಯಿಡುವಿಗೆ ಪತ್ರ ಬರೆದು ರಾಯನೇ ಅವನನ್ನು ಕರೆಸಿಕೊಂಡಿದ್ದನು.



ರಂಗಪತಿರಾಜುವಿನ ಬಗ್ಗೆ ರಾಯನಿಗೆ ಇಷ್ಟು ಅಭಿಮಾನ ಗೌರವಗಳು ಉಂಟಾಗಲು, ಹಿಂದೊಮ್ಮೆ ರಾಜಸಭೆಯಲ್ಲಿ ಅವನು ಪ್ರದರ್ಶಿಸಿದ ಧೈರ್ಯ ಸಾಹಸಗಳೇ ಕಾರಣವಾಗಿತ್ತು.

ಒಮ್ಮೆ ಕೃಷ್ಣದೇವರಾಯನು ಆಸ್ಥಾನದಲ್ಲಿ ಓಲಗ ಕೊಟ್ಟಿರುವಾಗ, ಮದಿಸಿದ ಸಲಗವೊಂದಕ್ಕೆ ಹುಚ್ಚುಹಿಡಿದು, ಮಾವಟಿಗನ ಅಂಕೆಯಿಂದ ತಪ್ಪಿಸಿಕೊಂಡು ಬಂದು ಅರಮನೆಯ ಕಡೆಗೆ ನುಗ್ಗಿ, ಕಾಲಿಗೆ ಸಿಕ್ಕಿದವರನ್ನು ತುಳಿದು, ತುಂಬಾ ಹಾವಳಿ ಮಾಡಿತು. ರಾಜಭಟರೂ, ಆಸ್ಥಾನಿಕರೂ ಹುಚ್ಚುಹಿಡಿದ ಮದಕರಿಯ ರಣಗರ್ಜನೆಗೆ ಹೆದರಿ, ಪ್ರಾಣ ಉಳಿಸಿಕೊಳ್ಳಲು ದಿಕ್ಕಾಪಾಲಾಗಿ ಚದುರಿದರು. ಅದನ್ನು ಧೈರ್ಯವಾಗಿ ಎದುರಿಸಬಲ್ಲ ವೀರನೇ ಇಲ್ಲವಾಯಿತು. ಅಂತಹ ಹೊತ್ತಿನಲ್ಲಿ ಆಸ್ಥಾನದಲ್ಲಿದ್ದ ರಂಗಪತಿರಾಜು ಧೈರ್ಯವಾಗಿ ಆನೆಯಕಡೆಗೆ ನುಗ್ಗಿ ಅವನ್ನು ಹತೋಟಿಗೆ ತರಲು

ಪ್ರಯತ್ನಿಸಿದನು. ಅವನ ಪ್ರಯತ್ನ ವಿಫಲವಾಯಿತು. ಬುದ್ಧಿಗೆಟ್ಟಿದ್ದ ಆ ಆನೆ ಕೈಗೆ ಸಿಕ್ಕಿದವರನ್ನು ಕೊಲ್ಲುತ್ತಿತ್ತು. ಅದನ್ನು ಸುಮ್ಮನೆ ಬಿಟ್ಟರೆ ವೃಥಾ ಪ್ರಾಣಹಾನಿಯಾಗುವುದೆಂದು ಅದನ್ನು ಕೊಲ್ಲಲು ರಂಗಪತಿರಾಜು ನಿರ್ಧರಿಸಿದನು.

ದೈತ್ಯಾಕಾರವಾಗಿ, ಕೆರಳಿನಿಂತ ಆ ಸಲಗವನ್ನು ಕೊಲ್ಲುವುದು ಸುಲಭವಾಗಿರಲಿಲ್ಲ. ಅದರ ಕಾಲಿಗೆ ಸಿಕ್ಕಿಕೊಳ್ಳದೆ, ಸೊಂಡಲಿಗೆ ಬಲಿಯಾಗದೆ, ಉಪಾಯಾಂತರವಾಗಿ ಅದರ ಬಳಿ ಸಾರಿ ತನ್ನ ಕತ್ತಿಯನ್ನು ಒರೆಯಿಂದ ಸೆಳೆದು ಅದಕ್ಕೆ ಸೊಂಡಿಲನ್ನು ತುಂಡರಿಸಿ ಕೆಡಹಿ ಅದರಮೇಲೆ ಚಿಮ್ಮಿ ನೆಗೆದು ಕುಳಿತುಕೊಂಡು, ಫಾಲಪ್ರದೇಶದಲ್ಲಿ ಗಾಯಗೊಳಿಸಿ, ಅದನ್ನು ಯಮಲೋಕಕ್ಕೆ ಅಟ್ಟಿದನು. ಆನೆಯು ಮೊದಲು ನೋವಿನಿಂದ ಚೀರುತ್ತಿದ್ದು, ಅನಂತರ ರಕ್ತದ ಮಡುವಿನಲ್ಲಿ ಬೆಟ್ಟದಂತೆ ಬಿದ್ದು ಪ್ರಾಣವನ್ನು ಬಿಟ್ಟಿತು. ಈ ಸಾಹಸ ಪ್ರದರ್ಶನವನ್ನು ಕಣ್ಣಾರ ಕಂಡಿದ್ದ ಕೃಷ್ಣದೇವರಾಯನು ಮೈಯೆಲ್ಲಾ ಗಾಯಗೊಂಡಿದ್ದ ರಂಗಪತಿರಾಜುವನ್ನು ಒಳಗೆ ಬರಮಾಡಿಕೊಂಡು, ಅವನನ್ನ ವೀರೋಚಿತವಾಗಿ ಸನ್ಮಾನಿಸಿ ಅನೇಕ ಬಿರುದುಗಳನ್ನೂ, ಅಮೂಲ್ಯವಾದ ನವರತ್ನಖಚಿತವಾದ ಖಡ್ಗವನ್ನು ಕೊಟ್ಟು ವೀರಪೂಜೆ ಮಾಡಿದನು. ಅಂದಿನಿಂದ ರಂಗಪತಿರಾಜುವಿನ ಖ್ಯಾತಿ ಸಾಮ್ರಾಜ್ಯದ ಮನೆಗಳಲ್ಲಿ ಮನೆಮಾತಾಗಿತ್ತು.

ಇಂದು ರಂಗಪತಿರಾಜುವು ಉದಯಗಿರಿಯನ್ನು ಹೇಗಾದರೂ ಮಾಡಿ ಜಯಿಸಿಸಲು ನಿಶ್ಚಯಿಸಿ, ರಾಯನಿಂದ ಅಗ್ರತಾಂಬೂಲವನ್ನು ಪಡೆದ ಮೇಲೆ ಉದಯಗಿರಿ ಇನ್ನು ತಮ್ಮದಾಯಿತೆಂದು ಉಳಿದ ಸೈನಿಕರು ತಿಳಿದರು. ರಂಗಪತಿರಾಜುವಿನ ಶಕ್ತಿಸಾಮರ್ಥ್ಯಗಳ ಬಗ್ಗೆ ಸೈನಿಕರಿಗೆ ಅಷ್ಟು ನಂಬಿಕೆ ಇತ್ತು.

ರಂಗಪತಿರಾಜುವು ರಾಯನಿಂದ ಅಗ್ರತಾಂಬೂಲವನ್ನು ತೆಗೆದುಕೊಳ್ಳುವಾಗ ತುಂಬಾ ಹುರುಪಿನಲ್ಲಿ ಇದ್ದನು. ಉದಯಗಿರಿಯನ್ನು ಗೆದ್ದು ತರುವ ಜವಾಬ್ದಾರಿಯನ್ನು ವಹಿಸಿಕೊಂಡಮೇಲೆ ಇದು ತನ್ನ ಶಕ್ತಿ ಸಾಮರ್ಥ್ಯಗಳ ಅಗ್ನಿಪರೀಕ್ಷೆ ಎಂದುಕೊಂಡನು. ಸ್ವಯಂ ಕೃಷ್ಣದೇವರಾಯನಿಂದ ಕಳೆದ ಒಂದು ವರ್ಷದಿಂದಲೂ ಸಾಧ್ಯವಾಗದೆ ಇದ್ದ ಈ ಕಾರ್ಯ

ಇನ್ನಷ್ಟು ಗುರುತರವಾಗಿ ಭಾಸವಾಯಿತು. ಈ ವಿಷಯವನ್ನು ತನ್ನ ಗೆಳೆಯರೊಂದಿಗೆ ಚನ್ನಾಗಿ ಚರ್ಚಿಸಿ ಅನಂತರ ಕೈಗೊಳ್ಳಬೇಕಾದ ಕಾರ್ಯ ಕ್ರಮವನ್ನು ನಿರ್ಧರಿಸಲು ಧನಂಜಯನ ಶಿಬಿರಕ್ಕೆ ಬಂದನು. ಅಲ್ಲಿ ಅವ ರಿಬ್ಬರು ಕಲೆತು ಬಹಳ ಹೊತ್ತು ಮಾತನಾಡಿಕೊಂಡು ಹೊರಗೆ ಆ ಶಿಬಿರದ ಬಳಿ ಅಸಾಧ್ಯವಾದ ಜನಸಂದಣಿ ಇರುವುದು ಕಾಣಿಸಿತು. ಅದೇನೆಂದು ನೋಡಲು ಗೆಳೆಯರಿಬ್ಬರು ಅಲ್ಲಿಗೆ ಐತಂದರು.

ಅಲ್ಲಿ ಒಬ್ಬ ಅಗಸರವನು ಶಾಸ್ತ್ರ ಹೇಳುತ್ತಾ ಕುಳಿತಿದ್ದನು. ಅವನು ದೇವಿಯ ಉಪಾಸಕನಂತೆ. ಅವನನ್ನು ನೋಡಿದರೆ ಶಾಕ್ತನಂತೆ ಕಾಣಿಸು ತ್ತಿದ್ದನು. ಹಣೆಯಲ್ಲಿ ದೊಡ್ಡದಾದ ಕುಂಕುಮದ ಬಟ್ಟು, ಜಡೆ ಕಟ್ಟಿದ ತಲೆ ಮತ್ತು ಗಡ್ಡಗಳು, ಕೊರಳಿಗೆ ಕೆಂಪು ಹೂಗಳ ಮಾಲೆ, ಕೈಗೆ ಕೆಂಪು ಮಣಿಗಳ ಸರ- ಅವನು ಅಮಲಿನಲ್ಲಿ ಇರುವವನಂತೆ ಅತಿ ತೆರೆದ ಕಣ್ಣಿ ನಿಂದ ತನ್ನ ಸುತ್ತಲೂ ನಿಂತಿದ್ದ ಜನ ಸಮುದಾಯವನ್ನು ನೋಡುತ್ತಿದ್ದನು. ಒಮ್ಮೊಮ್ಮೆ ಆವೇಶಗೊಂಡವನಂತೆ ತಲೆಯನ್ನು ಅಕ್ಕಪಕ್ಕಕ್ಕೆ ಕೊಡಹು ತ್ತಿದ್ದನು. ಅವನದು ವಿಚಿತ್ರವಾದ ಧ್ವನಿ. ಮಾತು ಅಸ್ಪಷ್ಟ. ಎರಡು ಮೂರು ಭಾಷೆಗಳನ್ನು ಬೆರಸಿ ಮಾತನಾಡುತ್ತಿದ್ದನು. ಅವನು ತ್ರಿಕಾಲ ಜ್ಞಾನಿಯಂತೆ. ಭೂತಭವಿಷ್ಯತ್ ವರ್ತಮಾನಗಳನ್ನು ಇದ್ದುದನ್ನು ಇದ್ದಂತೆ ಕೇವಲ ಕವಡೆಗಳ ಸಹಾಯದಿಂದ ಗುಣಿಸಿ ಹೇಳುತ್ತಿದ್ದನಂತೆ

ಸೈನಿಕರು ತಾವು ಮಾಡುತ್ತಿದ್ದ ಕೆಲಸವನ್ನೂ ಮರೆತು, ಆ ಅಗಸ ರವನು ಹೇಳುತ್ತಿದ್ದ ಭವಿಷ್ಯವನ್ನು ಆಲಿಸುತ್ತಾ ನಿಂತಿದ್ದರು.

ಸಾಮಾನ್ಯ ಸೈನಿಕರ ಉಡಿಗೆಯಲ್ಲಿ ನಿಂತಿದ್ದ ರಂಗಪತಿ ರಾಜುವನ್ನೂ ಧನಂಜಯನನ್ನೂ ಉಳಿದ ಸೈನಿಕರು ಅಷ್ಟಾಗಿ ಗಮನಿಸಲಿಲ್ಲ. ಇದರಿಂದ ಅವರಿಗೆ ಅನುಕೂಲವೇ ಆಯಿತು. ಇತರರಂತೆ ಅವರಿಗೂ ಕುತೂಹಲವಾಗಿ ತಮ್ಮ ಭವಿಷ್ಯವನ್ನು ತಿಳಿಯಲು ಆಸೆಪಟ್ಟರು.

ಧನಂಜಯನು ಆ ಅಗಸರವನನ್ನು ಪ್ರಶ್ನಿಸಿದನು.

" ಉದಯಗಿರಿಯು ಎಂದು ನಮ್ಮ ವಶವಾಗುತ್ತದೆ ? "

ಇದುವರೆಗೂ ಎಲ್ಲ ಸೈನಿಕರೂ ಕೇವಲ ವೈಯಕ್ತಿಕ ಪ್ರಶ್ನೆಗಳನ್ನೇ ಕೇಳಿದ್ದರು. ಈಗ ಇದ್ದಕ್ಕಿದ್ದಂತೆ ಈ ಗಹನವಾದ ಪ್ರಶ್ನೆಯನ್ನು ಕೇಳಿದ

ವರು ಯಾರೆಂದು ಅಗಸರವನು ಧನಂಜಯನ ಕಡೆ ನೋಡಿ, ಮುಗುಳು ನಕ್ಕನು. ಮರುಕ್ಷಣದಲ್ಲಿ ಕಣ್ಣುಮುಚ್ಚಿಕೊಂಡು ತನ್ನ ಆರಾಧ್ಯ ದೇವಿಯನ್ನು ಧ್ಯಾನಿಸಿ, ಅನಂತರ ಕಣ್ಣು ತೆರೆದು ಒಂದು ಸಂಖ್ಯೆಯನ್ನು ಹೇಳಲು ಕೋರಿದನು. ಧನಂಜಯನು ಬಂದು, ಸಮಸಂಖ್ಯೆಯನ್ನು ಹೇಳಿದನು. ಅಗಸರವನು ಕವಡೆಯನ್ನು ನೆಲದ ಮೇಲೆ ಹಾಕಿದಾಗ ಅದೇ ಸಮಸಂಖ್ಯೆ ಬಿದ್ದಿತ್ತು. ಆಗ ಅವನು ಆವೇಶಗೊಂಡು,

ಉದಯಗಿರಿ ನಿಮ್ಮದು ! ಕೊಂಡವೀಡು ನಿಮ್ಮದು !!

ಕೊಂಡಪಲ್ಲಿ ನಿಮ್ಮದು !!" ಎಂದು ಘೋಷಿಸಿದನು.

ಈ ಮಾತು ಕೇಳಿ ಧನಂಜಯನಿಗೆ ಎನಿಸಿತೋ ಅವನ ಬಾಯಿಂದ 'ಸುಳ್ಳು!' ಎಂಬ ಶಬ್ದ ಹೊರಗೆ ಬಂತು.

ಈ ಶಬ್ದ ಕೇಳಿ ಅಗಸರವನ ಕಿವಿ ನಿಮಿರಿ ನಿಂತವು. ಅವನು ದುರುಗುಟ್ಟುತ್ತಾ ಧನಂಜಯನ ಮುಖ ನೋಡಿ ಮತ್ತೆ ಹೇಳಿದನು.

"ಉದಯಗಿರಿ ನಿಮ್ಮದು, ಕೊಂಡವೀಡು ನಿಮ್ಮದು, ಕೊಂಡಪಲ್ಲಿ ನಿಮ್ಮದು."

"ನಿನ್ನ ಮಾತು ಸುಳ್ಳಾದರೆ?" ಧನಂಜಯ ಪ್ರಶ್ನಿಸಿದ.

"ದೈವವಾಣಿ ಎಂದಿಗೂ ಸುಳ್ಳಾಗದು" ಅಗಸರವನು ಉತ್ತರಿಸಿದ.

"ನಿನ್ನ ಮಾತೇ ದೈವವಾಣಿ ಎಂದು ಹೇಗೆ ನಂಬುವುದು?"

"ಹಾಗಾದರೆ ಈ ಅಕ್ಷತೆಯನ್ನು ಅಂಗೈಯಲ್ಲಿ ಇಟ್ಟುಕೊಂಡು, ಇನ್ನು ಕೊಂಚಕಾಲ ಬಿಟ್ಟುಕೊಂಡು ನೋಡಿದರೆ ಅದು ಕೆಂಪು ಬಣ್ಣಕ್ಕೆ ತಿರುಗಿದ್ದರೆ ನನ್ನ ಮಾತನ್ನು ನಿಜವೆಂದು ತಿಳಿಯಿರಿ. ಅದು ಮೊದಲಿನ ಬಣ್ಣದಲ್ಲೇ ಇದ್ದರೆ ಸುಳ್ಳೆಂದು ತಿಳಿಯಿರಿ!" ಎಂದು ಹೇಳಿ ತಟ್ಟೆಯಲ್ಲಿದ್ದ ಅರಿಶಿನದ ಬಣ್ಣದ ಅಕ್ಷತೆಯನ್ನು ತೆಗೆದು ಧನಂಜಯನ ಕೈಗೆ ಹಾಕಿದನು. ಧನಂಜಯನು ತೆಗೆದುಕೊಳ್ಳುವಾಗ ಅಕ್ಷತೆ ಅರಿಶಿನ ಬಣ್ಣದಲ್ಲಿ ಇತ್ತು. ಕೈಮುಚ್ಚಿ ಕೈ ತೆರೆದು ನೋಡುವುದರೊಳಗೆ ಅದು ಕೆಂಪುಬಣ್ಣಕ್ಕೆ ತಿರುಗಿತ್ತು. ಅಗಸರವನು ಹೇಳಿದ ಮಾತು ದೈವವಾಣಿ ಎನ್ನಲು ಇದಕ್ಕಿಂತ ಬೇರೆ ನಿದರ್ಶನ ಬೇಕಿರಲಿಲ್ಲ. ಇಷ್ಟಾದರೂ ಧನಂಜಯನಿಗೆ ಇನ್ನೂ ಅನುಮಾನ. ಅವನ ಅನುಮಾನವನ್ನು ಕಂಡುಕೊಂಡನೆಂಬಂತೆ ಅಗಸರವನು ಮತ್ತೆ ಹೇಳಿದ.

"ನನ್ನ ಮಾತನ್ನು ಯಾರಾದರೂ ತಿರಸ್ಕರಿಸಿದರೆ, ಇನ್ನೂ ಹೇಳುತ್ತೇವೆ ಕೇಳಿ. ಉದಯಗಿರಿ, ಕೊಂಡಪಲ್ಲಿ, ಕೊಂಡವೀಡು ಮಾತ್ರದಲ್ಲಿ ಇಡೀ ಉತ್ಕಲ ನಿಮ್ಮದಾಗುವುದು ಖಂಡಿತ ನಿಮ್ಮದಾಗುವುದು."

ಅಗಸರವನ ವಾಣಿ ದೈವವಾಣಿಯೇ ಆಗಿರಬಾರದೇಕೆ ಎಂದು ಉತ್ಕಲ ತಮ್ಮ ವಶವಾಗುವ ಭವಿಷ್ಯವನ್ನು ಕೇಳಿ ಆನಂದದಿಂದ ಪುಳಕಿತರಾಗಿ, ಜಯಕಾರಗಳನ್ನು ಮಾಡಿದರು. ಸೈನಿಕರ ಜಯಕಾರ ಕೇಳಿ, ರಂಗಪತಿರಾಜು, ಧನಂಜಯರಿಗೆ ಮೈ ರೋಮಾಂಚನಗೊಂಡಿತು. ದೈವ ತಮಗೆ ಸಹಾಯಕವಾಗಿರುವಾಗ ಇನ್ನು ಉದಯಗಿರಿ ತಮ್ಮ ವಶವಾದಂತೆಯೇ ಸರಿ ಎಂದು ಭಾವಿಸಿ ರಂಗಪತಿರಾಜು ಸಂತೋಷದಿಂದ ಅಲ್ಲಿಂದ ಹೊರಟುಹೋದನು.

ರಂಗಪತಿರಾಜುವಿನ ದೂರದ ಆಸೆ ಎಂದರೆ ಎಲ್ಲ ದುರ್ಗಗಳಿಗೆ ಇರುವಂತೆ ಉದಯಗಿರಿಗೂ ಒಂದು ಗುಪ್ತಮಾರ್ಗವಿದೆ; ಅದನ್ನು ಹೇಗಾದರೂ ಪತ್ತೆ ಮಾಡಿದರೆ, ಮುಂದಿನ ಕೆಲಸ ಸುಲಭವಾಗುವುದು ಎಂದು. ಆದರೆ ಈ ಗುಪ್ತ ಮಾರ್ಗವನ್ನು ಪತ್ತೆ ಮಾಡಲು ಇದುವರೆಗೆ ಯಾರಿಂದಲೂ ಸಾಧ್ಯವಾಗಿರಲಿಲ್ಲ. ಯಾರಿಂದಲೂ ಸಾಧ್ಯವಾಗದೆ ಇದ್ದ ಆ ಕಾರ್ಯವನ್ನು ತಾನು ಸಾಧಿಸಿ, ರಾಯನಿಗೆ ಕೊಟ್ಟಿದ್ದ ವಚನವನ್ನು ಪಾಲಿಸಿಕೊಳ್ಳಬೇಕೆಂದು ರಂಗಪತಿರಾಜು ನಿಶ್ಚಯಿಸಿ ವೇಷಾಂತರದಲ್ಲಿ ಗುಪ್ತದ್ವಾರದ ಶೋಧನೆಗೆ ಹೊರಟನು.

ಅವನು ದಿನವೆಲ್ಲಾ ಉದಯಗಿರಿಯ ಪ್ರತಿಯೊಂದು ಕಲ್ಲು ಗುಂಡುಗಳನ್ನು ಬಿಡದೆ ಹುಡುಕಿ. ಬಳಲಿ ಬೇಸತ್ತು ಮಾರ್ಗಾಯಾಸವನ್ನು ಪರಿಹರಿಸಿಕೊಳ್ಳಲು ಅಲ್ಲೇ ಇದ್ದ ಒಂದು ಹಾಳುಮಂಟಪಕ್ಕೆ ಬಂದು ಕುಳಿತುಕೊಂಡನು. ಅಲ್ಲಿ ತನ್ನೊಡನೆ ತಂದಿದ್ದ ಬುತ್ತಿಯನ್ನು ಬಿಚ್ಚಿ ಅಲ್ಲಿನ ಕಂಭವೊಂದಕ್ಕೆ ಒರಗಿಕೊಂಡು ಕುಳಿತುಕೊಂಡನು. ಹಾಗೇ ಆ ಮಂಟಪವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ, ಮಂಟಪದ ಒಂದು ದಿಕ್ಕಿನಲ್ಲಿ ಕೆಳಕ್ಕೆ ಇಳಿದುಕೊಂಡು ಹೋಗಲು ಪಾವಟಿಗೆಗಳು ಇರುವಂತೆ ಕಂಡಿತು. ಅದನ್ನು ನೋಡಿ ಕುತೂಹಲಗೊಂಡು. ಪಾವಟಿಗೆಗಳನ್ನು ಇಳಿದುಕೊಂಡು ಹೋದಾಗ, ಒಂದು ಗುಹೆಯ ದ್ವಾರ ಸಿಕ್ಕಿತು. ಅದರೊಳಗೆ ನುಸುಳಿ

ಮುಂದೆ ಹೋದಾಗ ಸ್ವಲ್ಪ ದೂರದಲ್ಲೇ ದೊಡ್ಡದೊಂದು ಬಂಡೆಯಮೇಲೆ ಕೆತ್ತಿದ ಆಂಜನೇಯನ ವಿಗ್ರಹವು ಕಣ್ಣಿಗೆ ಬಿತ್ತು. ಅಲ್ಲಿ ಯಾರೋ ವಾಸಿಸುತ್ತಿರುವುದರ ಕುರುಹಾಗಿ, ದೇವರಮುಂದೆ ಹಚ್ಚಿಟ್ಟದ್ದ ದೀಪ ಮಂದವಾಗಿ ಉರಿಯುತ್ತಿತ್ತು.

ರಂಗಪತಿರಾಜುವಿಗೆ ತುಂಬಾ ವಿಸ್ಮಯವಾಯಿತು. ಅವನು ಹಿಂದೊಮ್ಮೆ ಇದೇ ಕಲ್ಲುಮಂಟಪಕ್ಕೆ ಬಂದಿದ್ದ ನೆನಪಿತ್ತು. ಆಗ ಈ ಗುಹಾಂತರ್ದೇವಾಲಯವಿದ್ದಂತೆ ಕಾಣಲಿಲ್ಲ. ಬಹುಶಃ ಅದನ್ನು ಮಣ್ಣಿನಿಂದ ಮುಚ್ಚಿ ಮರೆಮಾಡಿದ್ದಿರಬೇಕು ಎಂದು ಊಹಿಸಿದನು. ಏಕೆಂದರೆ ಆ ಗುಹೆಯ ದ್ವಾರ ತುಂಬಾ ಕಿರಿದಾಗಿದ್ದು ಒಳಗೆ ಬಂದಂತೆ ವಿಶಾಲವಾಗಿತ್ತು. ಅಲ್ಲಿ ಜನಸಂಚಾರವಿದ್ದುದಾದರೆ, ಇತ್ತೀಚೆಗೆ ಯಾರೋ ಅಲ್ಲಿ ಬಂದು ವಾಸಿಸುತ್ತಿರಬೇಕು ಎಂದು ತರ್ಕಿಸಿ, ಆ ಗುಹೆಯಲ್ಲಿ ಎಲ್ಲಾದರೂ ಗುಪ್ತದ್ವಾರವಿದೆಯೇ ಎಂದು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದನು. ಎಲ್ಲೂ ಗುಪ್ತದ್ವಾರ ಇರುವ ಸೂಚನೆ ಕಾಣಲಿಲ್ಲ. ಅಷ್ಟರಲ್ಲಿ ಮಂಟಪದಲ್ಲಿ ಯಾರೋ ಬಂದ ಸಪ್ಪಳವಾಗಲು, ರಂಗಪತಿರಾಜು ಗುಹೆಯಿಂದ ಹೊರಗೆ ಬಂದು ನೋಡಿದನು. ಎದುರಿಗೆ ಒಬ್ಬ ಸನ್ಯಾಸಿಯು ನಿಂತಿದ್ದನು. ಅವನು ದೂರದ ಊರಿಗೆ ಭಿಕ್ಷಕ್ಕೆ ಹೋಗಿದ್ದವನು ಆಗಷ್ಟೇ ಹಿಂದಿರುಗುತ್ತಿದ್ದನೆಂದು ಬಿಸಿಲಿನಲ್ಲಿ ಬೆವರಿದ, ದಣಿದ ಅವನ ಮುಖವೇ ಹೇಳುತ್ತಿತ್ತು.

ಆ ಸನ್ಯಾಸಿಯನ್ನು ನೋಡಿ ರಂಗಪತಿರಾಜುವಿಗೆ ಕೌತುಕ ಉಂಟಾಯಿತು. ಅದನ್ನು ತೋರಗೊಡದೆ ಅವನು ಸನ್ಯಾಸಿಗೆ ನಮಸ್ಕಾರಮಾಡಿ, ನಿಂತುಕೊಂಡ. ಅವನ ಮುಖವನ್ನು ತೀಕ್ಷ್ಣವಾಗಿ ನೋಡಿ ಸನ್ಯಾಸಿಯು ಅಧಿಕಾರವಾಣಿಯಲ್ಲಿ ಪ್ರಶ್ನಿಸಿದ.

"ನೀವು ಯಾರು? ಇಲ್ಲಿಗೇಕೆ ಬಂದಿದ್ದೀರಿ?"

"ನಾನು ಒಬ್ಬ ಪ್ರಯಾಣಿಕ. ನಡುವೆ ಮಾರ್ಗಾಯಾಸವಾಗಿ, ದಣಿವಾರಿಸಿಕೊಳ್ಳಲು ಇಲ್ಲಿಗೆ ಬಂದೆ. ಇಲ್ಲಿ ಬಂದು ಮಾರುತಿಯ ಗುಡಿ ಇದ್ದಂತೆ ಇತ್ತು. ನೋಡುತ್ತಾ ನಿಂತುಕೊಂಡೆ."

"ಏನು? ನೀವು ಪಾವಟಿಗೆಗಳನ್ನು ಇಳಿದು ಒಳಗೆ ಹೋಗಿದ್ದಿರಾ?"

"ಹೌದು?"

"ನಿಮ್ಮ ಅದೃಷ್ಟ ಒಳ್ಳೆಯದು ಅಂತಲೇ ಬದುಕಿ ಹಿಂದಿರುಗಿ ಬಂದಿದ್ದೀರಿ!"

"ಏಕೆ?"

"ಅಲ್ಲಿ ಒಬ್ಬ ತಪಸ್ವಿಗಳು ತಪಸ್ಸುಮಾಡುತ್ತಾ ಕುಳಿತಿದ್ದಾರೆ. ಅವರು ಮಹಾಮಹಿಮರು, ತ್ರಿಕಾಲಜ್ಞಾನಿಗಳು, ಆದರೆ ತುಂಬಾ ಮುಂಗೋಪಿಗಳು. ತಮ್ಮ ಅಪ್ಪಣೆ ಇಲ್ಲದೆ ಒಳಗೆ ಬಂದವರನ್ನೂ, ತಮ್ಮ ತಪಸ್ಸಿಗೆ ಭಂಗ ತಂದವರನ್ನೂ ಅವರು ಒಮ್ಮೆ ದುರುಗುಟ್ಟಿ ನೋಡಿದರೆ, ಅವರ ಕಥೆ ಪೂರೈಸಿದಂತೆಯೇ ಸರಿ. ಅವರು ಶಾಪಾನುಗ್ರಹಶಕ್ತಿಯುಳ್ಳವರು— ಸಾಕ್ಷಾತ್ ಪರಶಿವನ ಅವತಾರಿಗಳು, ಅಂತಹವರನ್ನು ನೀವು ನೋಡಲು ಹೋಗಿದ್ದಿರಲ್ಲ? ನಿಮ್ಮ ಪುಣ್ಯ ದೊಡ್ಡದು! ಬದುಕಿ ಬಂದಿರಿ! ಇಲ್ಲದೆ ಇದ್ದರೆ ಆ ಗುಹೆಯಲ್ಲೇ ನಿಮ್ಮ ಸಮಾಧಿಯಾಗುತ್ತಿತ್ತು!"

"ನಾನು ನೋಡಿದಂತೆ ಆ ಗುಹೆಯಲ್ಲಿ ಯಾವ ತಪಸ್ವಿಗಳೂ ಇರಲಿಲ್ಲ!" ರಂಗಪತಿ ಅನುಮಾನಿಸಿದ.

"ನೀವು ಸರಿಯಾಗಿ ನೋಡಲಿಲ್ಲವೆಂದು ಕಾಣುತ್ತೆ. ಅವರು ಗುಹೆಯನ್ನು ಬಿಟ್ಟು ಹೊರಗೆಲ್ಲಿಯೂ ಹೋಗುವುದಿಲ್ಲ!" ಎಂದು ಹೇಳಿದನು. ಅಷ್ಟರಲ್ಲಿ ಆ ಗುಹೆಯ ಒಳಗಡೆಯಿಂದ 'ಶಿವಶಿವಾ! ಶಂಭೋ ಶಂಕರಾ!' ಎಂದು ಯಾರೋ ಹೇಳಿದಂತೆ ಆಯಿತು.

"ಅಗೋ ನೋಡಿ; ಗುರುಗಳು ಬಹಿರ್ಮುಖರಾಗುತ್ತಿದ್ದಾರೆ, ಅವರ ಕಣ್ಣೆದುರಿಗೆ ನೀವು ಇರಬೇಡಿ. ನಿಮಗೆ ಕೆಡುಕುಂಟಾಗುತ್ತದೆ. ನಿಮಗೆ ಪ್ರಾಣದಮೇಲೆ ಆಸೆ ಇದ್ದರೆ ಮೊದಲು ಇಲ್ಲಿಂದ ಹೊರಟುಹೋಗಿ!" ಎಂದು ಎಚ್ಚರಿಸಿದನು.

ರಂಗಪತಿರಾಜುವಿಗೆ ಮೇಲಿಂದಮೇಲೆ ಆಶ್ಚರ್ಯ! ಗುಹೆಯ ಒಳಗೆಲ್ಲ ಅವನು ಕೂಲಂಕುಷವಾಗಿ ಶೋಧಿಸಿದ್ದ. ಅಲ್ಲಿ ಯಾವ ವ್ಯಕ್ತಿಯೂ ಇರಲಿಲ್ಲ. ಈಗ ಆ ಗುಹೆಯುಲ್ಲಿ ಯಾರೋ ಇರುವಂತೆ ಇದೆ, ಅವರು ಅಲ್ಲಿಗೆ ಹೇಗೆ ಬಂದಿರಬೇಕು? ಬಹುಶಃ ಅಲ್ಲಿ ಎಲ್ಲಿಯೋ ಗುಪ್ತಮಾರ್ಗವಿದ್ದು, ದುರ್ಗದೊಳಗೆ ಹೋಗಿ ಬರಲು ಅನುಕೂಲವಿರಬೇಕು ಅಂತೂ

ಇದು ಕೌತುಕವಾಗಿದೆ! ಇದರ ತಳವನ್ನು ಶೋಧಿಸಿಯೇ ತೀರಬೇಕು ಎಂದು ತನ್ನಲ್ಲೇ ನಿರ್ಧರಿಸಿ, ಆ ಸನ್ಯಾಸಿಯ ಮಾತಿನಿಂದ ಹೆದರಿದವನಂತೆ ನಟಿಸುತ್ತಾ, ಅವನು ಆ ಮಂಟಪವನ್ನು ಬಿಟ್ಟು ಹೊರಟುಹೋದನು. ಕೊಂಚ ದೂರ ಹೋಗಿ ಗಿಡ ಮರಗಳ ಮರೆಯಲ್ಲಿ ಅಡಗಿದ್ದು ಆ ಮಂಟಪ ದಲ್ಲಿ ನಡೆಯುವ ವಿದ್ಯಮಾನಗಳನ್ನು ಈಕ್ಷಿಸುತ್ತಾ ಕುಳಿತನು.

ರಂಗಪತಿರಾಜುವಿನ ನಿರೀಕ್ಷೆ ವ್ಯರ್ಥವಾಗಲಿಲ್ಲ. ಆ ಮಂಟಪದ ಗುಹೆಯಲ್ಲಿ ಒಂದು ಗುಪ್ತದ್ವಾರವಿದ್ದು, ದುರ್ಗದಮೇಲಕ್ಕೆ ಸಂಬಂಧವನ್ನು ಕಲ್ಪಿಸಿತ್ತು. ಆ ಬಾಗಿಲನ್ನು ಇದುವರೆಗೆ ಮುಚ್ಚಲಾಗಿದ್ದು, ಈಗ ಉಪ ಯೋಗಿಸಿಕೊಳ್ಳಲಾಗಿತ್ತು. ಬಹುಶಃ ದುರ್ಗದಮೇಲೆ ನೀರು ಮುಗಿದು ಹೋಗಿರಬೇಕು, ಇಲ್ಲವೇ ಅಹಾರ ಸಾಮಗ್ರಿಗಳು ತೀರಿಕೊಂಡಿರಬೇಕು— ಅಂತಲೇ ಈ ಗುಪ್ತದ್ವಾರವನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ—ಎಂದು ರಂಗಪತಿರಾಜು ಊಹಿಸಿದ್ದನು. ಅವನ ಊಹೆ ನಿಜವಾಗಿತ್ತು.

ಮಧ್ಯರಾತ್ರಿಯ ವೇಳೆಗೆ ನೂರಾರು ಜನ ಸೈನಿಕರು ಈ ಗುಪ್ತ ದ್ವಾರದ ಮೂಲಕ ಹೊರಗೆ ಬಂದು, ಸಮೀಪದ ಕೊಳದಿಂದ ನೀರನ್ನು ಹೊತ್ತುಕೊಂಡು ಹೋಗುವುದನ್ನು ರಂಗಪತಿರಾಜು ಕಣ್ಣಾರ ಕಂಡನು. ಅವನಿಗೆ ಯಾವ ಸಂಶಯವೂ ಉಳಿಯಲಿಲ್ಲ ಈಗ. ಕಡೆಗೂ ತಾನು ಪಟ್ಟ ಶ್ರಮ ನಿರರ್ಥಕವಾಗಲಿಲ್ಲವೆಂದು ಸಂತೋಷವಾಯಿತು. ಅವನು ಆ ರಾತ್ರಿಯನ್ನು ಅಲ್ಲಿ ಹೇಗೆ ಕಳೆದನೋ! ಬೆಳಗಾಗುವ ಮೊದಲೇ ಅವನು ಶಿಬಿರಕ್ಕೆ ಓಡಿಬಂದು ತನ್ನ ಶೋಧನೆಯನ್ನು ತನ್ನ ಗೆಳೆಯರಿಗೆ ಹೇಳುವತನಕ ಅವನ ಮನಸ್ಸಿಗೆ ಸಮಾಧಾನವಾಗಲಿಲ್ಲ.

ಇನ್ನು ತಡಮಾಡಿದರೆ ಕಾರ್ಯ ಮಿಂಚಿಹೋದೀತೆಂದು ಹೆದರಿ ಕೂಡಲೇ ಧನಂಜಯನನ್ನು ತಕ್ಕ ಸೈನ್ಯದೊಂದಿಗೆ ಕೋಟೆಯ ಬಾಗಿಲಿಗೆ ಕಳುಹಿಸಿಕೊಟ್ಟು, ತನ್ನ ಅನುಚರರೊಂದಿಗೆ ಬಂದು ಆ ಮಂಟಪವನ್ನು ಮುತ್ತಿದನು. ಅಲ್ಲಿ ಕೈಸೆರೆ ಸಿಕ್ಕಿದ ಸನ್ಯಾಸಿಯಿಂದ ಗುಪ್ತದ್ವಾರದ ಮರ್ಮ ತಿಳಿದುಹೋಯಿತು. ಆಂಜನೇಯನ ಹಣೆಯಮೇಲಿನ ಬಟ್ಟಿನ ಮೇಲೆ ಬೆರಳಿಟ್ಟೊಡನೆಯೇ ವಿಗ್ರಹವನ್ನು ಕೆತ್ತಿದ್ದ ಬಂಡೆ ಪಕ್ಕಕ್ಕೆ ಸರಿದು, ಇಬ್ಬರು ಧಾರಾಳವಾಗಿ ನುಸುಳಿಹೋಗುವಂತಹ ಒಂದು ದ್ವಾರ ಉಂಟಾ

ಯಿತು. ಆ ದ್ವಾರದಲ್ಲಿ ಪ್ರವೇಶಿಸಿ, ಕತ್ತಲಾಗುವವರೆಗೆ ಕಾದಿದ್ದು, ಕತ್ತಲಾದೊಡನೆಯೇ ದುರ್ಗವನ್ನು ಪ್ರವೇಶಿಸಿಬಿಟ್ಟರು.

ದುರ್ಗದ ಮೇಲೆ ತಿರುಮಲರಾಯ ಮಾಹುತರಾಯನ ಸೈನಿಕರಿಗೂ ರಂಗಪತಿರಾಜುವಿನ ಸೈನಿಕರಿಗೂ ಭಯಂಕರ ಯುದ್ಧ ನಡೆಯಿತು. ಅಧಿಕ ಸಂಖ್ಯೆಯಲ್ಲಿದ್ದ ತಿರುಮಲರಾಯನ ಸೈನಿಕರ ಮುಂದೆ ರಂಗಪತಿಯ ಸೈನ್ಯ ನಿಲ್ಲಲಾರದೆ; ಇನ್ನೇನು ಅವನಿಗೇ ಸೋಲಾಗಬೇಕೆನ್ನುವಷ್ಟರಲ್ಲಿ, ಕೋಟೆ ಬಾಗಿಲು ತೆರೆಯಲ್ಪಟ್ಟು, ಧನಂಜಯನು ತನ್ನ ಸೈನ್ಯದೊಂದಿಗೆ ಅವನ ನೆರವಿಗೆ ಬಂದನು. ಎರಡು ಕಡೆಯಿಂದ ಬೀಳುತ್ತಿದ್ದ ಪೆಟ್ಟಿಗೆ ತಿರುಮಲ ರಾಯನ ಸೈನಿಕರು ತತ್ತರಿಸಿದರು. ಅಷ್ಟರಲ್ಲಿ ದುರ್ಗಾಧಿಪತಿಯಾದ ತಿರು ಮಲರಾಯನು ಏರಿದ್ದ ಕುದುರೆ ಮುಗ್ಗರಿಸಿ, ಅವನು ಶತ್ರುಗಳಿಗೆ ಕೈಸೆರೆ ಸಿಕ್ಕಿದನು.

ದುರ್ಗಾಧಿಪತಿ ಕೈಸೆರೆ ಸಿಕ್ಕಿದಮೇಲೆ ಉಳಿದ ಸೈನಿಕರಿಗೆ ಯುದ್ಧ ಮಾಡಲು ಹುರುಪುಂಟಾಗಲಿಲ್ಲ ಅವರು ತಮ್ಮ ಶಸ್ತ್ರಾಸ್ತ್ರಗಳನ್ನು ಕೆಳಕ್ಕೆ ಹಾಕಿ ಶರಣಾಗತರಾದರು, ಉದಯಗಿರಿ ಕೋಟೆ ಹೆಚ್ಚು ಹಾನಿಯಿಲ್ಲದೆ ರಂಗಪತಿರಾಜುವಿನ ವಶವಾಯಿತು.

ಬೆಳಗಿನ ಸೂರ್ಯೋದಯದೊಂದಿಗೆ ಉದಯಗಿರಿಯ ಕೋಟೆಯ ಬತೇರಿಗಳಿಂದ ತೋಪುಗಳು ಹಾರಿ ವಿಜಯವಾರ್ತೆಯನ್ನು ರಾಯನಿಗೆ ಅರುಹಿದವು ಕೃಷ್ಣದೇವರಾಯನು ತನ್ನ ಶಿಬಿರದಿಂದ ಹೊರಗೆ ಬಂದು ಉದಯಗಿರಿಯ ಕಡೆಗೆ ನೋಡಿದಾಗ, ಉದಯಗಿರಿಯ ದುರ್ಗದ ಭಿತ್ತಿಯ ಮೇಲೆ ವಿಜಯನಗರದ ಪಂಚವರ್ಣದ ವರಾಹಂತಧ್ವಜವು ಪಟಪಟನೆ ಹಾರುತ್ತಿತ್ತು. ಅದು ರಂಗಪತಿರಾಜುವು ಗಳಿಸಿದ ವಿಜಯದ ಸಾಂಕೇತಿಕ ವಾಗಿತ್ತು.

೫

ಉದಯಗಿರಿಯು ಪತನವಾದಮೇಲೆ ರಾಯನ ದೃಷ್ಟಿ ಕೊಂಡವೀಡಿನ ಮೇಲೆ ಬಿದ್ದಿತು.

ಕೊಂಡವೀಡು ಆ ಪ್ರದೇಶದಲ್ಲೆಲ್ಲಾ ಸುಭದ್ರವಾದ ದುರ್ಗವೆಂದು ಹೆಸರು ಪಡೆದಿತ್ತು. ಉದಯಗಿರಿಯು ತನ್ನ ಕೈಬಿಟ್ಟಮೇಲೆ ಪ್ರತಾಪರುದ್ರ ಗಜಪತಿಯು ಅದರ ರಕ್ಷಣೆಗಾಗಿ ವಿಶೇಷವಾದ ಆಸಕ್ತಿಯನ್ನು ವಹಿಸಿದ್ದನು. ಈ ಅವಧಿಯಲ್ಲಿ ಬಿಜಾಪುರದ ಸುಲ್ತಾನನ ನೆರವೂ ಅವನಿಗೆ ಸಿಕ್ಕಿತ್ತು. ರಾಯಚೂರಿನ ಉದ್ದಂಡಖಾನ್, ಮಾಲೂಖಾನ್ ಇವರ ಕೈಕೆಳಗೆ ಬಿಜಾಪುರದ ಸುಲ್ತಾನನು ಬಂದು ದಂಡನ್ನು ಗಜಪತಿಯ ಸಹಾಯಕ್ಕೆ ಕಳುಹಿಸಿ ಕೊಟ್ಟಿದ್ದನು. ಗಜಪತಿಯು ಈ ಸೈನ್ಯವನ್ನು ಕೊಂಡವೀಡಿನ ರಕ್ಷಣೆಗೆ ಇಟ್ಟಿದ್ದನು. ಇಷ್ಟರಿಂದಲೇ ತೃಪ್ತನಾಗದೆ ಗಜಪತಿಯು ತನ್ನ ಕಿರಿಯ ಮಗನಾದ ರಾಜಕುಮಾರ ವೀರಭದ್ರದೇವನನ್ನು ದುರ್ಗಾಧಿಪತಿಯಾಗಿ ನೇಮಿಸಿದ್ದನು. ಅವನಿಗೆ ಸಹಾಯಮಾಡಲು ಪ್ರತಾಪರುದ್ರನ ವಿಶ್ವಾಸಕ್ಕೆ ಪಾತ್ರರಾಗಿದ್ದ ಕುಮಾರ ಹೆಮ್ಮಾರ ಮಹಾಪಾತ್ರನ ಮಗನಾದ ನರಹರಿ ಪಾತ್ರನೂ, ಪುಪ್ಪಡುವಿನ ರಾಚಿರಾಜನೂ, ಪಶ್ಚಿಮದ ಭಾಟಚಂದ್ರ ಮಹಾ ಪಾತ್ರನೂ ನೇಮಿತರಾಗಿದ್ದರು. ಹೀಗೆ ಕೊಂಡವೀಡು ದುರ್ಗವು ಶತ್ರುಗಳಿಗೆ ದುರ್ಗಮ ದುರ್ಗವಾಗಿತ್ತು.

ಕೃಷ್ಣದೇವರಾಯನು ತನ್ನ ಅಪಾರ ಸೈನ್ಯವನ್ನು ನಡೆಸಿಕೊಂಡು ಬಂದು, ಕೊಂಡವೀಡಿಗೆ ಅನತಿದೂರದಲ್ಲಿ ಹರಿಯುತ್ತಿದ್ದ ಕೃಷ್ಣೆಯ ದಂಡೆ

ಯಲ್ಲಿ ಬಿಡಾರ ಮಾಡಿದನು. ಅಲ್ಲಿ ಸೈನಿಕರಿಗೆ ಸಲ್ಲಬೇಕಾಗಿದ್ದ ಸಂಬಳ ಸಾರಿಕೆಯನ್ನು ಕೊಟ್ಟು ಅವರನ್ನು ಯುದ್ಧಕ್ಕೆ ಹುರುದುಂಬಿಸಿದನು. ನದಿಯ ಇನ್ನೊಂದು ದಂಡೆಯಲ್ಲಿ ಪ್ರತಾಪರುದ್ರ ಗಜಪತಿಯು ತನ್ನ ಸೈನ್ಯದೊಂದಿಗೆ ಸಮರಸನ್ನದ್ಧನಾಗಿ, ರಾಯನಿಗಾಗಿ ಕಾಯುತ್ತಿದ್ದನು. ಅವನ ಸೈನ್ಯದಲ್ಲಿ ಒಂದುಸಾವಿರ ಮುನ್ನೂರು ಆನೆಗಳೂ, ಇಪ್ಪತ್ತುಸಾವಿರ ಕುದುರೆಗಳೂ, ಐದು ಲಕ್ಷ ಕಾಲಾಳುಗಳೂ ಇದ್ದರು. ಈ ಹೋರಾಟದಲ್ಲಿ ಜಯಾಪಜಯಗಳು ಅನಿಶ್ಚಿತವಾಗಿತ್ತು. ಈ ಬಾರಿ ಗಜಪತಿಯು ಕೃಷ್ಣ ದೇವರಾಯನಿಗೆ ತನ್ನ ಕೈವಾಡವನ್ನು ತೋರಿಸಲು ಬಂದಂತಿತ್ತು.

ಎರಡು ಕಡೆಯ ಸೈನಿಕರು ನದಿಯ ಇರ್ಕಡೆಗಳಲ್ಲಿ ತಮ್ಮ ಶಿಬಿರ ಗಳನ್ನು ಹೂಡಿ ಬೀಡು ಬಿಟ್ಟಿದ್ದರೂ ಯುದ್ಧದ ಪ್ರಯತ್ನ ಯಾರೂ ಮಾಡುವ ಲಕ್ಷಣ ತೋರಲಿಲ್ಲ. ಸುಮಾರು ಒಂದು ತಿಂಗಳು ಕಳೆದರೂ ಎರಡು ಸೈನ್ಯಗಳೂ ಪರಸ್ಪರ ಚಲನವಲನಗಳನ್ನು ನಿರೀಕ್ಷಿಸುತ್ತ ತಟಸ್ಥ ರಾಗಿಯೇ ಕುಳಿತಿದ್ದರು. ಇದರಿಂದ ವ್ಯರ್ಥ ಕಾಲಹರಣವಾಗುತ್ತಿದೆ ಎಂದು ಕೃಷ್ಣದೇವರಾಯನಿಗೆ ಅನಿಸಿತು. ಗಜಪತಿಯು ನದಿಯನ್ನು ದಾಟಿ ತನ್ನಮೇಲೆ ಬೀಳಲೆಂದು ಕೃಷ್ಣದೇವರಾಯನೂ, ಕೃಷ್ಣದೇವರಾಯನು ನದಿಯನ್ನುದಾಟಿ ತನ್ನಮೇಲೆ ಬೀಳಲೆಂದು ಗಜಪತಿ. ಹೀಗೆ ಪರಸ್ಪರ ನಿರೀಕ್ಷಣೆಯಲ್ಲಿ ಒಂದುತಿಂಗಳು ಕಳೆದಿತ್ತು. ಯಾರೊಬ್ಬರೂ ಯುದ್ಧವನ್ನು ಆರಂಭಿಸಿರಲಿಲ್ಲ. ಕಡೆಗೆ ಬೇಸತ್ತ ರಾಯನು ಒಂದು ಓಲೆಯನ್ನು ಬರೆದು ಗಜಪತಿಗೆ ಸಮರಾಹ್ವಾನವಿತ್ತನು. ಗಜಪತಿಯು ನದಿಯನ್ನು ದಾಟುವು ದಾದರೆ, ತಾನು ಸೈನ್ಯಸಮೇತ ಹಿಮ್ಮೆಟ್ಟುವುದಾಗಿಯೂ, ಗಜಪತಿಯು ಧೈರ್ಯವಾಗಿ ಕೃಷ್ಣೆಯನ್ನು ದಾಟಿಬರಬಹುದೆಂದೂ ಆಶ್ವಾಸವಿತ್ತನು.

ಈ ಪತ್ರವನ್ನು ಓದಿಕೊಂಡ ಗಜಪತಿ, ರಾಯನ ಸಲಹೆಯನ್ನು ತಿರಸ್ಕರಿಸಿ, ಬೇಕಿದ್ದರೆ ಕೃಷ್ಣದೇವರಾಯನೇ ನದಿಯನ್ನು ಹಾದು ತನ್ನ ಮೇಲೆ ಬೀಳಲಿ ಎಂದು ಹೇಳಿಕಳುಹಿಸಿದನು. ಬಹುಶಃ ರಾಯನ ತಂತ್ರ ಅವನಿಗೆ ತಿಳಿಯಿತೋ ಏನೋ.

ಗಜಪತಿಯ ಉತ್ತರದಿಂದ ರಾಯನಿಗೆ ನಿರಾಶೆಯಾಯಿತು. ಅವನು ತಿಮ್ಮರಸ, ಗೋವಿಂದರಾಜ, ಧನಂಜಯ ಮೊದಲಾದ ದಂಡನಾಯಕ

ರೊಂದಿಗೆ ಕಲೆತು ಆಲೋಚಿಸಿ, ಒಂದು ಯೋಜನೆಯನ್ನು ಸಿದ್ಧಗೊಳಿಸಿದ. ಅದರಂತೆ ರಾಯನ ಸೈನ್ಯ ಗುಪ್ತವಾಗಿ ನದಿಯನ್ನು ದಾಟಲು ಹೊರಟಿತು.

ಶತ್ರುಗಳ ಚಲನವಲನಗಳನ್ನು ತಿಳಿದುಬರಲು ಕಳುಹಿಸಿದ್ದ ಗುಪ್ತ ಚಾರರಿಂದ ರಾಯನ ಅರ್ಧದಷ್ಟು ಸೈನ್ಯ ನದಿಯನ್ನು ದಾಟಿ ತಮ್ಮಮೇಲೆ ಬೀಳಲು ಬರುತ್ತಿರುವ ವಾರ್ತೆಯನ್ನು ಕೇಳಿ ಗಜಪತಿಯೂ ಉತ್ತೇಜನ ಗೊಂಡನು. ನದಿಯ ಇನ್ನೊಂದು ದಡದಲ್ಲಿರುವ ರಾಯನ ಸೈನಿಕರಮೇಲೆ ನದಿಯನ್ನು ದಾಟಿ ತಾವು ಹಟಾತ್ತನೆ ಬಿದ್ದರೆ, ಅಧಿಕಸಂಖ್ಯೆಯಲ್ಲಿರುವ ತಾವು ರಾಯನ ಸೈನ್ಯವನ್ನು ಸುಲಭವಾಗಿ ಸೋಲಿಸಬಹುದೆಂದು ಎಣಿಕೆ ಹಾಕಿ, ಕೂಡಲೇ ನದಿಯನ್ನು ದಾಟಿ ರಾಯನ ಸೈನ್ಯದಮೇಲೆ ಧಾಳಿ ಇಡಲು ತನ್ನ ಸೈನ್ಯಕ್ಕೆ ಆಜ್ಞೆಮಾಡಿದನು. ಗಜಪತಿಯ ಆಜ್ಞೆಯಂತೆ, ಉತ್ಕಲಸೇನೆ ಮರದ ತೆಪ್ಪಗಳಮೇಲೂ, ದೋಣಿಗಳಲ್ಲೂ, ಆನೆಗಳ ಮೇಲೂ ನದಿಯನ್ನು ದಾಟಲು ಹೊರಟಿತು. ಇದೇ ಸುಸಂಧಿಯನ್ನು ಸಾಧಿಸಿ, ಈ ಮೊದಲೇ ನದಿಯನ್ನು ದಾಟಿ ದಡ ಸೇರಿದ್ದ ರಾಯನ ಸೈನಿಕರು ಹಟಾತ್ತನೆ ನದಿಯನ್ನು ದಾಟುತ್ತಿದ್ದ ಸೈನಿಕರಮೇಲೆ ಬಿದ್ದರು. ಎರಡು ಕಡೆಗಳಿಂದಲೂ ಬೀಳುತ್ತಿದ್ದ ರಾಯನ ಸೈನಿಕರ ಹೊಡೆತವನ್ನು ನಡು ನೀರಿಗೆ ಬಿದ್ದಿದ್ದ ಉತ್ಕಲ ಸೈನ್ಯ ತಡೆದುಕೊಳ್ಳುವುದು ಕಷ್ಟವಾಯಿತು. ಇದು ಸಾಲದುದಕ್ಕೆ ತುಂಬು ಪ್ರವಾಹದಲ್ಲಿ ಹರಿಯುತ್ತಿದ್ದ ಕೃಷ್ಣೆ, ನಿಷ್ಕರುಣೆಯಾಗಿ, ಪ್ರವಾಹದಲ್ಲಿ ಸಿಕ್ಕಿದ ಉತ್ಕಲ ಸೈನಿಕರನ್ನು ನುಂಗುತ್ತಾ ಬಂದಳು. ಅಸಂಖ್ಯಾತ ಸೈನಿಕರೂ, ಆನೆ ಕುದುರೆಗಳೂ, ಪ್ರವಾಹದಲ್ಲಿ ಕೊಚ್ಚಿಹೋದರು. ದಡದಮೇಲಿದ್ದ ಅಳಿದುಳಿದ ಸೈನ್ಯವನ್ನು ರಾಯನ ಸೈನಿಕರು ಕೊಚ್ಚಿ ಕೊಂದರು. ಗಜಪತಿಯ ಸೈನ್ಯದಲ್ಲಿ ಹಾಹಾಕಾರ ವೆದ್ದಿತು ಸೈನ್ಯದಲ್ಲಿ ಶಿಸ್ತು ತಪ್ಪಿ ನಾಯಕರಿಲ್ಲದ ಅವರು ಕುರಿ ಹಿಂಡಿನಂತೆ ಆಗಿದ್ದರು. ಅವರು ಪ್ರಾಣ ಉಳಿಸಿಕೊಳ್ಳಲು ದಿಕ್ಕಾಪಾಲಾಗಿ ಓಡಿದರು. ಓಡುತ್ತಿರುವ ಸೈನಿಕರನ್ನು ಹಿಮ್ಮೆಟ್ಟಿಸಲು ಮಾಡಿದ ಗಜಪತಿಯ ಸಾಹಸ ವ್ಯರ್ಥವಾಯಿತು. ಇನ್ನು ತಾನು ರಣರಂಗದಲ್ಲಿ ಉಳಿದರೆ ರಾಯನ ಕೈಗೆ ಸಿಕ್ಕಿಬೀಳುವುದು ದಿಟವೆಂದು ಗಜಪತಿಯು ನಿರ್ವಾಹವಿಲ್ಲದೆ ರಣರಂಗ ದಿಂದ ಓಡಿಹೋಗಿ ತಲೆತಪ್ಪಿಸಿಕೊಂಡನು.

ಯುದ್ಧದಲ್ಲಿ ಬಹುಸಂಖ್ಯೆಯಲ್ಲಿ ಆನೆಕುದುರೆಗಳು ಹತವಾದವು. ಮಡಿದ ಕಾಲಾಳುಗಳಂತೂ ಲೆಕ್ಕವಿರಲಿಲ್ಲ. ರಾಯನ ಸೈನ್ಯಕ್ಕೂ ಅಪಾರ ನಷ್ಟವುಂಟಾಗಿತ್ತು. ಆದರೆ ಗಜಪತಿಯ ಶಿಬಿರದಲ್ಲಿ ದೊರಕಿದ ಆನೆಕುದುರೆಗಳು, ಶಸ್ತ್ರಾಸ್ತ್ರಗಳು ಈ ನಷ್ಟವನ್ನು ತುಂಬಿಕೊಟ್ಟವು.

ಕೃಷ್ಣದೇವರಾಯನು ಗಜಪತಿಯನ್ನು ಹಿಮ್ಮೆಟ್ಟಿಕೊಂಡು ಹೋಗದೆ ನೇರ ಕೊಂಡವೀಡಿನ ಕಡೆಗೆ ನುಗ್ಗಿದನು.

ದುರ್ಗದ ಮುತ್ತಿಗೆ ಸುಮಾರು ಎರಡು ತಿಂಗಳ ಕಾಲ ನಡೆಯಿತು. ಇಷ್ಟಾದರೂ ದುರ್ಗ ಶರಣಾಗತವಾಗುವ ಸೂಚನೆ ಕಾಣಲಿಲ್ಲ. ಹಗಲೂ ರಾತ್ರಿ ಸರ್ಪಕಾವಲು ಕಾಯುತ್ತಿದ್ದ ಗಜಪತಿಯ ಸೈನಿಕರ ಕಣ್ಣು ತಪ್ಪಿಸಿ ದುರ್ಗವನ್ನು ಪ್ರವೇಶಿಸಲು ಮಾಡಿದ, ರಾಯನ ಸೈನಿಕರ ಎಲ್ಲ ಪ್ರಯತ್ನ ವಿಫಲವಾಯಿತು. ಕೊಂಡವೀಡು ದುರ್ಗವನ್ನು ಉಪವಾಸ ಕೆಡವಿ ವಶಪಡಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಕೊಂಡವೀಡು ಕೋಟೆಯಲ್ಲಿ ಎರಡು ಮೂರು ವರ್ಷಗಳಿಗೆ ಬೇಕಾಗುವಷ್ಟು ಆಹಾರ ಸಾಮಗ್ರಿಗಳು ಶೇಖರಿಸಲ್ಪಟ್ಟಿತ್ತು. ಅಲ್ಲದೆ ದುರ್ಗದ ಮೇಲೆ ನೀರಿನ ವಸತಿ ಚನ್ನಾಗಿತ್ತು. ಇವುಗಳೆಲ್ಲ ತೀರಿಕೊಂಡ ಹೊರತು ಅದನ್ನು ಉಪವಾಸ ಕೆಡಹಲು ಸಾಧ್ಯವಿರಲಿಲ್ಲ. ಒಂದೊಂದು ಕೋಟೆಯನ್ನು ವಶಪಡಿಸಿಕೊಳ್ಳಲು ಇಷ್ಟು ದೀರ್ಘಕಾಲ ಹಿಡಿದರೆ, ತಮ್ಮ ಉದ್ದೇಶ್ಯ ಸಫಲಗೊಳಿಸಲು ಬಹಳ ಕಾಲ ಬೇಕಾಗಬಹುದೆಂದು ರಾಯನು ಚಿಂತಾಕ್ರಾಂತನಾದನು.

ಇದನ್ನರಿತ ಗೋವಿಂದರಾಜನು ರಾಯನ ಸಮುಖಕ್ಕೆ ಬಂದು, ರಾಯನನ್ನು ಸಮಾಧಾನಗೊಳಿಸಿ, ಕೊಂಡವೀಡು ದುರ್ಗವನ್ನು ವಶಪಡಿಸಿಕೊಳ್ಳುವ ಜವಾಬ್ದಾರಿಯನ್ನು ತಾನು ಹೊತ್ತುಕೊಂಡನು.

ಗೋವಿಂದರಾಜನು ಶಕ್ತರಾದ ದಳಪತಿಗಳಿಂದ ರಕ್ಷಿತವಾದ ಕೊಂಡವೀಡನ್ನು ಬಲಪ್ರಯೋಗದಿಂದ ವಶಪಡಿಸಿಕೊಳ್ಳುವುದು ದುಃಸಾಧ್ಯವೆಂದು ಮನಗೊಂಡು, ಬೇರೊಂದು ಯುಕ್ತಿಮಾರ್ಗವನ್ನು ಹುಡುಕಿಸಿದನು.

ದುರ್ಗದಮೇಲೆ ಇದ್ದ ದಳಪತಿಗಳಲ್ಲೆಲ್ಲಾ ಬಿಜಾಪುರದ ಸುಲ್ತಾನನಿಂದ ಕಳುಹಿಸಲ್ಪಟ್ಟಿದ್ದ ಮಾಲೂಖಾನನು ತುಂಬಾ ಧರ್ಮ ಶ್ರದ್ಧೆಯುಳ್ಳವನೆಂದು ಲೋಕವಿದಿತವಾಗಿತ್ತು. ಅವನು ರಾಜಕುಟುಂಬಕ್ಕೆ ಸೇರಿದ್ದರೂ

ಸರಳಜೀವಿ. ಅವನು ಹೆಚ್ಚು ಬೆಲೆಬಾಳುವ ಉಡುಪನ್ನೂ ಧರಿಸುತ್ತಿರಲಿಲ್ಲ. ಮದ್ಯ ಮಾಂಸಗಳನ್ನು ಸೇವಿಸುತ್ತಿರಲಿಲ್ಲ. ಅವನೊಬ್ಬ ಸಂತ. ತನ್ನ ದೇವರಲ್ಲಿ ಬಹಳ ಭಕ್ತಿ. ತನ್ನ ಮತಾಚರಣೆಯನ್ನು ರವೆಯಷ್ಟೂ ಬಿಡುತ್ತಿರಲಿಲ್ಲ. ದಿನಕ್ಕೆರಡುಬಾರಿ ನಮಾಜು ಮಾಡುವುದನ್ನು ಎಂದೂ ತಪ್ಪಿರಲಿಲ್ಲ. ಅವರ ಮನೆ, ಮೌಲ್ವಿಗಳ ಫಕೀರರ ಆಶ್ರಯ ತಾಣವಾಗಿತ್ತು. ಸ್ವಯಂ ಪಂಡಿತನಾಗಿದ್ದ ಅವನು ವಿದ್ವಾಂಸರ ಪಕ್ಷಪಾತಿಯಾಗಿದ್ದ. ಅವನಿಗೆ ಕುರಾನಿನ ಬಹುಭಾಗ ಬಾಯಿಪಾಠವಾಗಿತ್ತಂತೆ.

ಅವನು ತನ್ನ ಮನೆಗೆ ಬಂದ ಬಡವರನ್ನೂ, ದೀನರನ್ನೂ ಬರಿಗೈಯಲ್ಲಿ ಕಳುಹಿಸುತ್ತಿರಲಿಲ್ಲ. ತನ್ನ ಐಶ್ವರ್ಯವನ್ನೆಲ್ಲಾ ದಾನಕ್ಕೆ, ಧರ್ಮಕಾರ್ಯಗಳಿಗೆ ವೆಚ್ಚಮಾಡಿದ್ದ. ಅವನನ್ನ ಜನ 'ಫಕೀರರ ರಾಜ,' 'ರಾಜಫಕೀರ'ನೆಂದು ಪ್ರೀತಿಯಿಂದ ಕರೆಯುತ್ತಿದ್ದರು. ಇಷ್ಟಾದರೂ ದುಡಿಯದೆ ತಿನ್ನುವುದು ಮಹಾಪರಾಧವೆಂದು ತಿಳಿದಿದ್ದ ಅವನು, ಸೈನಿಕ ವೃತ್ತಿಯ ಕಾಯಕ ಮಾಡುತ್ತಿದ್ದ. ತನ್ನ ಕಾಯಕದಲ್ಲೂ ಅವನು ಸಶಸ್ತ್ರನಾದ ದಳಪತಿ ಎಂಬ ಹೆಸರಿಗೆ ಪಾತ್ರನಾಗಿದ್ದ. ಅವನ ಶೌರ್ಯ ನಿಷ್ಠೆಗಳನ್ನು ಕಂಡೇ ಬಿಜಾಪುರದ ಸುಲ್ತಾನ ಅವನನ್ನು ಗಜಪತಿಯ ನೆರವಿಗೆ ಕಳುಹಿಸಿಕೊಟ್ಟಿದ್ದು. ಅವನು ತನ್ನ ಸದ್ಗುಣಗಳಿಂದಾಗಿ ಹಿಂದೂ ಮಹಮದೀಯರಿಬ್ಬರ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿದ್ದ.

ಈಗ ರಂಜಾನ್ ತಿಂಗಳು ನಡೆಯುತ್ತಿತ್ತು. ನಿಷ್ಠಾವಂತ ಮಹಮದೀಯರಿಗೆ ರಂಜಾನ್ ಪವಿತ್ರಮಾಸ. ಉಪವಾಸ ಧ್ಯಾನಗಳಿಗೆ ಮೀಸಲಿಟ್ಟ ಈ ಮಾಸದಲ್ಲಿ ಎಂತಹ ಮಹಮದೀಯನೂ ಪ್ರತಿ ಶುಕ್ರವಾರ ನಮಾಜು ಮಾಡುವುದನ್ನು ತಪ್ಪಿಸುತ್ತಿರಲಿಲ್ಲ. ಬಿಜಾಪುರದ ಸೈನಿಕರಲ್ಲಿ ಬಹುಮಂದಿ ಮಹಮದೀಯರು ಇದ್ದರು. ಅವರೆಲ್ಲರಿಗೂ ರಂಜಾನ್ ದೊಡ್ಡಹಬ್ಬವಾಗಿತ್ತು. ಪ್ರತಿ ಶುಕ್ರವಾರ ದುರ್ಗದಮೇಲಿದ್ದ ಸಣ್ಣ ಮಸೀದಿಯ ಮುಂದೆ ಪ್ರಾರ್ಥನೆಗೆ ಸೇರುತ್ತಿದ್ದರು.

ಅಂದು ಶುಕ್ರವಾರ. ದಳಪತಿಯಾದ ಮಾಲೂಖಾನನು ಉತ್ತರ ದಿಕ್ಕಿನ ಬುರುಜನ್ನು ಕಾಯುತ್ತಿದ್ದ ತನ್ನ ಸೈನಿಕರನ್ನು ಪರೀಕ್ಷಿಸಲು ಅತ್ತ ಬಂದಿದ್ದಾಗ, ಕೋಟೆಯ ಕೆಳಗಡೆ ಒಂದು ಕರುಣಾಜನಕವಾದ ದೃಶ್ಯ

ಕಂಡನು. ರಾಯನ ಸೈನಿಕರು ಕೋಟೆಯ ಕಡೆಗೆ ಓಡಿಬರುತ್ತಿದ್ದ ಒಬ್ಬ ಫಕೀರನನ್ನು ಹಿಡಿಯಲೆತ್ನಿಸಿದ್ದರು. ಫಕೀರನು ಅವರಿಂದ ತಪ್ಪಿಸಿಕೊಳ್ಳಲು ಮಾಡಿದ ಸಾಹಸ ವ್ಯರ್ಥವಾಗಿತ್ತು. ಅವರ ಕೈಗೆ ಸಿಕ್ಕಿಬಿದ್ದಿನು.

ರಾಯನ ಸೈನಿಕರು ತಮ್ಮ ಕೈಗೆ ಸಿಕ್ಕಿಬಿದ್ದ ಆ ಫಕೀರನನ್ನು ಗುಪ್ತ ಚಾರನಿರಬಹುದೆಂದು ಊಹಿಸಿ, ಪ್ರಶ್ನೆಗಳ ಮಳೆಯನ್ನು ಕರೆದರು. ಅವನು ಯಾವುದಕ್ಕೂ ಉತ್ತರ ಕೊಡದೆ ಇದ್ದುದನ್ನು ನೋಡಿ ಅವರಿಗೆ ರೇಗಿ, ಅವನನ್ನು ಚೆನ್ನಾಗಿ ಹೊಡೆದು ಅಲ್ಲೇ ಇದ್ದ ಮರಕ್ಕೆ ಅವನನ್ನು ಬಿಗಿದು ಕಟ್ಟಿ, ತಾವು ಅಲ್ಲಿಂದ ಹೊರಡುವಾಗ ತಮ್ಮ ಸಂಗಡ ಕರೆದೊಯ್ಯಲು ನಿಶ್ಚಯಿಸಿ, ತಮ್ಮ ಇತರ ಕೆಲಸಗಳನ್ನು ನೆನೆದು ಅಲ್ಲಿಂದ ಹೊರಟು ಹೋದರು. ಅವರು ಹೋದವರು ಸಂಜೆಯಾದರೂ ಮತ್ತೆ ಹಿಂದಿರುಗಿ ಬರಲಿಲ್ಲ. ಬಹುಶಃ ತಮ್ಮ ಕಾರ್ಯದ ಗಡಿಬಿಡಿಯಲ್ಲಿ ಆ ಬಡ ಫಕೀರ ನನ್ನು ಮರೆತುಬಿಟ್ಟರೋ ಏನೋ. ಅಂತೂ ಮರಕ್ಕೆ ಕಟ್ಟಿದ್ದ ಫಕೀರ ಹಾಗೆಯೇ ನಿಂತಿದ್ದ. ಅವನು ತನ್ನ ನೆರವಿಗೆ ಯಾರಾದರೂ ಬರಲೆಂದು ನೋವಿನ ಧ್ವನಿಯಲ್ಲಿ ಅಲ್ಲಾನ ಉದ್ಗಾರ ತೆಗೆಯುತ್ತಿದ್ದ.

ಸ್ವಭಾವತಃ ಕರುಣೆಯೂ, ಸಾಧುಸಂತರಲ್ಲಿ ಭಯಭಕ್ತಿಯುಳ್ಳವನೂ ಆಗಿದ್ದ ಮಾಲೂಖಾನನಿಗೆ, ಫಕೀರನಿಗೊದಗಿದ ದುರವಸ್ಥೆಯನ್ನು ನೋಡಿ ಮರುಕ ಉಂಟಾಯಿತು. ಸಂಜೆಯಾದರೂ ಅವನನ್ನು ವಿಚಾರಿಸಿಕೊಳ್ಳಲು ಯಾರೂ ಬರದೆ ಇರುವುದನ್ನು ನೋಡಿ, ಮನಸ್ಸು ಕರಗಿ, ಅವನನ್ನು ಬಂಧ ವಿಮೋಚನೆಗೊಳಿಸಿ, ತನ್ನ ಬಳಿಗೆ ಕರೆತರಲು ತನ್ನ ಆಪ್ತರಿಬ್ಬರನ್ನು ಕಳು ಹಿಸಿದ. ಅವರು ಕತ್ತಲಾದಮೇಲೆ ಗುಪ್ತದ್ವಾರದಿಂದ ದುರ್ಗದಿಂದ ಹೊರ ಬಿದ್ದು ಗಾಯಗೊಂಡು, ಮೂರ್ಛೆಹೊಂದಿದ್ದ ಆ ಫಕೀರನ ಬಳಿಗೆ ಬಂದು ಅವನ ಕಟ್ಟುಗಳನ್ನೆಲ್ಲ ಬಿಚ್ಚಿ ಶೈತ್ಯೋಪಚಾರ ಮಾಡಿದರು. ಆದರೂ ಅವನು ಮೈ ತಿಳಿಯಲಿಲ್ಲ. ಅವರಿಗೆ ಬೇರೇನು ಮಾಡಲು ತೋರದೆ ಅವನನ್ನು ಹೊತ್ತುಕೊಂಡು ದುರ್ಗದ ಮೇಲಕ್ಕೆ ಹೊರಟರು. ತಮ್ಮ ಜಾಡು ಆ ಫಕೀರನಿಗೆ ತಿಳಿಯಬಾರದೆಂದು ಅವನ ಕಣ್ಣಿಗೆ ಬಟ್ಟೆಕಟ್ಟಿ ದ್ದರು. ದುರ್ಗವನ್ನು ಸೇರಿ, ಮಾಲೂಖಾನನಿಗೆ ಅವನನ್ನು ಒಪ್ಪಿಸಿದರು.

ಮಾಲೂಖಾನನ ಹಕೀಮನು ಮಾಡಿದ ಔಷದೋಪಚಾರಗಳಿಂದ ಫಕೀರನು ಕಣ್ಣುಬಿಟ್ಟು ನೋಡಿದನು. ಎದುರಿಗೆ ಅಪರಿಚಿತ ಮುಖಗಳೇ ಕಂಡವು. ಫಕೀರನಿಗೆ ತಾನು ಇಲ್ಲಿಗೆ ಹೇಗೆ ಬಂದೆನೆಂಬುದು ತಿಳಿಯದೆ, ಅಚ್ಚರಿಯಿಂದ ಅವರ ಮುಖಗಳನ್ನು ನೋಡಿದನು. ಸಂಪೂರ್ಣ ತಿಳುವು ಬಂದಾಗ ಅವನಿಗೆ ತಾನು ಕೊಂಡವೀಡು ದುರ್ಗದಲ್ಲಿ ದಳಪತಿ ಮೂಲೂ ಖಾನನ ಆಶ್ರಯದಲ್ಲಿ ಇರುವುದು ತಿಳಿಯಿತು. ಅವನೂ ಕೆಲವೇ ಮಾತು ಗಳಲ್ಲಿ ತನ್ನ ಕಥೆಯನ್ನು ಮೂಲೂಖಾನನಿಗೆ ನಿವೇದಿಸಿದನು.

ಅವನೊಬ್ಬ ಊರಕೇರಿಗಳಿಲ್ಲದ ಫಕೀರ. ಭಿಕ್ಷೆ ಬೇಡುತ್ತಲೇ ಮಕ್ಕಾ ಯಾತ್ರೆ ಮಾಡಿದ್ದನಂತೆ. ಅವನದು ಒಂದೆಡೆ ನಿಲ್ಲುವ ಸ್ವಭಾವವಲ್ಲ. ಎಲ್ಲಿ ದಾನಧರ್ಮಗಳು ನಡೆಯುವುದೋ, ಎಲ್ಲಿ ಮುಸಲ್ಮಾನ ಸಾಧು ಸಂತರನ್ನು ಆದರಿಸುವರೋ ಅಲ್ಲಿ ಅವನು ಸಿದ್ಧ. ಈಗ ರಂಜಾನ್ ಮಾಸ ವಾಗಿದ್ದುದರಿಂದ ಮಾಲೂಖಾನನ ಕೀರ್ತಿ ಕೇಳಿ, ಕೊಂಡವೀಡಿಗೆ ಬಂದಿ ದ್ದಾಗ ರಾಯನ ಸೈನಿಕರ ಕೈಗೆ ಸಿಕ್ಕಿಬಿದ್ದನು. ರಾಯನ ಸೈನಿಕರು ಅವನನ್ನು ಶತ್ರುಗಳ ಗೂಢಚಾರನೆಂದು ಭಾವಿಸಿ ಚೆನ್ನಾಗಿ ಥಳಿದಿದ್ದರು. ಇದು ಅವನ ಕರುಣ ಕಥೆ.

ಫಕೀರನ ಗಾಯಗಳೆಲ್ಲ ವಾಸಿಯಾಗುವತನಕ ಅವನನ್ನು ತನ್ನ ಮನೆಯಲ್ಲಿಯೇ ಇರಿಸಿಕೊಂಡಿದ್ದ ಮಾಲೂಖಾನ್. ಫಕೀರನ ಗಾಯಗಳೆಲ್ಲ ವಾಸಿಯಾಗಿ ಅವನು ಮೊದಲಿನಂತೆ ಆಗಲು ಅನೇಕ ದಿನಗಳು ಹಿಡಿದವು. ಅವನು ಸಂಪೂರ್ಣವಾಗಿ ಆರೋಗ್ಯ ಹೊಂದಿದಮೇಲೆ ಮಾಲೂಖಾನನ ಮನೆಯನ್ನು ತೊರೆದು ಮಸೀದಿಯಲ್ಲಿ ತಳ ಊರಿದನು. ಫಕೀರನಿಗೆ ತನ್ನ ಮನೆಗಿಂತಲೂ ಮಸೀದಿಯೇ ಉತ್ತಮಸ್ಥಳವೆಂದು ಬಗೆದ ಮಾಲೂಖಾನನು ಅದಕ್ಕೆ ಆಕ್ಷೇಪಿಸಲಿಲ್ಲ. ಫಕೀರನು ಮಸೀದಿಯಲ್ಲಿ ಒಂದೆರಡುದಿನಗಳು ಇದ್ದನು ಅಷ್ಟೆ. ನಾಲ್ಕನೆಯ ದಿನದ ವೇಳೆಗೆ ಅವನು ಅಲ್ಲಿಂದ ಮಾಯ ವಾಗಿದ್ದ. ಅವನು ಎಲ್ಲಿಗೆ ಹೋದನೆಂಬುದು ಯಾರಿಗೂ ತಿಳಿಯದೆ ಹೋಗಿ ಅವನು ಶತ್ರುಗಳ ಗೂಢಚಾರನಿರಬೇಕೆಂಬ ಅನುಮಾನ ಉಂಟಾಯಿತು. ಎಲ್ಲಿದ್ದರೂ ಸರಿಯೆ ಅವನನ್ನು ಹುಡುಕಿ ತನ್ನ ಬಳಿಗೆ ಕರೆತರಬೇಕೆಂದು

ಮಾಲೂಖಾನನು ಆಜ್ಞೆಮಾಡಿದನು. ಯಾರೆಷ್ಟು ಹುಡುಕಿದರೂ ಯಾರ ಕೈಗೂ ಆ ಫಕೀರನು ಸಿಕ್ಕದೇ ಹೋಗಿದ್ದ.

ಈ ಘಟನೆ ನಡೆದ ಕೆಲವು ದಿನಗಳಲ್ಲೆ ಕೊಂಡವೀಡು ದುರ್ಗವನ್ನು ರಾಯನ ಸೈನಿಕರು ವಶಪಡಿಸಿಕೊಂಡುಬಿಟ್ಟರು. ಗೋವಿಂದರಾಜನ ತಂತ್ರ ಫಲಿಸಿ, ಕೊಂಡವೀಡು ಕೋಟೆ ಹೆಚ್ಚು ರಕ್ತಪಾತವಿಲ್ಲದೆ ರಾಯನ ವಶವಾಗಿತ್ತು. ಶಕ್ತಿಯಿಂದ ಸಾಧ್ಯವಾಗದೆ ಇದ್ದ ಕೆಲಸವನ್ನು ಗೋವಿಂದ ರಾಜನು ಯುಕ್ತಿಯಿಂದ ಸಾಧಿಸಿದ್ದನು.

ಮಾಲೂಖಾನನನ್ನು ಮೋಸಗೊಳಿಸಿ ಕೊಂಡವೀಡುದುರ್ಗಕ್ಕೆ ಉಪಾಯಾಂತರದಲ್ಲಿ ಪ್ರವೇಶ ದೊರಕಿಸಿಕೊಂಡ ಫಕೀರನು ಬೇರಾರೂ ಆಗಿರದೆ ಗೋವಿಂದರಾಜನೇ ಆಗಿದ್ದ. ಅಮಲಕಾರ್ಯ ಸಾಧಿಸಲು, ಆತ ಕಪಟನಾಟಕವನ್ನು ಹೂಡಿದ್ದ. ಅವನನ್ನು ನಿಜವಾದ ಫಕೀರನೆಂದು ತಿಳಿದು ಮಾಲೂಖಾನ ಮೋಸಹೋಗಿ, ತನ್ನ ಗುಟ್ಟನ್ನೆಲ್ಲ ರಟ್ಟುಮಾಡಿದ್ದ. ಮಾಲೂಖಾನನ ವಿಶ್ವಾಸಕ್ಕೆ ಪಾತ್ರನಾಗಿದ್ದ ಫಕೀರ ವೇಷಧಾರಿಯಾದ ಗೋವಿಂದರಾಜನಿಗೆ ಕೊಂಡವೀಡಿನ ದುರ್ಗದ ಆಯಕಟ್ಟು—ಅದರ ದೌರ್ಬಲ್ಯಗಳೆಲ್ಲ ತಿಳಿಯಲು ಹೆಚ್ಚುಕಾಲ ಬೇಕಾಗಲಿಲ್ಲ. ಅವನು ಗಜಪತಿಯ ಸೈನಿಕರಲ್ಲಿ ಕೆಲವರನ್ನು ಹಣದ ಪ್ರಲೋಭದಿಂದ ವಶಪಡಿಸಿ ಕೊಂಡು, ಒಂದು ಕಾರಿರುಳರಾತ್ರಿ ನೂಲೇಣಿಗಳ ಸಹಾಯದಿಂದ ಕೋಟೆ ಯನ್ನೇರಲು ವ್ಯವಸ್ಥೆಮಾಡಿದ. ನೂಲೇಣಿಗಳ ಮೂಲಕ ಕೋಟೆಯ ನ್ನೇರಿದ ರಾಯನ ಸೈನಿಕರು ಕೋಟೆಯ ಬಾಗಿಲನ್ನು ತೆಗೆದರು. ಉಳಿದ ಸೈನ್ಯ ನಿರಾಯಾಸವಾಗಿ ಕೋಟೆಗೆ ನುಗ್ಗಿ ಸುಲಭವಾಗಿ ಅದನ್ನು ವಶ ಪಡಿಸಿಕೊಂಡಿತು.

ರಾತ್ರಿ ನಡೆದ ಈ ಹೋರಾಟದಲ್ಲಿ ಎರಡುಕಡೆಯ ಸೈನಿಕರಿಗೂ ಬಹಳ ನಷ್ಟವುಂಟಾಯಿತು. ಹಠಾತ್ತನೆ ತಮ್ಮಮೇಲೆ ಬಿದ್ದ ರಾಯನ ಸೈನಿಕರನ್ನು ಕಂಡೇ ಶತ್ರು ಸೈನಿಕರು ಹೆದರಿದರು. ಅವರು ಯುದ್ಧಸನ್ನದ್ಧ ರಾಗಿ, ಹೋರಾಟಕ್ಕೆ ಇಳಿಯುವ ಮೊದಲೇ ಅವರನ್ನು ರಾಯನ ಸೈನಿಕರು ಸುತ್ತುವರಿದು, ಕೈಗೆ ಸಿಕ್ಕಿದವರನ್ನು ತಮ್ಮ ಖಡ್ಗಕ್ಕೆ ಬಲಿಕೊಡುತ್ತಾ ಹೊರಟರು. ತಮ್ಮ ತಮ್ಮ ದಳಗಳನ್ನು ಕೂಡಿಸಿಕೊಂಡು ಶತ್ರುಗಳಮೇಲೆ

ಬೀಳುವುದರೊಳಗಾಗಿ ದಳಪತಿಗಳೇ ಶತ್ರುಗಳ ಕೈಸೆರೆಯಾಗಿದ್ದರು. ರಾಚಿರಾಜ, ಭಾಟಚಂದ್ರ ಮಹಾಪಾತ್ರ, ನರಹರಿ ಪಾತ್ರ, ಮಾಲೂಖಾನ್, ಉದ್ದಂಡಖಾನ್ ಮೊದಲಾದ ವೀರರು ಪ್ರತಿಭಟಿಸಿ ಪ್ರಯೋಜನವಾಗದೆ ರಾಯನ ಸೈನಿಕರಿಗೆ ಸೆರೆ ಸಿಕ್ಕಿದ್ದರು. ಆದರೆ ದುರ್ಗಾಧಿಪತಿಯಾದ ರಾಜಕುಮಾರ ವೀರಭದ್ರದೇವನು ಮಾತ್ರ ಸೆರೆ ಸಿಕ್ಕದೆ, ಹೇಗೋ ತಪ್ಪಿಸಿಕೊಂಡನು. ಅವನು ಎಲ್ಲಿಗೆ ಹೋದನೆಂಬುದು ಯಾರಿಗೂ ತಿಳಿಯದಾಗಿತ್ತು. ಅವನನ್ನು ಹುಡುಕಲು ರಾಯನ ಸೈನಿಕರು ಮಾಡಿದ ಪ್ರಯತ್ನವೆಲ್ಲ ವಿಫಲವಾಗಿತ್ತು.

ಕೃಷ್ಣದೇವರಾಯನಿಗೆ ಕೊಂಡವೀಡು ತನ್ನ ವಶವಾದ ವಾರ್ತೆಯನ್ನು ಕೇಳಿ ತುಂಬಾ ಸಂತೋಷ ಉಂಟಾದರೂ, ರಾಜಕುಮಾರ ವೀರಭದ್ರದೇವನು ತಪ್ಪಿಸಿಕೊಂಡು ಹೋದ ಸಂಗತಿಯನ್ನು ಕೇಳಿ ವಿಷಾದ ಉಂಟಾಯಿತು. ಆ ರಾಜಕುಮಾರನೊಬ್ಬ ತನ್ನ ವಶವಾಗಿದ್ದರೆ, ವಿಜಯೋತ್ಸವದ ಸಂತೋಷ ಇಮ್ಮಡಿಸುತ್ತಿತ್ತು.

ರಾಯನು ಕೊಂಡವೀಡು ತನ್ನ ವಶವಾಗಲು ಕಾರಣನಾದ ಗೋವಿಂದರಾಜನನ್ನು ಉಚಿತರೀತಿಯಲ್ಲಿ ಸನ್ಮಾನಿಸಿ, ಅವನನ್ನೇ ಕೊಂಡವೀಡಿನ ದುರ್ಗಾಧಿಪತಿಯನ್ನಾಗಿ ಗೌರವಿಸಿದನು. ಅವನ ಸಹಾಯಕ್ಕೆ ರಾಯನು ಕೊಂಡಮರಸಯ್ಯನನ್ನು ನೇಮಿಸಿ, ಉಳಿದ ಯುದ್ಧವೀರರಿಗೆ ಉಚಿತರೀತಿಯಲ್ಲಿ ಬಹುಮಾನಿಸಿ ಎಲ್ಲರನ್ನೂ ಸಂತೋಷಗೊಳಿಸಿದನು.

ರಾಯನು ಕೊಂಡವೀಡು ದುರ್ಗದಲ್ಲಿ ಕೆಲವು ಕಾಲ ವಿಶ್ರಮಿಸಿಕೊಳ್ಳಲು ನಿಂತು, ಮುಂದಿನ ದಂಡಯಾತ್ರೆಗೆ ಸಿದ್ಧತೆಗಳನ್ನು ಮಾಡಿಕೊಂಡನು.

ಒಂದು ದಿನ ರಾತ್ರಿ ಕೃಷ್ಣದೇವರಾಯನು ಅರಮನೆಯ ಶಯ್ಯಾಗಾರದಲ್ಲಿ ಗಾಢವಾದ ನಿದ್ರೆಯಲ್ಲಿ ಇದ್ದವನು, ಹೊರಗೆ ಗದ್ದಲವಾದುದನ್ನು ಕೇಳಿ ತಟ್ಟನೆ ಎಚ್ಚೆತ್ತನು. ಗದ್ದಲವೇನೆಂದು ನೋಡಲು ಬರುವ ಮೊದಲೇ 'ಖಬೇರ್' 'ಖಬೇರ್' ಎನ್ನುವ ಶಬ್ದ ಕೇಳಿಸಿತು. ಅದರ ಹಿಂದೆಯೇ ಯಾರದೋ ಹೂಂಕಾರ, ರಣಗರ್ಜನೆ ಕೇಳಿಸಿತು. ಒಮ್ಮೆ ಆರ್ತನಾದ, ಮತ್ತೊಮ್ಮೆ ಸಿಂಹನಾದ. ರಾಯನಿಗೆ ನಡೆದಿರುವ ಸಂಗತಿ ಏನೆಂದು

ಕೂಡಲೇ ಅರಿವಾಯಿತು. ತಟ್ಟನೇ ಹಾಸಿಗೆಯಿಂದ ಚಂಗನೆ ಹಾರಿ, ಕತ್ತಿಯನ್ನು ಹಿರಿದು, ಶಬ್ದಬರುತ್ತಿದ್ದ ಕಡೆಗೆ ನುಗ್ಗಿದನು. ಅವನು ಶಯ್ಯಾಗಾರದ ಬಾಗಿಲಿಗೆ ಬಂದು ನೋಡುತ್ತಾನೆ. ಎದುರಿಗೆ ಭಯಂಕರವಾದರೂ ವಿಸ್ಮಯಕರವಾದ ದೃಶ್ಯ ! ಒಬ್ಬ ವೀರನ ಮೇಲೆ ಇಪ್ಪತ್ತು ಮಂದಿ ಪಹರೆಯ ಸೈನಿಕರು ಬಿದ್ದು ಯುದ್ಧಮಾಡುತ್ತಿದ್ದಾರೆ. ಇಷ್ಟಾದರೂ ಆ ವೀರನು ಅವರಿಗೆ ಮಣಿದಿರಲಿಲ್ಲ. ಅವನನ್ನು ಸಮಾಪಿಸುವುದು ಅವರಿಂದ ಸಾಧ್ಯವಾಗಿರಲಿಲ್ಲ. ಅವನು ಬೀಸುತ್ತಿದ್ದ ಕತ್ತಿ ದೀಪದ ಬೆಳಕಿನಲ್ಲಿ ಮಿಂಚಿನ ಬಳ್ಳಿಯಂತೆ ಕುಣಿಯುತ್ತಿತ್ತು. ಅವನು ಒಬ್ಬನೇ ಇಪ್ಪತ್ತು ಮಂದಿಗೂ ಧೈರ್ಯವಾಗಿ ಯುದ್ಧ ಕೊಟ್ಟಿದ್ದನು. ಅವನು ಹಾಕುತ್ತಿದ್ದ ಒಂದೊಂದು ಕತ್ತಿಯ ಏಟಿಗೂ ಉಳಿದವರ ಜೀವ ತಲ್ಲಣಿಸುತ್ತಿತ್ತು. ಅವನನ್ನು ಮುಂದುವರೆಯದಂತೆ, ಅಡ್ಡಕಟ್ಟಿ, ನಿಶಸ್ತ್ರಗೊಳಿಸಿ ಸೆರೆಹಿಡಿಯಲು ಇಪ್ಪತ್ತುಮಂದಿ ಸೈನಿಕರು ತಮ್ಮ ಶಕ್ತಿ, ಜಾಣ್ಮೆಗಳನ್ನೆಲ್ಲಾ ಉಪಯೋಗಿಸಿದರೂ ಅವನನ್ನು ಸೆರೆಹಿಡಿಯಲು ಸಾಧ್ಯವಾಗಿರಲಿಲ್ಲ. ಅವನನ್ನು ಸೆರೆಹಿಡಿಯಲು ಪ್ರಯತ್ನಿಸಿ ಮುಂದೆಬಂದವರೆಲ್ಲಾ ಅವನ ಕೂರ್ಗತ್ತಿಯ ಮೊನೆಗೆ ಬಲಿಯಾಗುತ್ತಿದ್ದರು. ಒಂದು.........ಎರಡು........ನಾಲ್ಕು..........ಆರು...........ಹತ್ತು !...........ಕೃಷ್ಣದೇವರಾಯನ ಕಣ್ಣೆದುರಿನಲ್ಲೇ ಹತ್ತುಮಂದಿ ಸೈನಿಕರ ರುಂಡವನ್ನು ಚೆಂಡಾಡಿದ್ದ, ಲೀಲಾಜಾಲವಾಗಿ, ಆ ಯುವಕ. ರಾಯನು ಅವನಿಂದ ತನಗೆ ಅಪಾಯ ಒದಗಬಹುದೆಂಬುದನ್ನೂ ಮರೆತು, ಅವನ ಧೈರ್ಯ, ಸಾಹಸ, ಖಡ್ಗವಿದ್ಯಾನಿಪುಣತೆಗಾಗಿ ಬೆರಗಾಗಿ ನಿಂತ. ಅವನಿಗೆ ತಿಳಿಯದಂತೆಯೇ ಭಲೆ ! ಭೇಷ್ ! ಭಾಪುರೇ ! ಎಂಬ ಉದ್ಗಾರಗಳು ಬಾಯಿಂದ ಹೊರಬೀಳುತ್ತಿದ್ದವು. ಅಷ್ಟರಲ್ಲಿ ಒಂದು ಅಚಾತುರ್ಯ ನಡೆಯಿತು.

ಆ ವೀರನು ಹತ್ತುಮಂದಿ ಸೈನಿಕರನ್ನು ನೆಲಕ್ಕೆ ಕೆಡಹಿದ ಮೇಲೆ ರಾಯನ ಶಯ್ಯಾಗಾರದ ಕಡೆಗೆ ತಿರುಗಿದಾಗ, ಎದುರಿಗೇ ಕತ್ತಿ ಹಿರಿದು ಕೃಷ್ಣದೇವರಾಯನು ನಿಂತಿದುದನ್ನು ನೋಡುತ್ತಲೇ ಆ ಯುವಕನಿಗೆ ಇಮ್ಮಡಿ ಆವೇಶ ಬಂದಂತಾಗಿ, ರಾಯನ ಮೇಲೆ ಬೀಳಲು ಏರಿಹೋದನು. ಉಳಿದ ಸೈನಿಕರು ಅಡ್ಡಕಟ್ಟಿದ್ದುದರಿಂದ ಸಾಧ್ಯವಾಗಲಿಲ್ಲ. ಕಡೆಗೆ ಹತಾಶನಾದ ಆ ಯುವಕ ಬೇರೇನು ಮಾಡಲು ತೋರದೆ, ಕೈಯ್ಯಲ್ಲಿದ್ದ ಕತ್ತಿ

ಯನ್ನೇ ರಾಯನ ಕಡೆಗೆ ಗುರಿಯಿಟ್ಟು ಎಸೆದನು. ಆದರೆ, ಅಪಾಯ ವನ್ನರಿತ ರಾಯನು ಕೂಡಲೇ ಪಕ್ಕಕ್ಕೆ ಸರಿದು, ಆ ಕತ್ತಿಯ ಹೊಡೆತ ದಿಂದ ಪಾರಾದನು. ಇದು ರಾಯನ ಸುದೈವವೆಂದೇ ಹೇಳಬೇಕು!

ತಾನಾಗಿ ನಿಶ್ಶಸ್ತ್ರನಾದ ಆ ಯುವಕವನ್ನು ಸೆರೆಹಿಡಿಯಲು ಈಗ ಹೆಚ್ಚು ಕಷ್ಟವಾಗಲಿಲ್ಲ. ಸೈನಿಕರು ಅವನಮೇಲೆ ಬಿದ್ದು ಅವನನ್ನು ಸೆರೆ ಹಿಡಿದು, ರಾಯನಮುಂದೆ ನಿಲ್ಲಿಸಿದರು.

"ಯಾರು ನೀನು?" ರಾಯನು ಗಂಭೀರವಾಗಿ ಪ್ರಶ್ನಿಸಿದ, ಆ ಯುವಕನನ್ನು ತೀಕ್ಷ್ಣವಾಗಿ ಅಡಿಯಿಂದ ಮುಡಿಯವರೆಗೆ ಪರೀಕ್ಷಿಸಿ.

ಈ ಪ್ರಶ್ನೆಗೆ ಆ ಯುವಕ ಉತ್ತರ ಕೊಡದೆ ಉನ್ಮತ್ತನಂತೆ ಗಹಗಹಿಸಿ ನಕ್ಕನು. ಅವನ ಕರ್ಕಶವಾದ ನಗೆಯನ್ನು ಕೇಳಿ ಅವನಿಗೆ ಮತಿಗೆಟ್ಟಿರ ಬೇಕೆಂದು ರಾಯನು ಭಾವಿಸಿದನು.

ಮತ್ತೆ ಪ್ರಶ್ನಿಸಿದ 'ನೀನು ಯಾರು? ಇಲ್ಲಿಗೇಕೆ ಬಂದೆ?'

"ನಾನೇ ನಿಮ್ಮ ಭಾಗದ ಯಮ! ನಿಮ್ಮನ್ನು ಯಮ ಸದನಕ್ಕೆ ಅಟ್ಟಲು ಬಂದೆ!"

ಮತ್ತೆ ವಿಕಟವಾದ ನಗು.

"ನಾನು ನಿನಗೆ ಮಾಡಿದ ಅನ್ಯಾಯವೇನು? ನಾನು ಮಾಡಿದ ಯಾವ ಅಪಚಾರಕ್ಕೆ ಈ ಶಿಕ್ಷೆಯನ್ನು ನನಗೆ ವಿಧಿಸಲು ಬಂದೆ?"

"ಈ ಪ್ರಶ್ನೆಯನ್ನು ನೀವೇ ಕೇಳಿಕೊಳ್ಳಿ!"

"ನಿನ್ನ ಮಾತು ನನಗೆ ವಿಸ್ಮಯವಾಗಿದೆ! ನಿನ್ನ ಒಗಟಿನ ಭಾಷೆ ನನಗೆ ಅರ್ಥವಾಗುವುದಿಲ್ಲ. ವಿವರಿಸಿ ಹೇಳು. ನೀನು ಯಾರು? ನನ್ನನ್ನು ಕೊಲ್ಲಲು ಏಕೆಬಂದೆ? ನನ್ನಮೇಲೆ ಕೈಮಾಡಲು ಬಂದ ನಿನಗೆ ಯಾವ ಶಿಕ್ಷೆ ಕಾದಿದೆ ಎಂದು ತಿಳಿದಿದೆಯೆ?" ಎಂದು ಕೃಷ್ಣದೇವರಾಯ ಪ್ರಶ್ನಾಮಾ ಲಿಕೆಯನ್ನೇ ಹಾಕಿದ.

"ನಿಮ್ಮನ್ನು ಕೊಲ್ಲಲು ಬಂದ ನನಗೆ ಯಾವ ಶಿಕ್ಷೆ ಕಾದಿದೆ ಎಂಬು ದನ್ನು ನಾನು ಬಲ್ಲೆ. ಹೆಚ್ಚೆಂದರೆ ನನಗೆ ಮರಣದಂಡನೆಯನ್ನು ವಿಧಿಸ ಬಹುದು! ಇದಕ್ಕೂ ಹೆಚ್ಚಿನ ಶಿಕ್ಷೆ ನೀವು ವಿಧಿಸಲಾರಿರಿ? ನಾನು ಇದ

ಕ್ಕೆಲ್ಲಾ ಹೆದರುವ ವ್ಯಕ್ತಿಯಾಗಿದ್ದರೆ ನಿಮ್ಮ ಕೊಲೆಗೈಯ್ಯಲು, ಈ ನಡು ರಾತ್ರಿಯಲ್ಲಿ ಏಕಾಕಿಯಾಗಿ ಬರುತ್ತಿದ್ದನೆ? ಈ ಕೊಂಡವೀಡುದುರ್ಗ ಎಂದು ನನ್ನ ಕೈ ಬಿಟ್ಟುಹೋಯಿತೋ ಅಂದೇ ಜಗತ್ತಿನಪಾಲಿಗೆ ರಾಜಕುಮಾರ ವೀರಭದ್ರದೇವನು ಮಡಿದ. ಈಗ ಉಳಿದಿರುವ ನಾನು ವೀರಭದ್ರದೇವನ ಜೀವಂತ ಹೆಣವೇ ಹೊರತು ಉತ್ಕಲಾಧಿಪತಿಯ ಕುವರನಲ್ಲ!"

ಕೃಷ್ಣದೇವರಾಯನಿಗೆ ಈ ಮಾತು ಕೇಳಿ ಸಹಸ್ರ ಸಿಡಿಲು ಬಡಿದಂತೆ ಆಯಿತು.

"ಏನು? ಏನು? ನೀನು ಉತ್ಕಲಾಧಿಪತಿಯ ಕುಮಾರ ವೀರಭದ್ರ ದೇವನೇ?"

"ಹೌದು ಆ ವೀರಭದ್ರನ ಪ್ರೇತವೇ ನಾನು!"

"ನೀನೇಕೆ ಹಾಗೆ ತಿಳಿಯಬೇಕು?"

"ಹೀಗೆ ತಿಳಿಯದೆ ಮತ್ತೆ ಹೇಗೆ ತಿಳಿಯಲಿ? ಪೂಜ್ಯರಾದ ತಂದೆಗೆ ಪ್ರಾಣವನ್ನು ಒತ್ತೆ ಇಟ್ಟಾದರೂ ಕೊಂಡವೀಡುದುರ್ಗವನ್ನು ಶತ್ರುಗಳಿಂದ ರಕ್ಷಿಸುವೆ ಎಂದು ವಚನಕೊಟ್ಟಿದ್ದೆ ಇಂದು ನಾನು ವಚನಭ್ರಷ್ಟನಾಗಿದ್ದೇನೆ. ದುರ್ಗ ಶತ್ರುಗಳ ಪಾಲಾದರೂ, ನಾನುಮಾತ್ರ ಜೀವಂತನಾಗಿದ್ದೇನೆ. ವಚನಭ್ರಷ್ಟನಾಗಿ ಬದುಕುವುದಕ್ಕಿಂತಲೂ ಸಾವು ಸಾವಿರಪಾಲು ಸುಖಕರ. ಸಾವು ಎಂದಿದ್ದರೂ ಸಿದ್ಧ! ಮತ್ತೊಮ್ಮೆ ದುರ್ಗವನ್ನು ಶತ್ರುಗಳ ಕೈಯಿಂದ ಬಿಡಿಸಿಕೊಳ್ಳಲು ಏಕೆ ಪ್ರಯತ್ನಿಸಿ ನೋಡಬಾರದೆಂದು ಅನಿಸಿ, ಬೇರೆ ದಾರಿ ಕಾಣದೆ, ಇಂದು ನಿಮ್ಮನ್ನು ಕೊಲೆಗೈಯ್ಯಲು ಇಲ್ಲಿಗೆ ಬಂದೆ. ನನ್ನ ದುರದೃಷ್ಟ—ನಿಮ್ಮ ಅದೃಷ್ಟ! ಕಾವಲುಗಾರರು ಎಚ್ಚರವಾಗಿದ್ದುದರಿಂದ ನೀವು ಬದುಕಿಕೊಂಡಿರಿ. ಇಲ್ಲದೆ ಇದ್ದಿದ್ದರೆ ನೀವು ಯಮ ಸದನಕ್ಕೆ ಹೋಗಿ ಎಷ್ಟೋ ಕಾಲವಾಗುತ್ತಿತ್ತು. ಈಗ ಅವುಗಳನ್ನು ನೆನೆದು ಪ್ರಯೋಜನವಿಲ್ಲ. ನನಗೆ ಯಾವ ಶಿಕ್ಷೆ ಬೇಕಾದರೂ ವಿಧಿಸಬಹುದು. ಮರಣ ದಂಡನೆಯಾದರೆ—ಬಹಳ ಸಂತೋಷ ಕರ್ತವ್ಯಚ್ಯುತನಾಗಿ ಬದುಕುವ ಬಾಳಿಗಿಂತಲೂ ಸಾವು ಹೆಚ್ಚುಸುಖ. ಹೇಗೂ ನನ್ನಮೇಲೆ ರಾಜದ್ರೋಹದ ಆರೋಪವಿದೆ. ಅದಕ್ಕೆ ಕೊಡಬೇಕಾದ ಶಿಕ್ಷೆಯನ್ನು ಇಲ್ಲೇ ಈ ಘಳಿಗೆ ಯಲ್ಲಿ ಕೊಟ್ಟರೆ ನಾನು ನಿಮಗೆ ಕೃತಜ್ಞನಾಗಿರುತ್ತೇನೆ!"

"ವೀರಪುರುಷನಾದ ನಿನಗೆ ಮರಣದಂಡನೆಯನ್ನು ವಿಧಿಸಲು ನನಗೆ ಇಷ್ಟವಿಲ್ಲ. ನನ್ನಮೇಲೆ ಕೈಮಾಡಲು ಬಂದುದು ಮಹಾಪರಾಧ. ಆದರೂ ನಿನಗೆ ಶಿಕ್ಷೆ ವಿಧಿಸಲು ನನಗೆ ಇಷ್ಟವಿಲ್ಲ."

"ಏಕೆ?"

"ನಿನ್ನಂಥ ವೀರಪುರುಷರು ಬದುಕಿರುವುದರಿಂದ ನಮಗೆ ತುಂಬಾ ಪ್ರಯೋಜನವಿದೆ!"

"ಏಕೆ? ನನ್ನನ್ನು ಇದಕ್ಕೂ ಹೆಚ್ಚಿನ ಅಪಮಾನಗೊಳಿಸಿ ಚಿತ್ರಹಿಂಸೆ ಕೊಟ್ಟು ಕೊಲ್ಲಿಸಲೆಂದೆ?"

"ಸಾಮ್ರಾಟ್ ಕೃಷ್ಣದೇವರಾಯನೆಂದಿಗೂ ಅಂತಹ ಹೇಯ ಕೆಲಸಕ್ಕೆ ಕೈ ಹಾಕುವುದಿಲ್ಲ. ಅವನು ನಿಜವಾದ ವೀರರ ಮಿತ್ರ ಆತನ ಪ್ರಾಣರಾಗಿ, ಶರಣಾಗತರಾದವರನ್ನು ಎಂದಿಗೂ ಶಿಕ್ಷಿಸುವುದಿಲ್ಲ!"

"ನಾನು ಶರಣಾಗತನಾದರೆ ತಾನೇ, ಸಾಮ್ರಾಟರ ಅನುಗ್ರಹಕ್ಕೆ ಪಾತ್ರನಾಗುವುದು! ನಾನು ಶರಣಾಗತನಾಗುವುದು ಸಾಮ್ರಾಟರಿಗಲ್ಲ—ಕತ್ತಿಯ ಕೂರಲಗಿಗೆ!"

ಎಂದು ಹೇಳಿ ವಿಕಟನಾಗಿ ನಕ್ಕು ತಲೆಕೂದಲನ್ನು ಕಿತ್ತುಕೊಂಡನು.

ಇದನ್ನು ನೋಡಿ ರಾಯನಿಗೆ ವೀರಭದ್ರದೇವನು ತನ್ನ ಕಾರ್ಯದಲ್ಲಿ ಕೃತಕೃತ್ಯನಾಗದೆ ಇದ್ದುದರಿಂದ ಉನ್ಮತ್ತನಾಗಿ, ಭ್ರಮಿಷ್ಟನಂತೆ ಮಾತನಾಡುತ್ತಿದ್ದಾನೆ ಎಂದೆನಿಸಿತು. ಅಪರಾತ್ರಿಯಲ್ಲಿ ಚಿತ್ತವಿಕಾರಗೊಂಡಿದ್ದ ಅವನೊಂದಿಗೆ ಮಾತನಾಡಿ ಪ್ರಯೋಜನವಿಲ್ಲವೆಂದು ಅರಿತು, ರಾಜಕುಮಾರನನ್ನು ಸೆರೆಮನೆಯಲ್ಲಿ ಬಂಧಿಸಿ ಇಡಲು ಆಜ್ಞೆಮಾಡಿ, ರಾಯನು ತನ್ನ ಶಯ್ಯಾಗಾರಕ್ಕೆ ಹೊರಟನು. ಅಲ್ಲಿ ಹಂಸತೂಲಿಕಾತಲ್ಪದ ಮೇಲೆ ಮಲಗಿದರೂ ರಾಯನಿಗೆ ನಿದ್ರೆ ಹತ್ತಲಿಲ್ಲ. ಅವನ ಕಣ್ಣ ಮುಂದೆ ರಾಜಕುಮಾರ ವೀರಭದ್ರದೇವನ ಭದ್ರಾಕೃತಿ ಅಚಲವಾಗಿ ನಿಂತುಕೊಂಡು ರಾಯನನ್ನು ಮೂದಲಿಸುತ್ತಿತ್ತು. ರಾಯನು ಆ ರಾತ್ರಿ ನಿದ್ರೆಯಿಲ್ಲದೆ ಕಳೆದುದರಲ್ಲಿ ಆಚ್ಚರಿಯಿಲ್ಲ.

೬

ಮರುದಿನ ಕೃಷ್ಣದೇವರಾಯನು ಹತ್ಯಾಕಾರಿಯಾದ ರಾಜಕುಮಾರ ವೀರಭದ್ರದೇವನನ್ನು ವಿಚಾರಿಸಿಕೊಳ್ಳಲು ಅವನನ್ನು ಬಳಿಗೆ ಬರಮಾಡಿಕೊಂಡು, ವೀರೋಚಿತವಾದ ರೀತಿಯಲ್ಲಿ ನಡೆಸಿಕೊಂಡನು. ರಾಯನ ಸೌಜನ್ಯವನ್ನು ಕಂಡು ವೀರಭದ್ರದೇವನಿಗೆ ಅಚ್ಚರಿಯಾಗದೆ ಇರಲಿಲ್ಲ. ಅವನು ರಾಯನ ಮುಖವನ್ನೇ ಗಂಭೀರ ಮುದ್ರೆಯಲ್ಲಿ ನೋಡುತ್ತಾ ಮದಗಜದಂತೆ ನಿಂತಿದ್ದನು. ಅವನು ನಿಂತ ನಿಲುವನ್ನು ನೋಡಿದರೆ, ಗುಂಪಿನಿಂದ ಬೇರ್ಪಡಿಸಿ ಹಳ್ಳಕ್ಕೆ ಕೆಡಹಲ್ಪಟ್ಟು ಸೆರೆಹಿಡಿಯಲ್ಪಟ್ಟ, ಮದ್ದಾನೆಯ ನೆನಪನ್ನು ತರುತ್ತಿತ್ತು.

ಕೃಷ್ಣದೇವರಾಯನಿಗೆ ಅದೇನನಿಸಿತೋ ಅವನ ಕೈಕಾಲುಗಳಿಗೆ ಬಿಗಿಸಿದ ಸಂಕೋಲೆಗಳನ್ನು ತೆಗೆದು ಹಾಕಲು ಆಜ್ಞೆಮಾಡಿದನು. ಅದರಂತೆ ಅವುಗಳನ್ನು ವಿಸರ್ಜಿಸಲಾಯಿತು. ಅನಂತರ ರಾಯನು ವೀರಭದ್ರದೇವನನ್ನು ಮರ್ಯಾದೆಯಿಂದ ಬಳಿಗೆ ಕರೆದು ಕುಳಿತುಕೊಳ್ಳಲು ಉಚಿತಾಸನವನ್ನು ತೋರಿಸಿದನು. ವೀರಭದ್ರದೇವನು ಮರುಮಾತಾಡದೆ ಆ ಆಸನದಲ್ಲಿ ಮಂಡಿಸಿದನು.

ವೀರಭದ್ರದೇವನು ಒಳ್ಳೆ ಹರೆಯದ ಯುವಕ. ಅವನಿಗೆ ಇನ್ನೂ ವಿವಾಹವಾಗಿರಲಿಲ್ಲ. ವಯಸ್ಸು ಸುಮಾರು ಇಪ್ಪತ್ತೈದು ದಾಟಿರಲಾರದು. ನಿಯತ ಆಹಾರ, ಅಂಗಸಾಧನೆಗಳಿಂದ ಅವನ ದೇಹ ವಜ್ರದೇಹವಾಗಿತ್ತು. ಲಕ್ಷಣವಾಗಿ, ರಾಜವರ್ಚಸ್ಸಿನಿಂದ ಹೊಳೆಯುವ ಮುಖ. ದೀರ್ಘವಾದ

ಬಾಹುಯುಗ್ಮ. ಅವು ಅವನು ಖಡ್ಗವಿದ್ಯಾನಿಪುಣನೆಂಬುದನ್ನು ಸಾರಿ ಹೇಳುತ್ತಿತ್ತು. ತೇಜಸ್ವಿಯಾದ ಅವನ ಕಣ್ಣುಗಳೇ ಸಾಕು—ಎಂತಹ ವರಲ್ಲೂ ಗೌರವ ಮೂಡಿಸಲು. ಇಂದು ಅವನು ಏನನ್ನೋ ಆಲೋಚಿಸುತ್ತಾ ಕುಳಿತ ಭಂಗಿಯಲ್ಲಿ ಕನಸನ್ನು ಕಾಣುವ ಕವಿಯ ತನ್ಮಯತೆ ಇತ್ತು. ಅನ್ಯಮನಸ್ಕನಾಗಿ ಕುಳಿತ ವೀರಭದ್ರದೇವನನ್ನು ರಾಯನೇ ಎಚ್ಚರಿಸಬೇಕಾಯಿತು.

"ರಾಜಕುಮಾರರು ಏನನ್ನೋ ಚಿಂತಿಸುತ್ತಿದ್ದಾರೆ!" ಎಂದು ನಗೆಯಾಡಿದ ಕೃಷ್ಣದೇವರಾಯ.

ವೀರಭದ್ರದೇವನು ಮಾತನಾಡದೆ ಸುಮ್ಮನೆ ನಸುನಕ್ಕ.

"ಏಕೆ ? ನನ್ನೊಡನೆ ಮಾತನಾಡಬಾರದೆಂದು ಪ್ರತಿಜ್ಞೆಮಾಡಿದ್ದೀರಾ"

"ನಿಮ್ಮೊಡನೆ ಮಾತನಾಡಬಾರದೆಂದು ಮಾತ್ರವೇ ಅಲ್ಲ. ನಿಮ್ಮ ಮುಖಸಂದರ್ಶನ ಕೂಡಾ ಮಾಡಬಾರದೆಂದು ಸಂಕಲ್ಪಮಾಡಿದ್ದೇನೆ."

"ನನ್ನ ಮುಖಾವಲೋಕನ ಮಾಡಬಾರದಂತಹ ಹೇಯ ಕೃತ್ಯ ನನ್ನಿಂದೇನಾಗಿದೆ?''

"ಅದೇನೆಂದು ನಿಮಗೇ ತಿಳಿದಿದೆ!"

"ನನಗೆ ತಿಳಿಯದು. ರಾಜಕುಮಾರರು ಅಪ್ಪಣೆ ಕೊಡಿಸಬೇಕು. ನಾನು ರಾಜಕುಮಾರರನ್ನು ಕಾಣುತ್ತಿರುವುದು ಇದೇ ಮೊದಲು!"

"ನೀವು ಮಾಡಿರುವ ಹೇಯ ಕೃತ್ಯವನ್ನು ನುಡಿದು ನನ್ನ ನಾಲಿಗೆಯನ್ನೇಕೆ ಹೊಲಸುಮಾಡಿಕೊಳ್ಳಲಿ........" ಎಂದು ಹೇಳಿ ಕೊಂಚ ಕಾಲ ಮೌನವಾಗಿ ಕುಳಿತ. ಮರುಕ್ಷಣದಲ್ಲಿ ಹೇಳಿದ.

"ನೀವು ಮಾಡಿರುವ ಹೇಯ ಕೃತ್ಯವೇ—ಅಪಚಾರವೇ? ನನಗೆ ಮಾತ್ರವಲ್ಲ, ಇಡೀ ಉತ್ಕಲಕ್ಕೆ ಅಪಚಾರಮಾಡಿದ್ದೀರಿ."

"ಹೇಗೆ?"

"ನೀವು ಮೋಸದಿಂದ ನಮ್ಮ ಉದಯಗಿರಿ ಕೋಟೆಯನ್ನೂ, ಕೊಂಡವೀಡು ಕೋಟೆಯನ್ನೂ ವಶಪಡಿಸಿಕೊಂಡಿದ್ದೀರಿ. ನಿಮ್ಮಂತಹ ವೀರರು ಮಾಡುವ ಕೆಲಸವಲ್ಲ ಇದು. ಧೈರ್ಯವಿದ್ದರೆ, ನ್ಯಾಯಮಾರ್ಗದಲ್ಲೇ ನಮ್ಮೊಡನೆ ಯುದ್ಧಮಾಡಿ ಗೆಲ್ಲಬೇಕಾಗಿತ್ತು. ಅದುಬಿಟ್ಟು ಹೇಡಿಯಂತೆ

ಮೋಸದಿಂದ ನಿಮ್ಮ ಕಾರ್ಯವನ್ನು ಸಾಧಿಸಿದಿರಿ. ಇದಕ್ಕಿಂತ ಬೇರೆ ಹೇಯಕೃತ್ಯ ಬೇಕೆ?"

"ನನ್ನ ಅಪರಾಧ ಇಷ್ಟೇತಾನೆ? ಯುದ್ಧವೆಂದರೆ ಇಂತಹ ಅನೇಕ ಅಪರಾಧಗಳನ್ನು ಮಾಡಬೇಕಾಗುತ್ತದೆ. ಯುದ್ಧದಲ್ಲಿ ಇವು ಅಪರಾಧ ಗಳೆಂದಾಗಲೀ, ಹೇಯಕೃತ್ಯವೆಂದಾಗಲೀ ಪರಿಗಣಿತವಾಗದು. ಇವು ಯುದ್ಧತಂತ್ರಗಳೆನಿಸಿಕೊಳ್ಳುತ್ತವೆ. ಇದನ್ನು ರಾಜಕಾರಣಪಟುಗಳಾದ ನೀವೇ ನನಗಿಂತ ಚೆನ್ನಾಗಿ ತಿಳಿದಿರಬೇಕಲ್ಲವೆ?"

ಈ ಮಾತಿಗೆ ವೀರಭದ್ರನು ನಿರುತ್ತರನಾದನು—ಒಂದು ಕ್ಷಣ. ಮರುಕ್ಷಣದಲ್ಲಿ ಹೇಳಿದ "ಹಾಗಾದರೆ ನಾನು ನಿಮ್ಮನ್ನು ಕೊಲ್ಲಲೆಳಸಿದುದೂ ಒಂದು ಯುದ್ಧ ತಂತ್ರವೆಂದು ನೀವೇಕೆ ತಿಳಿಯಬಾರದು?"

"ನನ್ನ ದೃಷ್ಟಿಯಲ್ಲಿ ನೀವು ಹತ್ಯಾಕಾರಿಯೇ ಅಲ್ಲ. ದುರ್ಗ ಕೈ ಬಿಟ್ಟುಹೋದ ಸಿಟ್ಟನಲ್ಲಿ ನನ್ನನ್ನು ಕೊಲೆಮಾಡಿದರೆ, ದುರ್ಗ ವಶವಾದೀ ತೆಂದು ಬಗೆದು ನನ್ನ ಕೊಲೆಯ ಪ್ರಯತ್ನ ನಡೆಸಿದಿರಿ. ಆದರೆ ನನ್ನ ಅದೃಷ್ಟ. ನಿಮ್ಮ ಹಂಚಿಕೆ ಈಡೇರಲಿಲ್ಲ!"

ಎಂದು ರಾಯನು ನಸುನಕ್ಕ.

"ಹಾಗಾದರೆ ನನ್ನ ಕೃತ್ಯ ಅಕೃತ್ಯವಲ್ಲವೆಂದಾಯಿತು!"

"ಹೌದು!"

"ಹಾಗಾದರೆ ನಾನೇಕೆ ನಿಮ್ಮಲ್ಲಿ ಕ್ಷಮೆ ಯಾಚಿಸಬೇಕು?"

"ನಿನಗೆ ನಿನ್ನ ಕೃತ್ಯಕ್ಕಾಗಿ ಪಶ್ಚಾತ್ತಾಪವಾಗಿದ್ದರೆ ಕ್ಷಮೆ ಯಾಚಿಸ ಬಹುದು. ಇಲ್ಲದಿದ್ದರೆ ಕ್ಷಮೆ ಯಾಚಿಸಬೇಕೆಂಬ ಕಡ್ಡಾಯವಿಲ್ಲ."

"ನನಗೆ ನನ್ನ ಕೃತ್ಯಕ್ಕಾಗಿ ಹಿಂದೆಯೂ ಪಶ್ಚಾತ್ತಾಪವಾಗಿರಲಿಲ್ಲ, ಈಗಲೂ ಪಶ್ಚಾತ್ತಾಪವಾಗುತ್ತಿಲ್ಲ ಎಂಬ ಮಾತ್ರಕ್ಕೆ ನೀವು ನನಗೆ ಶಿಕ್ಷೆ ವಿಧಿಸದೆ ಬಿಡಬಾರದು. ನಾನು ನಿಮ್ಮಮೇಲೆ ಕೈಮಾಡಿದುದು ಉಂಟು. ಅದು ಅಪರಾಧವೆನ್ನುವುದು ನನಗೆ ತಿಳಿದಿದೆ. ಅದಕ್ಕೆ ತಕ್ಕ ಶಿಕ್ಷೆಯನ್ನು ಮರಣದಂಡನೆಯನ್ನು ನನಗೆ ವಿಧಿಸಬೇಕು. ನನ್ನಲ್ಲಿ ನೀವು ದಯೆ ತೋರಬಾರದು!"

"ಏಕೆ?"

"ನನಗೆ ಬದುಕುವ ಇಚ್ಛೆ ಇಲ್ಲ. ತಂದೆಗೆ ಕೊಟ್ಟಿದ್ದ ವಚನವನ್ನು ಪಾಲಿಸದೆ ಇದ್ದಮೇಲೆ ಇನ್ನು ಬದುಕಿ ಪ್ರಯೋಜನವೇನು ?"

"ಈಗಲೂ ನಿಮ್ಮ ವಚನಭಂಗಗೊಂಡಿಲ್ಲ! ಆಲೋಚಿಸಿದರೆ ನಿಮಗೇ ತಿಳಿಯುತ್ತದೆ—ಹೇಗೆಂದು!"

"ನನ್ನ ವಚನಭಂಗವಾಗಿಲ್ಲವೆ ?..........ಕೊಂಡವೀಡು ನನ್ನ ಕೈಬಿಟ್ಟುಹೋಗಿಲ್ಲವೇ ? ನನ್ನ ಮಿತ್ರರೆಲ್ಲರೂ ಸೆರೆಮನೆಯಲ್ಲಿಲ್ಲವೆ ? ಇನ್ನೂ ನನ್ನ ಪ್ರತಿಜ್ಞೆ ಉಳಿದಿದೆಯೆ ?"

"ಉಳಿದಿದೆ. ನೀವು ಕೊಂಚ ಸಮಾಧಾನವಾಗಿ ಆಲೋಚನೆ ಮಾಡಿದರೆ ಈ ಮಾತಿನ ಅರ್ಥ ನಿಮಗೆ ಚೆನ್ನಾಗಿ ಆಗುತ್ತದೆ. ಇಂದು ಕೊಂಡವೀಡನ್ನು ನಾವು ಗೆದ್ದಿದ್ದೇವೆ. ಆದರೆ ನಮ್ಮನ್ನು ನೀವು ಗೆದ್ದಿದ್ದೀರಿ. ನಿಮ್ಮ ಶೌರ್ಯ ಸಾಹಸಾದಿ ಗುಣಗಳು ನಮ್ಮನ್ನು ಗೆದ್ದಿವೆ."

ಎಂದು ಹೇಳಿ ರಾಯನು ವೀರಭದ್ರನ ಮುಖವನ್ನು ದಿಟ್ಟಿಸಿದ ತನ್ನ ಮಾತಿನ ಪರಿಣಾಮವನ್ನು ತಿಳಿಯಲು. ಆದರೆ ವೀರಭದ್ರದೇವನು ಮೊದಲಿನಂತೆಯೇ ನಿರ್ವಿಕಾರನಾಗಿ ಕುಳಿತಿದ್ದನು.

"ನೀವು ನಮ್ಮನ್ನು ಗೆದ್ದಿದ್ದೀರಿ. ನಿಮ್ಮ ಶೌರ್ಯ ಪ್ರತಾಪಗಳು ನಮ್ಮನ್ನು ಗೆದ್ದಿದೆ ನಾನೇ ಕಣ್ಣಾರ ಕಂಡಿದ್ದೇನೆ—ನಿಮ್ಮ ಶೌರ್ಯ ಎಂತಹುದೆಂದು. ಒಬ್ಬರೇ ನಿಂತು ಇಪ್ಪತ್ತುಮಂದಿ ಸೈನಿಕರನ್ನು ಎದುರಿಸಿ ಹೋರಾಡುವುದು ಸುಮ್ಮನಾಗಲಿಲ್ಲ. ಇತರರಿಂದ ಆಗದ ಆ ಸಾಹಸ ನೀವು ಮಾಡಿ ತೋರಿಸಿದ್ದೀರಿ. ನಿಮ್ಮ ಖಡ್ಗವಿದ್ಯಾ ಪರಿಣತಿಗೆ, ರಣಕೇಳಿಗೆ ನಾನು ಮಾರುಹೋಗಿದ್ದೇನೆ. ನಿಮ್ಮಂಥ ವೀರ ಪುರುಷರನ್ನು ಸ್ನೇಹಿತರನ್ನಾಗಿ ಪಡೆದರೆ ನನಗೊಂದು ಹೆಗ್ಗಳಿಕೆ ಎಂದು ಭಾವಿಸುತ್ತೇನೆ. ನೀವು ಶತ್ರುಪಂಗಡದವರು ದಿಟ. ಶತ್ರುವಾದರೇನಂತೆ ನೀವು ವೀರ ಪುರುಷರು. ನಿಮಗೆ ವೀರಪೂಜೆ ಸಲ್ಲಲೇಬೇಕು. ಆ ಬಗ್ಗೆ ಯಾರಿಗೂ ಸಂಶಯವಿಲ್ಲ ಅಂತಲೇ ನಿಮ್ಮ ಬಗ್ಗೆ ನನಗಿರುವ ಪ್ರೀತಿ ಗೌರವಗಳನ್ನು ತೋರಿಸಲು ಕರೆಸಿಕೊಂಡಿದ್ದೇನೆ. ನೀವು ಇಚ್ಛೆಸುವುದಾದರೆ ನಾವು ಗೆದ್ದ ಕೊಂಡವೀಡನ್ನೇ ನಿಮಗೆ ಮತ್ತೆ ಕೊಡುತ್ತೇನೆ. ಆದರೆ ನೀವು ನಮ್ಮ ಪ್ರತಿನಿಧಿಯಾಗಿ ಆಳಬೇಕು ಅಷ್ಟೆ. ನಿಮಗೆ ಕೊಂಡವೀಡು ಆಳುವುದು

ಅಪ್ರಿಯವಾಗಿದ್ದರೆ ಹೇಳಿ, ನಿಮ್ಮನ್ನು ದೂರದ ಮಲೆಬೆನ್ನೂರು ಸೀಮೆಗೆ ಮ್ಹಾಂಡಲೀಕರನ್ನಾಗಿ ನೇಮಿಸುತ್ತೇನೆ. ಮುಖ್ಯ ನಿಮ್ಮಂಥ ಅಪ್ರತಿಮ ವೀರರು ನಮ್ಮ ಸ್ನೇಹಿತರಾಗಿರಬೇಕೆಂಬುದೇ ನನ್ನ ಆಸೆ, ಇದರಲ್ಲಿ ಯಾವ ದುರುದ್ದೇಶವೂ ಇಲ್ಲ. ನಿಮ್ಮ ಮನಸ್ಸಿನಲ್ಲಿ ಇರುವುದನ್ನು ನಿಸ್ಸಂಕೋಚವಾಗಿ ತಿಳಿಸಬೇಕು" ಎಂದು ಹೇಳಿದನು.

ಕೃಷ್ಣದೇವರಾಯನ ಮಾತುಗಳನ್ನು ಕೇಳಿ ರಾಜಕುಮಾರ ವೀರಭದ್ರದೇವನು ಬೆರಗಾಗಿ ಶಿಲಾವಿಗ್ರಹದಂತೆ ಕುಳಿತನು. ಕೃಷ್ಣದೇವರಾಯನು ಶತ್ರುವಾದ ತನ್ನನ್ನು ಈಪರಿಯಲ್ಲಿ ನಡೆಸಿಕೊಳ್ಳುವನೆಂದು ಅವನೆಂದೂ ಎಣಿಸಿರಲಿಲ್ಲ. ಯಾವ ಕೃಷ್ಣದೇವರಾಯನನ್ನು ಕೊಲೆ ಮಾಡಲು ತಾನು ಹೋಗಿದ್ದನೋ ಅದೇ ಕೃಷ್ಣದೇವರಾಯನಿಂದ, ಕ್ಷಮಾದಾನ ಮಾತ್ರವೇ ಅಲ್ಲ, ಸನ್ಮಾನ, ವೀರಪೂಜೆ ಸಲ್ಲುವುದೆಂದು ಕನಸು ಮನಸ್ಸಿನಲ್ಲಿ ಊಹಿಸಿರಲಿಲ್ಲ. ಅಂತಲೇ ಅವನು ತನ್ಮೂಲಕವಾಗಿ ಕುಳಿತ-ಕೆಲವು ಕ್ಷಣ ಮಾತು ಮರೆತು. ಅನಂತರ ಹೇಳಿದ.

"ಸಾಮ್ರಾಟರು ನನ್ನಮೇಲೆ ಅಪಾರ ಅನುಗ್ರಹ ಮಾಡಿದ್ದೀರಿ. ಈ ಅನುಗ್ರಹಕ್ಕೆ ನಾನು ಎಳ್ಳಷ್ಟೂ ಪಾತ್ರನಲ್ಲ. ತಮ್ಮನ್ನುಕೊಲೆಗೈಯ್ಯಲು ಬಂದ ನನ್ನನ್ನು ಕ್ಷಮಿಸಿ, ಸ್ನೇಹಹಸ್ತ ನೀಡುತ್ತಿರುವುದು ತಮ್ಮ ಉದಾರ ಚರಿತೆಗೆ, ಘನತೆಗೆ ನಿದರ್ಶನವಾಗಿದೆ. ಆದರೆ ತಮ್ಮ ಕೃಪಾಶ್ರಯದಲ್ಲಿ ನಿಲ್ಲಲು ನನಗೆ ಅರ್ಹತೆಯಿಲ್ಲ. ನಾನು ಪರಮ ಪಾಪಿ! ತಮ್ಮ ಹತ್ಯಾಕಾರಿ! ನನ್ನನ್ನು ತಾವು ವಿಚಾರಣೆಗೆ ಗುರಿಪಡಿಸಿ ಕ್ರೂರವಾಗಿ ಶಿಕ್ಷಿಸಬೇಕೇ ಹೊರತು ನನ್ನಮೇಲೆ ಪ್ರೀತಿ ಅಂತಃಕರಣಗಳ ಮಳೆಯನ್ನು ಕರೆಯಬಾರದು. ಅದಕ್ಕೆ ನಾನು ಅಪಾತ್ರ. ತಾವು ಮಹಾ ಪ್ರಭುಗಳು—ವಿಜಯನಗರದ ಸಾಮ್ರಾಟರೆಂದು ಇದುವರೆಗೆ ತಿಳಿದಿದ್ದೆ. ಆದರೆ ಈಗ ನೀವು ಮಹಾಪುರುಷರೂ, ಉದಾರಚರಿತರೂ, ಗುಣಗ್ರಾಹಿಗಳೂ ಆಗಿರುವಿರಿ ಎಂಬುದನ್ನು ಅರಿತೆ. ತಮ್ಮಂಥ ಧರ್ಮಾವತಾರರ ಬಳಿ ಸೇವೆ ಸಲ್ಲಿಸುವ ಪುಣ್ಯ ನನಗೆ ಇಲ್ಲ. ಈ ದೇಹ ಅಪವಿತ್ರವಾಗಿದೆ. ತಮ್ಮನ್ನು ಕೊಲೆಗೈಯಲು ಬಂದ ಈ ದೇಹ ತಮ್ಮ ಸೇವೆಗೆ ತಕ್ಕುದಲ್ಲ. ಇದಕ್ಕೆ ಮರಣದಂಡನೆಯೇ ಸರಿಯಾದ ಶಿಕ್ಷೆ. ನೀವು ಶಿಕ್ಷೆ ವಿಧಿಸದೇ ಇದ್ದರೆ,

ನನ್ನ ಕೈಗೊಂದು ಕತ್ತಿಯನ್ನು ಕೊಟ್ಟರೆ ಸಾಕು ಮತ್ತೆ ಯಾರಿಗೂ ತೋರಿಸದೆ ಇದ್ದ ಖಡ್ಗ ವಿದ್ಯೆಯ ಪ್ರದರ್ಶನವನ್ನು ನಿಮ್ಮೆದುರು ಮಾಡಿ ತೋರಿಸುತ್ತೇನೆ!" ಎಂದು ಹೇಳಿ ತನ್ನ ಆಸನದಿಂದ ಜಂಗನೆ ಎದ್ದು ನಿಂತನು. ಅವನನ್ನು ಮತ್ತೆ ಆಸನದಲ್ಲಿ ಕುಳ್ಳಿರಿಸಿ, ಅವನನ್ನು ಸಮಾಧಾನ ಪಡಿಸುತ್ತಾ ರಾಯನು ಹೇಳಿದ.

"ರಾಜಪುತ್ರ, ನಿಮ್ಮ ಶಕ್ತಿ ಸಾಮರ್ಥ್ಯಗಳನ್ನು, ಖಡ್ಗ ವಿದ್ಯೆಯ ಪ್ರದರ್ಶನವನ್ನು ಒಮ್ಮೆ ಕಂಡ ನನಗೆ ಮತ್ತೆ ಯಾವ ಪ್ರದರ್ಶನ ನೋಡುವ ಆಸೆಯಿಲ್ಲ. ನಿಮ್ಮಂಥ ವೀರರು—ಗಂಡುಗಲಿಗಳು ಒಂದು ರಾಷ್ಟ್ರದ ಸ್ವತ್ತು. ನಿಮ್ಮನ್ನು ನೀವು ಕೊಂದುಕೊಳ್ಳಲು—ಆತ್ಮಹತ್ಯ ಮಾಡಿಕೊಳ್ಳಲು ನಿಮಗೆ ಅಧಿಕಾರವಿಲ್ಲ. ಈಗ ಹೇಗೂ ನೀವು ನನ್ನ ಸೆರೆಯಾಳು, ನಾನು ಹೇಳಿದಂತೆ ಕೇಳಬೇಕಾದ್ದು ನಿಮ್ಮ ಧರ್ಮ. ಇದರಿಂದ ನಮ್ಮಿಬ್ಬರ ಮನಸ್ಸಿಗೂ ಹಿತ ವಾಗುತ್ತದೆ. ನಿಮ್ಮ ಸೇವೆ ನಮಗೆ ತುಂಬಾ ಅಗತ್ಯವಿದೆ. ಆದರೆ ತಂದೆಯ ಎದುರಿಗೆ ಕತ್ತಿ ಹಿರಿಯುವ ಧರ್ಮಸಂಕಟದ ಕೆಲಸಕ್ಕೆ ನಿಮ್ಮನ್ನು ಈಡುಮಾಡಲಾರೆ. ನೀವು ನಮ್ಮ ಮಲೆಬೆನ್ನೂರಿನ ಮಾಂಡಲೀಕ್ಶ್ವರರಾ ಗಿರಲು ಒಪ್ಪಿದರೆ, ನಮಗೆ ಅಷ್ಟೇ ತೃಪ್ತಿ. ಇದು ದುಡುಕುವ ವಿಷಯವಲ್ಲ. ಯಾವುದನ್ನೂ ದೀರ್ಘವಾಗಿ ಆಲೋಚಿಸಿ ನನಗೆ ನಿಮ್ಮ ಅಂತಿಮ ನಿರ್ಧಾರ ವನ್ನು ತಿಳಿಸಿದರೆ ಸಾಕು. ಈ ವಿಷಯದಲ್ಲಿ ಯಾವ ದುರಾಲೋಚನೆ ಇಲ್ಲ, ದುರುದ್ದೇಶವಿಲ್ಲ ಎಂಬುದನ್ನು ನೀವು ಮನಸ್ಸಿಗೆ ತಂದುಕೊಂಡರೆ ಸಾಕು."

ಎಂದು ಹೇಳಿ ವೀರಭದ್ರದೇವನನ್ನು ಬೀಳ್ಕೊಂಡು, ಹೊರಟು ಹೋದನು. ಹೋಗುವಾಗ ಮಹಾ ದಂಡನಾಯಕನಾದ ಕೊಂಡಮರಸಯ್ಯ ನನ್ನು ಬೇರೆಯಾಗಿ ಕರೆದು ವೀರಭದ್ರದೇವನನ್ನು ಬಂಧನದಲ್ಲಿ ಇದ್ದರೂ ಗೌರವದಿಂದ ನೋಡಿಕೊಳ್ಳಬೇಕೆಂದೂ, ಅವನು ದುಡುಕಿ ಆತ್ಮಹತ್ಯ ಮಾಡಿ ಕೊಳ್ಳದಂತೆ ತುಂಬಾ ಎಚ್ಚರವಾಗಿ ನೋಡಿಕೊಳ್ಳಬೇಕೆಂದೂ ತಿಳಿಸಿದನು.

ಮಾರನೆಯ ದಿನ ಸೆರೆಯಲ್ಲಿದ್ದ ವೀರಭದ್ರದೇವನು ಕೃಷ್ಣದೇವ ರಾಯನನ್ನು ನೋಡಲು ಇಚ್ಛಿಸುತ್ತಿರುವುದಾಗಿ ಕೊಂಡಮರಸಯ್ಯನು ಕೃಷ್ಣದೇವರಾಯನಿಗೆ ವರದಿ ಮಾಡಿದನು. ಏಕೆಂದು ತಿಳಿಯಲು ಕೃಷ್ಣ

ದೇವರಾಯನೇ ಅಲ್ಲಿಗೆ ಬಂದನು. ರಾಯನನ್ನು ಕಂಡೊಡನೆ ವೀರಭದ್ರದೇವನು ಎದ್ದು ನಿಂತು ಭಯಭಕ್ತಿಗಳಿಂದ ನಮಸ್ಕರಿಸಿದನು. ರಾಯನ ಪ್ರಭಾವ ಅವನ ಮೇಲೆ ಸಾಕಷ್ಟು ಆಗಿತ್ತೆನ್ನಲು ಇದೊಂದು ನಿದರ್ಶನವೇ ಸಾಕು.

ಕೃಷ್ಣದೇವರಾಯನು ಅವನನ್ನು ಕುಳಿತುಕೊಳ್ಳಲು ಹೇಳಿ, ತಾನೂ ಕುಳಿತುಕೊಂಡು, ವೀರಭದ್ರದೇವನ ಮುಖವನ್ನ ಪ್ರಶ್ನಾರ್ಥಕ ದೃಷ್ಟಿಯಲ್ಲಿ ನೋಡಿದನು.

"ಸಮ್ರಾಟರು ನನ್ನದೊಂದು ಕೋರಿಕೆಯನ್ನು ನೆರವೇರಿಸಿಕೊಡಬೇಕಾಗಿ ಪ್ರಾರ್ಥನೆ!" ಎಂದು ವಿನಯದಿಂದ ವೀರಭದ್ರದೇವ.

"ಅದೇನೆಂದು ತಿಳಿಯಲೇ ನಾನು ಇಲ್ಲಿಗೆ ಬಂದುದು!" ಎಂದು ಕೃಷ್ಣದೇವರಾಯನು ನಕ್ಕನು.

ಕೃಷ್ಣದೇವರಾಯನ ಸೌಜನ್ಯ ವೀರಭದ್ರದೇವನಿಗೆ ಮಾತು ಮರೆಸುವಂತೆ ಮಾಡಿತು. ಆದರೂ ಹೇಳಿದ—ಕೊಂಚಕಾಲದ ಮೇಲೆ ನೆನಪು ಮಾಡಿಕೊಂಡು.

"ತಮ್ಮ ಮಾತುಗಳನ್ನು ರಾತ್ರಿಯೆಲ್ಲಾ ಆಲೋಚಿಸುತ್ತಿದ್ದೆ. ಯಾವುದೊಂದು ನಿರ್ಧಾರಕ್ಕೆ ಬರಲು ಸಾಧ್ಯವಾಗದೇ ಹೋಯಿತು. ನಾನು ನಿಮ್ಮ ಸೆರೆಯಾಳು. ಆದರೂ ನನಗೆ ವೀರಪೂಜೆ ಮಾಡಿ, ಸನ್ಮಾನಿಸಿದ್ದೀರಿ- ನಾನು ಶತ್ರುವೆಂಬುದನ್ನೂ ಮರೆತು. ತಮ್ಮ ವೀರಪಕ್ಷಪಾತಕ್ಕೆ ನಾನು ಮಾರುಹೋಗಿದ್ದೇನೆ. ನಿಮ್ಮನ್ನು ಕೊಲ್ಲಬೇಂದು ಬಂದಿದ್ದ ನನ್ನನ್ನು ಪರಮಶಿಲೆ ಸೊಂಕಿನಿಂದಲೇ ಕಬ್ಬಿಣ ಚಿನ್ನವಾಗಿ ಮಾರ್ಪಡುವಂತೆ ನನ್ನ ಸ್ವಭಾವದಲ್ಲಿ ಭಯಂಕರ ಮಾರ್ಪಾಡು ಮಾಡಿದ್ದೀರಿ. ತಮ್ಮನ್ನು ದ್ವೇಷಿಸುತ್ತಿದ್ದ ನನ್ನ ಹೃದಯದಲ್ಲಿ ಪ್ರೀತಿಗೌರವಗಳ ಸಸಿ ಮೊಳೆಯುವಂತೆ ಮಾಡಿದ್ದೀರಿ. ನಿಮ್ಮನ್ನು ದ್ವೇಷಿಸಲು ನಾನು ಮಾಡಿದ ಎಲ್ಲ ಪ್ರಯತ್ನ ವಿಫಲವಾಯಿತು. ನಿಮ್ಮ ಪ್ರೀತಿವಿಶ್ವಾಸಗಳ ಮುಂದೆ ನನ್ನ ದ್ವೇಷ ತಿರಸ್ಕಾರಗಳು ನಿಲ್ಲದೆ ಹಾರಿಹೋದವು. ನಿಮ್ಮನ್ನು ಪ್ರೀತಿಸಬಾರದೆಂದು, ನಷ್ಟು ಕಠೋರಮತಿಯಾಗಿ, ಪಾಷಾಣಹೃದಯಿಯಾಗಿ ಇರಲೆತ್ನಿಸಿದರೂ ಸಾಧ್ಯವಾಗಲಿಲ್ಲ. ನಿಮ್ಮ ಒಳ್ಳೆಯತನಕ್ಕೆ ನನ್ನ ವ್ಯಕ್ತಿತ್ವವನ್ನು ಬಲಿ

ಕೊಡಲೇಬೇಕಾಯಿತು. ನಿಮ್ಮ ವರ್ಚಸ್ಸಿಗೆ ನಾನು ಬೀಳಲೇಬೇಕಾಯಿತು. ಆದರಿಂದಾಗಿ ನಾನು ಸಾಯುವೇ ಬದುಕಿದ್ದೀನೆ. ಆದರೆ ನಾನು ನಿಮ್ಮ ಮಿತ್ರನಾಗಿರಲಾರೆ........ನಿಮ್ಮ ಶತ್ರುವಾಗಿಯೂ ಇರಲಾರೆ. ಈಗ ನನ್ನ ಕರ್ತವ್ಯವೇನೆಂಬುದನ್ನು ನಿರ್ಧರಿಸಲಾರದೆ ಹೋಗಿದ್ದೇನೆ. ನಿಮ್ಮಲ್ಲಿ ಮಾಡಿಕೊಳ್ಳುವ ಒಂದು ಬಿನ್ನಹವೇನೆಂದರೆ—ನಿಮ್ಮ ಸೆರೆಮನೆಯಲ್ಲಿ ಕೊಳೆಯುತ್ತಾ ಬಿದ್ದಿರುವ ನನ್ನ ಆಪ್ತಮಿತ್ರನೂ, ನಮ್ರಸಚಿವನೂ ಆಗಿರುವ ನರಹರಿಪಾತ್ರನನ್ನು ಒಮ್ಮೆ ನೋಡುವ ಅವಕಾಶ ಕೊಡಿ. ಅವನೊಂದಿಗೆ ಸಮಾಲೋಚಿಸಿ, ನನ್ನ ಅಂತಿಮ ನಿರ್ಧಾರ ತಿಳಿಸುತ್ತೇನೆ.”

ರಾಯನಿಗೆ ವೀರಭದ್ರದೇವನ ಮಾತುಗಳನ್ನು ಕೇಳಿ ತುಂಬಾ ಸಂತೋಷವುಂಟಾಯಿತು. ಅವನು ಕೂಡಲೇ ಕೊಂಡಮರಸಯ್ಯನಿಗೆ ನರಹರಿಪಾತ್ರನನ್ನು ಕರೆತಂದು, ವೀರಭದ್ರದೇವನಿಗೆ ಭೇಟಿಮಾಡಿಸಲು ಆಜ್ಞೆಮಾಡಿ ಅಲ್ಲಿಂದ ಹೊರಟುಹೋದನು. ರಾಯನ ಆಜ್ಞೆಯಂತೆ ಕೊಂಡಮರಸಯ್ಯನು ನರಹರಿಪಾತ್ರನನ್ನು ಕರತರಿಸಿ, ವೀರಭದ್ರದೇವನಿಗೆ ಭೇಟಿಮಾಡಿಸಿದನು.

ಗೆಳೆಯರಿಬ್ಬರೂ ಪರಸ್ಪರ ತಬ್ಬಿಕೊಂಡರು. ಇಬ್ಬರ ಕಣ್ಣಿನಲ್ಲಿಯೂ ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿತ್ತು. ಮುದುಡಿ ಭಾರವಾಗಿದ್ದ ಅವರ ಹೃದಯಗಳು ಒಮ್ಮೆಲೇ ಹಗುರವಾದಂತೆ ಆಗಿ, ಅನಿರ್ವಚನೀಯವಾದ ಸುಖ ಅನುಭವಿಸಿದರು.

ಗೆಳೆಯರಿಬ್ಬರೂ ಅಂತರಂಗದಲ್ಲಿ ಎಷ್ಟೋ ಸಂಗತಿಗಳನ್ನು ಕುರಿತು ಮಾತನಾಡಿದರು. ಅವರ ಮಾತಿನ ಸರಣಿಯಲ್ಲಿ ಅನೇಕ ಸಂಗತಿಗಳು ಬಂದುಹೋದವು. ಇತ್ತೀಚಿನ ಘಟನೆಗಳಾದ ಕೊಂಡವೀಡಿನ ಮುತ್ತಿಗೆ, ಪತನಗಳನ್ನು ಕುರಿತು ಮಾತನಾಡಿದರು. ವೀರಭದ್ರದೇವನು, ಕೊಂಡವೀಡುದುರ್ಗದಿಂದ ತಪ್ಪಿಸಿಕೊಂಡು ಹೋದಮೇಲೆ ಇಲ್ಲಿಯತನಕ ನಡೆದ ಎಲ್ಲ ಸಂಗತಿಗಳನ್ನೂ ಚಾಚೂ ಬಿಡದೆ ವರದಿ ಮಾಡಿದನು. ಇವನ್ನೆಲ್ಲ ಕೇಳಿ, ತಾನು ಒಂದು ಅದ್ಭುತ ರಮ್ಯ ಕಥೆಯನ್ನು ಕನಸಿನಲ್ಲಿ ಕೇಳುತ್ತಿರುವುದಾಗಿ ನರಹರಿ ಪಾತ್ರನಿಗೆ ಅನಿಸಿತು. ವೀರಭದ್ರನು ಹೇಳಿದ್ದ ಸಂಗತಿ ಅಷ್ಟು ವಿಸ್ಮಯಕರವಾಗಿತ್ತು!

ರಾಯನ ಸೈನಿಕರು ನೂಲೇಣಿಗಳ ಮೂಲಕ ಕೊಂಡವೀಡುದುರ್ಗ ವನ್ನು ಪ್ರವೇಶಿಸುವ ತನಕ ನಡೆದಿದ್ದ ವಿದ್ರೋಹದ ಸುಳಿವು ವೀರಭದ್ರ ದೇವನಿಗೆ ತಿಳಿದಿರಲಿಲ್ಲ. ಅವನ ಕಿವಿಯಮೇಲೆ ಕಣ್ಮರೆಯಾಗಿದ್ದ ಫಕೀರನ ಸಂಗತಿ ಬಿದ್ದಿತ್ತು. ಅದಕ್ಕೆ ವೀರಭದ್ರದೇವನು ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿರಲಿಲ್ಲ. ಆ ಬಗ್ಗೆ ಉದಾಸೀನತೆ ವಹಿಸಿದುದೇ ಕೊಂಡವೀಡು ಅವನ ಕೈ ತಪ್ಪಿಹೋಗಲು ಕಾರಣವಾಗಿತ್ತು !

ಆ ರಾತ್ರಿ ದುರ್ಗದ ನಾಲ್ಕು ದಿಕ್ಕಿನಲ್ಲಿ ಪಹರೆ ಕಾಯುತ್ತಿದ್ದ ತನ್ನ ಸೈನಿಕರನ್ನು ಒಮ್ಮೆ ಪರೀಕ್ಷಿಸಿ ತನ್ನ ಅರಮನೆಗೆ ಬಂದು ವಿಶ್ರಾಂತಿ ತೆಗೆದು ಕೊಳ್ಳಲು ಆಗಷ್ಟೇ ಮಲಗಿಕೊಂಡಿದ್ದ ಅವನಿಗೆ ದುಸ್ವಪ್ನ ಬಿದ್ದಂತೆ, ಕೋಟೆಯ ಒಳಗೆ ಎದ್ದ ಹಾಹಾಕಾರದ ಶಬ್ದ ಕಿವಿಗೆ ಬಿದ್ದು, ಥಟ್ಟನೆ ಎಚ್ಚೆತ್ತು, ಕೈಯಲ್ಲಿ ಕತ್ತಿ ಹಿರಿದು ಶಬ್ದ ಬಂದಕಡೆಗೆ ನುಗ್ಗಿದನು. ಶತ್ರು ಗಳು ಮೋಸದಿಂದ ಕೋಟೆಯೊಳಗೆ ನುಗ್ಗಿ ಬಂದಿರುವ ಸಂಗತಿ ತಿಳಿಯಿತು. ಕೂಡಲೇ ಅವರಮೇಲೆ ಬೀಳಲು ತನ್ನ ಸೈನ್ಯವನ್ನು ಕೂಡಿಸಿಕೊಂಡು, ಯುದ್ಧಸನ್ನದ್ಧನಾಗುವ ವೇಳೆಗೆ, ದೂತರಿಂದ ವಾರ್ತೆ ಬಂತು—ದಳಪತಿ ಗಳಲ್ಲಿ ಪ್ರಮುಖರಾದವರೆಲ್ಲ ಶತ್ರುಗಳಿಗೆ ಕೈಸೆರೆ ಸಿಕ್ಕಿರುವರೆಂದು. ಇನ್ನು ತಾನು ಯುದ್ಧಕ್ಕೆ ಹೊರಟರೆ, ಇತರರಂತೆ ಕೈಸೆರೆ ಸಿಕ್ಕುವುದು ನಿಜವೆಂದು ಭಾವಿಸಿ, ಸ್ವತಂತ್ರವಾಗಿ ಉಳಿದರೆ, ದುರ್ಗವನ್ನು ಶತ್ರುಗಳ ಕೈಯಿಂದ ಬಿಡಿಸಿಕೊಳ್ಳುವ ಪ್ರಯತ್ನ ಮಾಡಬಹುದೆಂದು, ಯಾರಿಗೂ ಸುದ್ದಿ ಕೊಡದೆ, ಹಠಾತ್ತನೆ ಅಲ್ಲಿಂದ ಕಣ್ಮರೆಯಾಗಿ ಗುಪ್ತಮಾರ್ಗದಲ್ಲಿ ಹೊರಟು ಕೊಂಡ ವೀಡಿನಿಂದ ತಪ್ಪಿಸಿಕೊಂಡನು.

ಕೆಲವು ದಿನ ವೀರಭದ್ರದೇವನು ಕೊಂಡವೀಡಿನ ಬಳಿಯಲ್ಲಿದ್ದ ಕಾಡಿ ನಲ್ಲಿ ಶತ್ರು ಭಯದಿಂದ ತಲೆ ತಪ್ಪಿಸಿಕೊಂಡು ಇದ್ದನು. ಕಾಡಿನಲ್ಲಿ ಸಿಕ್ಕುವ ಗೆಡ್ಡೆ ಗೆಣಸುಗಳನ್ನು ತಿಂದು, ಹುಲ್ಲಿನ ಹಾಸಿಗೆಯಮೇಲೆ ಮಲಗಿ, ಮೂರು ನಾಲ್ಕು ದಿನ ಕಾಡಿನ ಗುಹೆಯೊಂದರಲ್ಲಿ ಅಡಗಿಕೊಂಡಿದ್ದನು. ಈ ಅವಧಿಯಲ್ಲಿ ವೀರಭದ್ರದೇವನಿಗೆ ತಾನು ಯುದ್ಧಮಾಡದೆ ಹೇಡಿಯಂತೆ ತಪ್ಪಿಸಿಕೊಂಡುದು ಅವಿವೇಕವಾಯಿತೆಂದು ಅನಿಸಿತ್ತು. ಎಂದಿದ್ದರೂ ಬಿದ್ದುಹೋಗುವ ಈ ನಶ್ವರ ದೇಹವನ್ನು ಕೊಂಡವೀಡಿನ ರಕ್ಷಣೆಗಾಗಿ

ಹೋರಾಡಿ, ರಣರಂಗದಲ್ಲಿ ಮಡಿದಿದ್ದರೆ ವೀರಸ್ವರ್ಗ ಬರುತ್ತಿತ್ತು. ತಂದೆಗೆ ಕೊಟ್ಟಿದ್ದ ವಚನ ಪಾಲಿಸುವ ಪವಿತ್ರ ಕಾರ್ಯದಲ್ಲಿ ತನ್ನನ್ನೇ ಬಲಿಗೊಟ್ಟ ಹುತಾತ್ಮನೆಂದು ಎಲ್ಲರೂ ಹೊಗಳುತ್ತಿದ್ದರೆಂದೂ ಭಾವಿಸಿದನು. ಆದರೆ ಈಗ ಹೇಡಿಯಂತೆ ತಲೆ ತಪ್ಪಿಸಿಕೊಂಡು, ಶತ್ರುಭೀತಿಯಿಂದ ನಿಮಿಷಕ್ಕೆ ಸಾವಿರಬಾರಿ ಸಾಯುತ್ತ, ಕ್ರಿಮಿಯಂತೆ ಬದುಕುತ್ತಿರುವ ತನ್ನ ಬಗೆಗೇ ಅವನಿಗೆ ಜೆಗುಪ್ಸೆಯಾಯಿತು. ಅವನು ತನ್ನ ಹೇಯ ಬಾಳ್ವಿಗೆ ಕೊನೆ ತಂದುಕೊಳ್ಳಲು ನಿಶ್ಚಯಿಸಿ, ಆತ್ಮಹತ್ಯ ಮಾಡಿಕೊಳ್ಳಲು ನಿಂತಾಗ, ಹಠಾತ್ತನೆ ಒಂದು ಆಲೋಚನೆ ಬಂದಿತ್ತು. ಹೇಗೂ ತಾನು ಸಾಯಲು ಸಿದ್ಧನಾಗಿ ನಿಂತಿದ್ದೇನೆ. ಸಾಯುವ ಮೊದಲು ಕೊಂಡವೀಡನ್ನು ಶತ್ರುಗಳ ಕೈಯಿಂದ ಬಿಡಿಸಿಕೊಳ್ಳಲು ಸಾಧ್ಯವಾದರೆ, ಒಮ್ಮೆ ಪ್ರಯತ್ನಿಸಿ, ಈ ಪವಿತ್ರ ಕಾರ್ಯದಲ್ಲಿ ದೇಹವನ್ನು ಬಲಿಗೊಡಬಾರದೇಕೆಂದು ಅನಿಸಿತು. ಆದರಂತೆ ಅವನು ಕೊಂಡವೀಡಿಗೆ ಬಂದಿದ್ದನು—ಕೃಷ್ಣದೇವರಾಯನನ್ನು ಕೊಲೆಗೈಯ್ಯಲು, ತನ್ನ ಅಂತಿಮ ಆಸೆಯನ್ನು ಈಡೇರಿಸಿಕೊಳ್ಳಲು. ಆದರೆ ದೈವ ಅವನಿಗೆ ಪ್ರತಿಕೂಲವಾಗಿತ್ತು. ಅವನ ಆಸೆಗಳೊಂದೂ ನೆರವೇರುವ ಬದಲು ಅವನೇ ರಾಯನ ಸೈನಿಕರಿಗೆ ಸಿಕ್ಕಿಬಿದ್ದ.

ಕೃಷ್ಣದೇವರಾಯನು ತನ್ನನ್ನು ಕೊಲೆಮಾಡಲು ಬಂದ ವೀರಭದ್ರನ ಎದೆಯಲ್ಲಿ ಉರಿಯುತ್ತಿದ್ದ ದ್ವೇಷದ ಬೆಂಕಿಯನ್ನು ತನ್ನ ಪ್ರೀತಿವಿಶ್ವಾಸಗಳ ಅಮೃತ ಸೇಚನದಿಂದ ನಂದಿಸಿದ್ದನು. ದಕ್ಷಯಜ್ಞವನ್ನು ಹಾಳುಮಾಡಲು ಹೊರಟ ವೀರಭದ್ರನು, ದಕ್ಷನು ಮಾಡಿದ ಸತ್ಕಾರಕ್ಕೆ ಮಾರುಹೋಗಿ ತಾನು ಬಂದ ಕೆಲಸವನ್ನೇ ಮರೆತು, ಅವನ ಯಾಗದಲ್ಲಿ ಭಾಗವಹಿಸಿದಂತೆ ಆಗಿತ್ತು. ಕೃಷ್ಣದೇವರಾಯನ ಮೇಲೆ ಸೇಡು ತೀರಿಸಿಕೊಳ್ಳಲು ಬಂದಿದ್ದ ವೀರಭದ್ರದೇವನ ಕಥೆ. ಹಿಂದೆ ಪರಶಿವನು ತನ್ನ ತಪಸ್ಸನ್ನು ಭಂಗಗೊಳಿಸಲು ಬಂದ ಮನ್ಮಥನನ್ನು ತನ್ನ ಉರಿಗಣ್ಣಿನಿಂದ ದಹಿಸಿ, ಅನಂಗನನ್ನಾಗಿ ಮಾಡಿದ. ಆದರೆ ಈ ಪರಶಿವನಾದರೋ ತನ್ನನ್ನು ಭಂಗಿಸಲು ಬಂದ ಮನ್ಮಥನನ್ನು ಆದರಿಸಿ ಸತ್ಕರಿಸಿ, ಅಜರಾಮರ ಕೀರ್ತಿಗೆ ಪಾತ್ರನಾದ—ತನ್ನನ್ನು ಕೊಲ್ಲಲು ಬಂದ ಕೊಲೆಪಾತಕಿಯ ಮೇಲೆ ಕರುಣೆಯ ಮಳೆಗರೆದು, ಅವನನ್ನು ಕ್ಷಮಾವಾರಿಧಿಯಲ್ಲಿ ಮುಳುಗಿಸಿದ್ದ.

ಅಷ್ಟೇ ಅಲ್ಲ, ಅಲ್ಲಿನ ಮುತ್ತುರತ್ನಗಳಿಂದ ಗೌರವಿಸುವಂತೆ, ವೀರಭದ್ರ ದೇವನನ್ನು ಮಲೆಯಬೆನ್ನೂರಿನ ಮಾಂಡಲೀಕನನ್ನಾಗಿ ಮಾಡಿದ್ದ, ಕೃಷ್ಣದೇವರಾಯ !

ಕೃಷ್ಣದೇವರಾಯನ ದಿವ್ಯಾನುಗ್ರಹಕ್ಕೆ ಪಾತ್ರನಾಗಿದ್ದ ವೀರಭದ್ರ ದೇವನಿಗೆ ಈಗ ಒಂದು ಸಂಧಿಗ್ಧ ಪರಿಸ್ಥಿತಿ ಒದಗಿತ್ತು. ರಾಯನ ಕೊರಿಕೆ ಯನ್ನು ಈಡೇರಿಸಬೇಕೆ ? ಬೇಡವೆ ? ಎಂಬುದನ್ನು ನಿರ್ಧರಿಸಲಾರದವ ನಾಗಿದ್ದ ವೀರಭದ್ರದೇವ- ರಾಯನ ಕೋರಿಕೆಯಂತೆ ನಡೆದರೆ ಒಂದು ಬಗೆಯ ಸ್ವಾಮಿದ್ರೋಹ ! ಇತ್ತ ದರಿ, ಅತ್ತ ಪುಲಿ ಎಂಬುದಾಗಿತ್ತು ಅವನ ಸ್ಥಿತಿ. ಈ ವಿಷಮ ಸನ್ನಿವೇಶದಲ್ಲಿ ತಾನು ಕೈಗೊಳ್ಳಬೇಕಾದ ಸೂಕ್ತ ಕಾರ್ಯ ಯಾವುದೆಂದು ನಿಶ್ಚಯಿಸಲು ತನ್ನ ಗೆಳೆಯನ ನೆರವನ್ನು ಕೋರಿದ್ದ. ನರಹರಿಪಾತ್ರನೊಡನೆ ವಿಚಾರ ವಿನಿಮಯ ಮಾಡಿ ಯಾವು ದೊಂದೇ ಅಂತಿಮ ನಿರ್ಧಾರಕ್ಕೆ ಅವನು ಬರಬೇಕಾಗಿತ್ತು. ಅಂತಲೇ ಸೆರೆಮನೆಯಲ್ಲಿದ್ದ ನರಹರಿಪಾತ್ರನನ್ನು ಬಳಿಗೆ ಕರೆಸಿಕೊಂಡಿದ್ದ.

ಅವರಿಬ್ಬರೂ ಬಹಳ ಹೊತ್ತು ಈ ಬಗ್ಗೆ ಮಾತುಕತೆ ನಡೆಸಿ. ಕಡೆಗೆ ಒಂದು ದೃಢನಿರ್ಧಾರಕ್ಕೆ ಬಂದರು.

ಅದರಂತೆ ವೀರಭದ್ರದೇವನು ಕೃಷ್ಣದೇವರಾಯನ ಬಳಿಗೆ ಹೋಗಿ, ಮಲೆಬೆನ್ನೂರಿನ ಮಾಂಡಲೀಕಪದವಿಗೆ ತನ್ನ ಸಮ್ಮತಿಯನ್ನು ಸೂಚಿಸಿದನು.

ಇದರಿಂದ ರಾಯನಿಗೆ ತುಂಬಾ ಸಂತೋಷವುಂಟಾಯಿತು. ಅವನು ವೀರಭದ್ರದೇವನನ್ನು ಮಲೆಬೆನ್ನೂರಿನ ಮಾಂಡಲೇಶ್ವರನೆಂದು ಘೋಷಿಸಿ, ಧನ, ಕನಕ, ತುರುಗ, ವಾಹನಗಳನ್ನಿತ್ತು ಸನ್ಮಾನಿಸಿದ.

ಇದಾದ ಕೆಲವು ದಿನಗಳಲ್ಲೇ ವೀರಭದ್ರನು ನರಹರಿಪಾತ್ರನೊಂದಿಗೆ ಮಲೆಬೆನ್ನೂರಿಗೆ ಪ್ರಯಾಣ ಬೆಳೆಸಿ ಅಲ್ಲಿನ ಅಧಿಕಾರವನ್ನು ವಹಿಸಿ ಕೊಂಡನು.

ಕ್ರಿಸ್ತಾಬ್ಧಿ ಸಾವಿರದ ಐನೂರ ಹದಿನೈದನೇ ಜೂನ್ ತಿಂಗಳ ಇಪ್ಪತ್ತು ಮೂರನೆಯ ದಿನ ಕೊಂಡವೀಡುದುರ್ಗ ರಾಯನಿಗೆ ವಶವಾಗಿತ್ತು. ಎರಡು ತಿಂಗಳಕಾಲ ರಾಯನು ಕೊಂಡವೀಡಿನಲ್ಲಿ ವಿಶ್ರಾಂತಿ ಸುಖವನ್ನು

ಅನುಭವಿಸಿ, ಉತ್ಕಲದ ಇನ್ನೊಂದು ಪ್ರಮುಖ ದುರ್ಗವಾದ ಕೊಂಡಪಲ್ಲಿಯನ್ನು ಗೆಲ್ಲಲು ಸೈನ್ಯ ಸಮೇತ ಹೊರಟನು.

ದಾರಿಯಲ್ಲಿ ಸಿಕ್ಕಿದ ಅಹೋಬಲವನ್ನು ವಶಪಡಿಸಿಕೊಂಡು ಅಲ್ಲಿನ ಅಹೋಬಲಸ್ವಾಮಿಯನ್ನು ಸೇವಿಸಿ, ದೇವಾಲಯಕ್ಕೆ ಅನೇಕ ದತ್ತಿಗಳನ್ನು ಬಿಟ್ಟು, ದಾನಧರ್ಮಗಳನ್ನು ಮಾಡಿ ಅನಂತರ ಬೆಜವಾಡಕ್ಕೆ ಬಂದನು. ಅದನ್ನು ವಶಪಡಿಸಿಕೊಂಡು ಅಲ್ಲಿ ಕೆಲವುಕಾಲ ತಂಗಿ ದಕ್ಷಿಣದೇಶದ ಅನೇಕ ಶೈವ ಹಾಗೂ ವೈಷ್ಣವ ದೇವಾಲಯಗಳಿಗೆ ಯಥೇಚ್ಛವಾಗಿ ದಾನ ಧರ್ಮಗಳನ್ನು ಮಾಡಿ ಕೃತಕೃತ್ಯನಾದನು. ಈ ದೇವತಾ ಕಾರ್ಯಗಳ ಸಲುವಾಗಿ ಸುಮಾರು ಹತ್ತುಸಾವಿರ ಹೊನ್ನು ವರಹಗಳನ್ನು ವಿನಿಯೋಗಿಸಿದನು. ತನಗೆ ಮೇಲಿಂದಮೇಲೆ ದೊರೆತ ದಿಗ್ವಿಜಯವು ದೈವಕೃಪೆಯಿಂದಲ್ಲದೆ, ತನ್ನ ಬಾಹುಬಲದಿಂದ ಅಲ್ಲ ಎನ್ನುವ ಸಂಗತಿ ರಾಯನಿಗೆ ಚೆನ್ನಾಗಿ ವಿದಿತವಾಗಿತ್ತು.

ಈ ಅಂಶ ಕೊಂಡಪಲ್ಲಿಯ ಮುತ್ತಿಗೆಯಲ್ಲಿ ಇನ್ನಷ್ಟು ಖಚಿತವಾಯಿತು.

ಕೊಂಡಪಲ್ಲಿಯೂ ಕೊಂಡವೀಡುದುರ್ಗದಂತೆ, ಉತ್ಕಲ ಸಾಮ್ರಾಜ್ಯದಲ್ಲಿ ಒಂದು ಪ್ರಮುಖವಾದ ದುರ್ಗ. ಆ ಪ್ರದೇಶದಲ್ಲೆಲ್ಲಾ ಇದು ಹೆಚ್ಚು ಜನಸಂದಣಿಯುಳ್ಳ ನಗರ. ಅದು ಬಲವಾದ ಕೋಟೆಯಿಂದ ಆವೃತವಾಗಿ ರಾಜ ಕುಟುಂಬದವರ ನಿವಾಸಸ್ಥಾನವಾಗಿದ್ದು, ಅನೇಕ ಅರಮನೆಗಳಿಂದಲೂ. ಉದ್ಯಾನವನಗಳಿಂದಲೂ ಶೋಭಿಸುತ್ತಿತ್ತು. ಕೋಟೆಯ ಒಳಗೆ ಅಧಿಕ ಸಂಖ್ಯೆಯಲ್ಲಿ ಸೈನಿಕರು ಕೋಟೆಯ ರಕ್ಷಣೆಗೆ ಸಿದ್ಧರಾಗಿದ್ದರು. ಪ್ರತಾಪರುದ್ರ ಗಜಪತಿಯ ಹಿರಿಯ ಮಗನೂ, ಯುವ ರಾಜಕುಮಾರನೂ ಆಗಿದ್ದ ರಾಮಚಂದದೇವನೇ ದುರ್ಗಾಧಿಪತಿ. ಇವನ ಸಹಾಯಕ್ಕೆಂದು ಗೊಲ್ಕಂಡದ ಕುತಬ್ ಷಾಹಿ ಸುಲ್ತಾನನು ಬಿಜ್ಜಲಿಖಾನ್ ಎನ್ನುವ ದಳಪತಿಯೊಂದಿಗೆ ತನ್ನ ಸೈನ್ಯವನ್ನು ಕಳುಹಿಸಿಕೊಟ್ಟಿದ್ದನು. ಇವನಲ್ಲದೆ, ಮಹಾಪಾತ್ರರ ನಾಯಕಮಣಿಯಂತಿದ್ದ ಪ್ರಹರಸೇನ ಶರಶ್ಚಂದ್ರ ಮಹಾಪಾತ್ರನೂ, ಬೋದಜಣ್ಣ ಪಾತ್ರನೂ ತಮ್ಮ ದಳಗಳೊಂದಿಗೆ ಕೋಟೆಯ ರಕ್ಷಣೆಗೆ ಕಂಕಣ ತೊಟ್ಟು ನಿಂತಿದ್ದರು. ಅವರು

ತನ್ನ ಬೆಂಬಲಕ್ಕೆ ಇರುವಾಗ ದುರ್ಗಕ್ಕೆ ಯಾವ ಭಯವಿಲ್ಲವೆಂದು ಯುವ ರಾಜಕುಮಾರ ರಾಮಚಂದ್ರದೇವನು ನಿಶ್ಚಿಂತೆಯಿಂದ ಇದ್ದನು.

ಪ್ರತಾಪರುದ್ರ ಗಜಪತಿಯು ರಾಮಚಂದ್ರದೇವನಿಗೆ ಆದಷ್ಟು ದೀರ್ಘ ಕಾಲ ರಾಯನ ಮುತ್ತಿಗೆಯನ್ನು ತಡೆಯಬೇಕೆಂದೂ, ಈ ಅವಧಿಯಲ್ಲಿ ಸೈನ್ಯವನ್ನು ಕೂಡಿಸಿಕೊಂಡು ತಾನು ಕೃಷ್ಣದೇವರಾಯನ ಮೇಲೆ ಬಂದು ಧಾಳಿ ಇಡುವುದಾಗಿಯೂ ಆಶ್ವಾಸನವಿತ್ತು, ಉತ್ಕಲದ ಮೂಲೆಮೂಲೆ ಗಳಿಂದ ಸೇನೆಯನ್ನು ಸಂಗ್ರಹಿಸುವ ಕೆಲಸಕ್ಕೆ ಆರಂಭಿಸಿದ್ದನು. ಪ್ರತಾಪ ರುದ್ರಗಜಪತಿಯು ಸೈನ್ಯಸಮೇತ ತಮ್ಮಮೇಲೆ ಬೀಳುವ ಮೊದಲೇ ತಾವು ಹೇಗಾದರೂ ಮಾಡಿ ಕೊಂಡಪಲ್ಲಿಯನ್ನು ವಶಪಡಿಸಿಕೊಳ್ಳಬೇಕೆಂದು ರಾಯನು ನಿರ್ಧರಿಸಿದ್ದನು.

ಮುತ್ತಿಗೆ ಮೂರು ನಾಲ್ಕು ತಿಂಗಳು ಕಾಲ ನಡೆದರೂ, ದುರ್ಗ ತಮ್ಮ ವಶವಾಗುವ ಸೂಚನೆ ಕಾಣಲಿಲ್ಲ. ಮುತ್ತಿಗೆಯು ಹೀಗೆಯೇ ದೀರ್ಘಕಾಲದವರೆಗೆ ನಡೆದರೆ, ಶಕ್ತಿಗುಂದಿದ ತಮ್ಮನ್ನು ಗಜಪತಿಯು ಸುಲಭವಾಗಿ ಸೋಲಿಸಬಹುದೆಂದು ಹೆದರಿದನು. ಆದರೆ ಉದಯಗಿರಿ, ಕೊಂಡವೀಡಿನ ಮುತ್ತಿಗೆಗಳಲ್ಲಿ ದೈವಸಹಾಯ ಒದಗಿದಂತೆ, ಇಲ್ಲೂ ದೈವ ಸಹಾಯ ಒದಗಿ, ಅನಿರೀಕ್ಷಿತ ರೀತಿಯಲ್ಲಿ ಒಂದು ಹನಿ ರಕ್ತಪಾತವಿಲ್ಲದೆ, ಕೋಟೆಯು ರಾಯನ ವಶವಾಯಿತು.

ಒಂದು ದಿನ ರಾಯನ ಸೈನ್ಯದಲ್ಲಿ ಪ್ರಮುಖ ದಳಪತಿಗಳಲ್ಲಿ ಒಬ್ಬ ನಾದ ಧನಂಜಯನು, ಕೆಲವು ಸಂಗಡಿಗರೊಡನೆ, ಸೈನ್ಯಕ್ಕೆ ಬೇಕಾಗುವ ಆಹಾರಸಾಮಗ್ರಿಗಳನ್ನು ಸುತ್ತುಮುತ್ತಲ ಗ್ರಾಮಗಳಿಂದ ಸಂಗ್ರಹಿಸುವ ಕಾರ್ಯದಲ್ಲಿ ಹೋಗಿದ್ದವನು ತನ್ನ ಕೆಲಸವನ್ನು ಮುಗಿಸಿಕೊಂಡು ಶಿಬಿರಕ್ಕೆ ಹಿಂದಿರುಗಿ ಬರುತ್ತಿದ್ದಾಗ ರಾತ್ರಿ ಹೊತ್ತುಮೀರಿತಾದ್ದರಿಂದ ಶಿಬಿರವನ್ನು ಬೇಗ ಸೇರಲು ಕುದುರೆಗಳನ್ನು ವೇಗವಾಗಿ ಓಡಿಸಿಕೊಂಡು ಬರುತ್ತಿದ್ದನು. ದಾರಿಯಲ್ಲಿ ಸಿಕ್ಕಿದ ದಟ್ಟವಾದ ಗಿಡ ಮರಗಳ ತೋಪಿನ ಒಳಗೆ ಅವರು ಬರುವಾಗ್ಗೆ ಯಾರೋ ತಮ್ಮನ್ನು ನೋಡಿ ಗಿಡ ಮರಗಳ ಮರೆಯಲ್ಲಿ ಅಡಗಿಕೊಳ್ಳುತ್ತಿದ್ದಂತೆ ಭಾಸವಾಯಿತು. ಆ ಛಾಯಾರೂಪಿಗಳ ಬಗ್ಗೆ ಸಂಶಯ ಉಂಟಾಗಿ ಧನಂಜಯನು ಕೂಡಲೇ ಕುದುರೆಯನ್ನು ಅವರಿದ್ದ

ದಿಕ್ಕಿಗೆ ತಿರುಗಿಸಿದನು. ಅವನನ್ನು ಇತರ ಸಂಗಡಿಗರು ಅನುಸರಿಸಿದರು.

ಧನಂಜಯನು ಹೆಚ್ಚು ಗದ್ದಲಮಾಡದೆ, ಸುತ್ತುಗಟ್ಟಿ ಸೆರೆಹಿಡಿಯಲು ಅವರಮೇಲೆ ಬಿದ್ದ, ಹಠಾತ್ತನೆ ತಮಗೆ ಒದಗಿದ ಆಕ್ರಮಣದಿಂದ ಅಧೀರ ರಾಗಿ, ಅವರು ಅಲ್ಲಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವ ಮೊದಲೇ ಧನಂಜಯನ ಸೈನಿಕರಿಗೆ ಸೆರೆ ಸಿಕ್ಕಿದರು. ಅವರಲ್ಲಿ ನಾಯಕನಂತಿದ್ದ ಒಬ್ಬನು ತನ್ನ ಶಕ್ತಿಯನ್ನೆಲ್ಲ ಬಿಟ್ಟು ವೀರಾವೇಶದಿಂದ ಹೋರಾಡಿದ. ಆದರೆ ಅಧಿಕ ಸಂಖ್ಯೆಯಲ್ಲಿ ಇದ್ದ ಧನಂಜಯನ ಸೈನ್ಯದ ಮುಂದೆ ಅವನು ಬಹುಕಾಲ ನಿಲ್ಲಲಿಲ್ಲ. ನಿರ್ವಾಹವಿಲ್ಲದೆ ಅವನೂ ಸೆರೆಯಾಗಬೇಕಾಯಿತು!

ತಮಗೆ ಸೆರೆ ಸಿಕ್ಕಿದ ವ್ಯಕ್ತಿಗಳು ಯಾರೆಂದು ಪರೀಕ್ಷಿಸಲು ಬಂದಾಗ ಧನಂಜಯನಿಗಾದ ಸಂತೋಷಾಶ್ಚರ್ಯಗಳು ಹೇಳಲಸದಳವಲ್ಲ. ಅವರಿಗೆ ಸೆರೆ ಸಿಕ್ಕಿದ ವ್ಯಕ್ತಿಗಳು ಬೇರೆ ಯಾರೂ ಆಗಿರದೆ ಕೊಂಡಪಲ್ಲಿಯ ದುರ್ಗಾ ಧಿಪತಿಯು, ಪ್ರತಾಪರುದ್ರನ ಪುತ್ರನು ಆಗಿದ್ದ ಯುವರಾಜ ಕುಮಾರ ರಾಮಚಂದ್ರದೇವ, ಬೋಡಜಣ್ಣ ಮಹಾಪಾತ್ರ ಮತ್ತು ವೇಷಾಂತರ ದಲ್ಲಿ ಇದ್ದ ಮಹಾರಾಣಿ ಲಕ್ಷ್ಮೀದೇವಿ, ಹಾಗೂ ಅವರ ಬೆಂಗಾವಲಿನ ಪಡೆ ಯವರೇ ಆಗಿದ್ದರು. ಅವರೇಕೆ ಇಲ್ಲಿ ಈ ಸ್ಥಿತಿಯಲ್ಲಿ ತಮಗೆ ಸೆರೆ ಸಿಕ್ಕಿದರೆಂದು ಧನಂಜಯನು ಎಷ್ಟು ಆಲೋಚಿಸಿದರೂ ಹೊಳೆಯಲಿಲ್ಲ.

ಪ್ರತಾಪರುದ್ರ ಗಜಪತಿಯ ಪಟ್ಟಮಹಿಷಿಯಾದ ಮಹಾರಾಣಿ ಲಕ್ಷ್ಮೀದೇವಿಯವರು ಕೊಂಡಪಲ್ಲಿಯ ಮುತ್ತಿಗೆ ನಡೆದಾಗ, ಕೊಂಡ ಪಲ್ಲಿಯಲ್ಲೇ ಇದ್ದರು. ಪತಿಯಮೇಲೆ ಹುಸಿ ಮುನಿಸುಮಾಡಿಕೊಂಡು, ಪೊಟ್ಟನೂರನ್ನು ತ್ಯಜಿಸಿ ಕೊಂಡಪಲ್ಲಿಗೆ ಬಂದು, ಕೆಲವುಕಾಲದಿಂದಲೂ ಅಲ್ಲೇ ಇದ್ದರು. ಕೃಷ್ಣದೇವರಾಯನು ಅನಿರೀಕ್ಷಿತವಾಗಿ ಕೊಂಡಪಲ್ಲಿ ಯನ್ನು ಮುತ್ತಿದುದರಿಂದ ಮಹಾರಾಣಿ ಲಕ್ಷ್ಮೀದೇವಿಯನ್ನು ಅಲ್ಲಿಂದ ಹೊರಗೆ ಕಳುಹಿಸಲು ಸಾಧ್ಯವಾಗದೆ ಹೋಯಿತು. ಕೃಷ್ಣದೇವರಾಯನ ಮುತ್ತಿಗೆಗೆ ತಮ್ಮ ದುರ್ಗ ಜಗ್ಗುವುದಿಲ್ಲವೆಂದೂ, ಮುತ್ತಿಗೆ ದೀರ್ಘಕಾಲದ ವರೆಗೆ ನಡೆದರೆ, ಗಜಪತಿಯು ತಮ್ಮ ನೆರವಿಗೆ ಬಂದು ರಾಯನ ಸೈನ್ಯವನ್ನು ಧೂಳಿಪಟಗುಟ್ಟಿಸುವನೆಂದೂ ಧೈರ್ಯ ತಾಳಿದ ಆ ತಾಯಿಮಕ್ಕಳಿಗೆ ದಿನ ಕಳೆದಂತೆ, ಮೊದಲಿನ ಧೈರ್ಯ, ನಂಬಿಕೆಗಳು ಉಳಿಯಲಿಲ್ಲ. ರಾಯನ

ಸೈನಿಕರು ಹಾಕುತ್ತಿದ್ದ ಬಲವಾದ ಮುತ್ತಿಗೆಗೆ, ತಮ್ಮ ದುರ್ಗ ಯಾವ ಘಳಿಗೆಯಲ್ಲಾದರೂ ವಶವಾಗಬಹುದೆಂಬ ಹೆದರಿಕೆ ಉಂಟಾಗಿತ್ತು. ಅವರು ನಿರೀಕ್ಷಿಸಿದ್ದ ಗಜಪತಿಯು ಸಹಾಯ ಸಕಾಲದಲ್ಲಿ ಒದಗಿಬಂದಿರಲಿಲ್ಲ. ಹೀಗಾಗಿ ದುರ್ಗ ಶತ್ರುಗಳ ವಶವಾಗಿ ವೀರಭದ್ರದೇವನು ಸೆರೆಸಿಕ್ಕಿದಂತೆ, ತಾನೂ, ತನ್ನತಾಯಿಯೂ ರಾಯನ ಕೈಗೆ ಸೆರೆಸಿಕ್ಕಿದರೆ— ತಮ್ಮ ಸ್ಥಿತಿ ಪರಿಶೋಚನೀಯವಾಗುವುದೆಂದು ರಾಮಚಂದ್ರ ದೇವನು ಅಂಜಿದನು. ದುರ್ಗ ರಾಯನ ವಶವಾಗುವ ಮೊದಲೇ, ತನ್ನ ತಾಯಿಯನ್ನು ಸುರಕ್ಷಿತ ವಾಗಿ ದುರ್ಗದಿಂದ ಹೊರಕ್ಕೆ ಕಳುಹಿಸಿಕೊಡಬೇಕೆಂದು ಸುಸಂಧಿಗಾಗಿ ಕಾಯುತಿದ್ದ ರಾಮಚಂದ್ರ ದೇವನಿಗೆ ಇಂದು ಆ ಅವಕಾಶ ದೊರತಿತ್ತು. ಇಂದು ಕೋಟೆಯನ್ನು ಮುತ್ತಿದ ರಾಯನ ಸೈನಿಕರು ಸಂಜೆಯ ವೇಳೆಗೆ ತಮ್ಮ ಶಿಬಿರಗಳಿಗೆ ಹಿಂದಿರುಗಿದ್ದರು. ಆಕಾಶದಲ್ಲಿ ದಟ್ಟವಾದ ಮೋಡಗಳು ಕವಿದು ಚಳಿ ಗಾಳಿ, ಶತ್ರುಗಳು ತಮ್ಮ ಶಿಬಿರದಿಂದ ಹೊರಗೆ ತಲೆ ಇಡದಂತೆ ಮಾಡಿತ್ತು. ತಿಂಗಳ ಬೆಳಕಿನಲ್ಲಿ ತಮ್ಮ ಗುರುತು ಮತ್ತೊಬ್ಬರಿಗೆ ತಿಳಿಯ ದಂತೆ, ಎಚ್ಚರವಹಿಸಿ, ಕಳ್ಳದಾರಿಯಲ್ಲಿ ದುರ್ಗವನ್ನು ಇಳಿದು, ಮಿತಪರಿ ವಾರದಲ್ಲಿ, ಕುದುರೆಗಳ ಮೇಲೆ ಹೊರಟಿದ್ದ ಅವರು ದುರ್ದೈವದಿಂದ, ಅದೇ ದಾರಿಯಲ್ಲಿ ಆಗಮಿಸುತ್ತಿದ್ದ ಧನಂಜಯನಿಗೆ ಎದುರಾಗಿದ್ದರು. ದೂರದಿಂದಲೇ ಅವರ ಕುದುರೆಗಳ ಖುರಪುಟ ಧ್ವನಿಯನ್ನು ಆಲಿಸಿ, ರಾಮ ಚಂದ್ರದೇವನು ತಮ್ಮ ಕುದುರೆಗಳನ್ನು ಮರಗಳ ಮರೆಯಲ್ಲಿ ಮರೆಮಾಚಿ, ತಾವು ಧನಂಜಯನ ಕಣ್ಣಿಗೆ ಬೀಳದಂತೆ, ಪೊದೆಯ ಮರೆಯಲ್ಲಿ ಅವಿತು ಕೊಳ್ಳಲು ಪ್ರಯತ್ನಿಸುತ್ತಿದ್ದಾಗಲೇ ತಿಂಗಳ ಬೆಳಕಿನ ಮಂದ ಪ್ರಕಾಶದಲ್ಲಿ ಅವರು ಛಾಯಾ ರೂಪಿಗಳಂತೆ ಕಾಣಿಸಿದರು ಧನಂಜಯ ಅವರ ನಡವಳಿಕೆ ಯಿಂದ ಅವರು ಶತ್ರುಪಕ್ಷದವರು ಯಾರೋ ಇರಬೇಕೆಂದು ಊಹಿಸಿ, ಅವರನ್ನು ಹಠಾತ್ತಾಗಿ ಮುತ್ತಿ, ಕೈಸೆರೆ ಹಿಡಿದಿದ್ದನು, ಅವನ ಊಹೆಯಂತೆ ಅವರು ಶತ್ರುಪಕ್ಷದವರೇ ಆಗಿದ್ದರು ಆದರೆ ಶತ್ರುಪಕ್ಷದಲ್ಲಿ ಅವರು ಯಾರು ಎಂಬುದು ಅವನ ಊಹೆಗೂ ನಿಲುಕದ ಸಂಗತಿಯಾಗಿತ್ತು !

ಧನಂಜಯನು ಸೆರೆಯಾಳುಗಳನ್ನು ಬಹಳ ಮರ್ಯಾದೆಯಿಂದ ಶಿಬಿರಕ್ಕೆ ಕರೆತಂದು, ರಾಯನ ಸಮ್ಮುಖದಲ್ಲಿ ನಿಲ್ಲಿಸಿದನು.

ನಿದ್ರಿಸುತ್ತಿದ್ದ ರಾಯನನ್ನು ಎಚ್ಚರಗೊಳಿಸಿ ಈ ಸಂಗತಿಯನ್ನು ತಿಮ್ಮರಸನು ಅರಿಕೆ ಮಾಡಿದಾಗ, ರಾಯನು ತನ್ನ ಕಿವಿಯನ್ನೇ ನಂಬಲಿಲ್ಲ ತಾನು ಇನ್ನೂ ನಿದ್ರೆಯಲ್ಲಿ ಕನಸು ಕಾಣುತ್ತಿರುವುದಾಗಿ ಭಾವಿಸಿದನು. ಅವನು ಪ್ರತಿದಿನ ಕಾಣುತ್ತಿದ್ದ ಕನಸೇ ಆದಾಗಿತ್ತು. ಇಂದು ಆ ಕನಸು ದೈವಾನುಗ್ರಹದಿಂದ ನನಸಾಗಿ ಮಾರ್ಪಟ್ಟಿತು.

ರಾಯನು ಕೂಡಲೇ ಸೆರೆಸಿಕ್ಕಿರುವ ಗಜಪತಿಯ ಪತ್ನೀಪುತ್ರರನ್ನು ಮರ್ಯಾದೆಯಿಂದ ಬಳಿಗೆ ಕರೆಸಿಕೊಂಡು, ಅವರ ಕುಶಲಪ್ರಶ್ನೆ ಮಾಡಿ ನಡುರಾತ್ರಿಯಲ್ಲಿ ಅವರನ್ನು ವಿಚಾರಣೆಯಿಂದ ದಣಿಸಬಾರದೆಂದು ರಾಜೋಚಿತವಾದ ಬಿಡಾರಗಳಲ್ಲಿ ಅವರನ್ನು ಇಡಲು ಆಜ್ಞೆಮಾಡಿ, ಮರುದಿನ ಅವರನ್ನು ಬಂದು ನೋಡುವುದಾಗಿ ಹೇಳಿ ಅವರಿಂದ ಬೀಳ್ಕೊಂಡನು. ಆ ರಾತ್ರಿ ಕೃಷ್ಣದೇವರಾಯನಿಗೆ ಅವರು ಸಿಕ್ಕಿದ ಸಂತೋಷದ ಹೆಚ್ಚಳದಲ್ಲಿ ನಿದ್ರೆ ಹತ್ತಲಿಲ್ಲ. ಇತ್ತ ಗಜಪತಿಯ ಪತ್ನೀ ಪುತ್ರರಿಗೆ ತಾವು ಸೆರೆ ಸಿಕ್ಕಿದ ಸಂಗತಿಯನ್ನು ನೆನೆದು ದುಃಖದಲ್ಲಿ ನಿದ್ರೆ ಹತ್ತಲಿಲ್ಲ.

ಮಾರನೆಯ ದಿನ ಕೃಷ್ಣದೇವರಾಯನು ಮಹಾರಾಣಿಯನ್ನೂ, ಯುವರಾಜಕುಮಾರನನ್ನೂ ತನ್ನ ಬಳಿಗೆ ಕರೆಸಿಕೊಂಡು ಅವರನ್ನು ಆದರದಿಂದ ಮಾತನಾಡಿಸಿದ.

"ಯುವರಾಜಕುಮಾರರಿಗೂ, ಮಹಾರಾಣಿಯವರಿಗೂ ನನ್ನಿಂದ ಅಪಚಾರವಾಗಿದ್ದರೆ ಕ್ಷಮಿಸಬೇಕು. ತಮಗೆ ಮಾಡಿದ ವ್ಯವಸ್ಥೆಗಳೆಲ್ಲವೂ ಉತ್ತಮವಾಗಿ ಇದ್ದುವೇ? ತಮ್ಮೊಂದಿಗೆ ಪರಿಚಾರಕರು ಸೌಜನ್ಯದಿಂದ ನಡೆದುಕೊಂಡರೆ? ಅಧಿಕಾರಿಗಳು ಮರ್ಯಾದೆಯಿಂದ ಕಂಡರೆ? ತಮ್ಮ ಕುಂದುಕೊರತೆಗಳೇನಿದ್ದರೂ ನನ್ನೊಡನೆ ತಿಳಿಸಲು ತಾವು ಸಂಕೋಚಪಡಬಾರದು. ನೀವು ನಮಗೆ ಸೆರೆಸಿಕ್ಕಿದ್ದರೂ, ನೀವು ಸೆರೆಯಾಳುಗಳೆನ್ನುವ ಭಾವನೆ ಲವಲೇಶವಾದರೂ ನಿಮಗೆ ಬರದಂತೆ ನೋಡಿಕೊಳ್ಳಬೇಕೆಂಬುದೇ ನನ್ನ ಅಭೀಷ್ಟ. ನನ್ನಿಂದ ತಮ್ಮ ವಿಶ್ರಾಂತಿಗೆ ಭಂಗ ಬಂದಿದ್ದರೆ ದಯವಿಟ್ಟು ಕ್ಷಮಿಸಬೇಕು" ಎಂದು ಹೇಳಿದ, ಕೃಷ್ಣದೇವರಾಯ ಸೌಜನ್ಯದ ಮೂರ್ತಿಯಾಗಿ.

ರಾಯನ ಮಾತುಗಳು ಆ ತಾಯಿಮಕ್ಕಳಮೇಲೆ ತುಂಬಾ ಪರಿಣಾಮ

ವನ್ನುಂಟುಮಾಡಿತು. ಸೆರೆಸಿಕ್ಕಿರುವ, ಶತ್ರುಪಕ್ಷದ ತಮ್ಮನ್ನು ಮಿತ್ರರಂತೆ ನಡೆಸಿಕೊಳ್ಳುತ್ತಿರುವ ರಾಯನ ಬಗ್ಗೆ ಅಭಿಮಾನ ಉಂಟಾಯಿತು. ಸಾಮ್ರಾಟ ಕೃಷ್ಣದೇವರಾಯನನ್ನು ಅವರು ಇದುವರೆಗೆ ವಿಜಯನಗರದ ಅರಸನೆಂದು ಮಾತ್ರ ತಿಳಿದಿದ್ದರು. ಈಗ ಪ್ರಥಮ ಪರಿಚಯದಲ್ಲೇ ಅವನು ತಮ್ಮ ಮಿತ್ರನೆಂದು ಅರಿತರು.

ಸಾಮ್ರಾಟರ ವಿನಯಕ್ಕೆ ಮಾರುಹೋದ ಯುವರಾಜಕುಮಾರ ರಾಮಚಂದ್ರದೇವನು ಅಷ್ಟೇ ವಿನಯವಾಗಿ ಉತ್ತರ ಕೊಟ್ಟ.

''ಸಾಮ್ರಾಟರು ನಮ್ಮ ವಿಷಯದಲ್ಲಿ ತೆಗೆದುಕೊಂಡಿರುವ ಆಸಕ್ತಿ ಅಭಿಮಾನಗಳಿಗೆ ನಾವು ಕೃತಜ್ಞರಾಗಿದ್ದೇವೆ" ನಮ್ಮ ಕೃತಜ್ಞತೆಯನ್ನು ಹೇಗೆ ಅರ್ಪಿಸಬೇಕೆಂಬುದೇ ನಮಗೆ ತಿಳಿಯದಾಗಿದೆ. ನಾವು ಸೆರೆಯಾಳು ಗಳಾಗಿದ್ದರೂ, ನಾವು ಸೆರೆಯಾಳುಗಳೆಂಬ ಭಾವನೆ ನಮಗೆ ಎಳ್ಳಷ್ಟು ಬರದ ರೀತಿಯಲ್ಲಿ ನಮ್ಮನ್ನು ನಡೆಸಿಕೊಂಡಿದ್ದೀರಿ. ನಾವು ಶತ್ರುಗಳೆಂಬುದನ್ನು ಮರಸುವಷ್ಟು ನಿಮ್ಮ ಪ್ರೀತಿ ವಿಶ್ವಾಸಗಳಿಗೆ ನಾವು ಸೆರೆಯಾಗಿದ್ದೇವೆ."

''ನಿಮ್ಮ ಪ್ರೀತಿ ವಿಶ್ವಾಸಗಳಿಗೆ ನಾವು ಪಾತ್ರರಾದರೆ ನಾವೂ ಕೃತಾರ್ಥರಾದಂತೆ. ಇದೇಬಗೆಯ ವಿಶ್ವಾಸವನ್ನು ನೀವು ಕೊನೆಯತನಕ ಇಟ್ಟಿರಬೇಕೆಂದೇ ನಮ್ಮ ಆಶಯ.'' ಎಂದು ಹೇಳಿ ಕೆಲಕಾಲ ರಾಮಚಂದ್ರ ದೇವನ ಮುಖವನ್ನು ದಿಟ್ಟಿಸಿ.

''ಆದರೆ, ದುರ್ದೈವದಿಂದ ನಾವು ಮಿತ್ರರಾಗಿರುವ ಬದಲು ಶತ್ರುಗಳಾಗಿದ್ದೇವೆ........!'' ಎಂದನು.

''ಶತ್ರುಗಳನ್ನು ಮಿತ್ರರನ್ನಾಗಿಸಿಕೊಳ್ಳುವ ಕಲೆ ತಮಗೆ ಚನ್ನಾಗಿ ಸಾಧಿಸಿರುವಾಗ ಶತ್ರುಗಳು ಮಿತ್ರರಾಗುವುದು ಎಷ್ಟುಹೊತ್ತು.

ಎಂದ ರಾಮಚಂದ್ರದೇವ ನಗುತ್ತಾ.

''ನನ್ನ ವಿಷಯದಲ್ಲಿ ನಿಮಗಿರುವ ಅಭಿಮಾನ, ಗೌರವಗಳಿಗೆ ನಾನು ಋಣಿಯಾಗಿದ್ದೇನೆ! ಆದರೂ ವಾಸ್ತವ ಸಂಗತಿಯನ್ನು ಮರೆಯಲಾದೀತೆ?"

"ನೀವು ಮನಸ್ಸು ಮಾಡಿದರೆ ಮರೆಸಬಲ್ಲಿರಿ !"

"ಹೇಗೆ ?"

"ನೀವು ಯುದ್ಧವನ್ನು ಪರಿಸಮಾಪ್ತಿಗೊಳಿಸಿ ಸಂಧಿಮಾಡಿಕೊಂಡರೆ............"

"ಇದು ನಿಮ್ಮನ್ನೇ ಕುರಿತಿದೆ. ಹಿಂದೆ ನಾನು ಎರಡುಬಾರಿ ಸಂಧಾನಕ್ಕೆಳಿಸಿದಾಗ, ನಿಮ್ಮ ತಂದೆಯಾದ ಪ್ರತಾಪರುದ್ರ ಗಜಪತಿಗಳು, ನಮ್ಮನ್ನು ತಿರಸ್ಕಾರದಿಂದ ಕಡೆಗಣಿಸಿ ನೋಡಿದರು. ಅಷ್ಟೇ ಅಲ್ಲ. ತಮ್ಮ ಘನತೆಗೆ ಕುಂದುತರುವ ರೀತಿಯಲ್ಲಿ ನಡೆದುಕೊಂಡರು. ಇಷ್ಟರಿಂದಲೇ ನಮಗೆ ಕೋಪಬರುತ್ತಿರಲಿಲ್ಲ. ಆದರೆ ಗಜಪತಿಗಳು ತಮ್ಮ ಕುಲದ ಅಹಂಕಾರವನ್ನು ಮೆರೆಸಲು, ನಮ್ಮ ಕುಲಗೋತ್ರಗಳನ್ನು ಜರಿದು, ಅಪಮಾನ ಮಾಡಿದರು; ನಮ್ಮ ಪೂಜ್ಯ ಪಿತಾಮಹರ ಸತ್ಕೀರ್ತಿಗೆ ಕಳಂಕ ಹಚ್ಚುವ ಪ್ರಯತ್ನಮಾಡಿದರು. ಇದರಿಂದಾಗಿ ನಮಗೆ ಸಿಟ್ಟುಬಂದು, ಉತ್ಕಲದ ಮೇಲೆ ದಂಡೆತ್ತಿ ಬರಬೇಕಾಯಿತು. ಗಜಪತಿಯು ಉದ್ಧಟವರ್ತನೆಯನ್ನು ತಕ್ಕ ರೀತಿಯಲ್ಲಿ ಶಿಕ್ಷಿಸಲು; ತಮ್ಮ ಅಕೃತ್ಯಕ್ಕಾಗಿ ತಾವೇ ಪರಿತಪಿಸುವಂತೆ ಮಾಡಲು, ನನ್ನ ಈ ಸಂಕಲ್ಪ ನೆರವೇರುವ ತನಕ ವಿಜಯನಗರಕ್ಕೆ ಹಿಂದಿರುಗುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದೇನೆ. ಗಜಪತಿಯು ಮಾಡಿದ ಅವಿವೇಕ ವರ್ತನೆಯ ಫಲವಾಗಿ. ನೀವು ಶಿಕ್ಷೆ ಅನುಭವಿಸಬೇಕಾಗಿ ಬಂದುದಕ್ಕೆ ವಿಷಾದಿಸುತ್ತೇನೆ. ನನ್ನ ಮಾತಿನಿಂದ ನಿಮ್ಮಗಳ ಮನಸ್ಸಿಗೆ ನೋವುಂಟಾಗಿದ್ದರೆ, ದಯವಿಟ್ಟು ಕ್ಷಮಿಸಿ."

ಈ ಎಲ್ಲಾ ಮಾತನ್ನು ಯುವರಾಜಕುಮಾರ ರಾಮಚಂದ್ರದೇವನೂ, ಮಹಾರಾಣಿ ಲಕ್ಷ್ಮೀದೇವಿಯೂ ಆಲಿಸುತ್ತಾ ವಿಗ್ರಹಗಳಂತೆ ಕುಳಿತಿದ್ದರು. ಅವರ ಮೌನವನ್ನು ಒಡೆಯಲೆಂಬಂತೆ, ರಾಯನು ಹೇಳಿದ.

"ಈಗ ನಿಮ್ಮಿಂದ ಒಂದು ಉಪಕಾರವಾಗಬೇಕಾಗಿದೆ!"

"ಏನು?"

"ನನ್ನ ಮಾತನ್ನು ಅನ್ಯಥಾ ಭಾವಿಸಬಾರದು. ಕೊಂಡಪಲ್ಲಿಯ ಮುತ್ತಿಗೆ ಕಳೆದ ಮೂರು ನಾಲ್ಕು ತಿಂಗಳಿಂದಲೂ ನಡೆದಿದ್ದರೂ ದುರ್ಗ ನಮ್ಮ ವಶವಾಗುವ ಲಕ್ಷಣ ಕಾಣಲಿಲ್ಲ. ದೈವಾನುಗ್ರಹದಿಂದಲೆಂಬಂತೆ ನೀವು ನಮ್ಮ ಕೈಸೆರೆ ಸಿಕ್ಕಿದ್ದೀರಿ. ನೀವು ಮನಸ್ಸುಮಾಡಿದರೆ, ವೃಥಾ ಕಾರಣದಿಂದ ಆಗುವ ರಕ್ತಪಾತವನ್ನು ನಿಲ್ಲಿಸಬಹುದು. ದುರ್ಗಾಧಿಪತಿ

ಗಳಾದ ನೀವು ನಮ್ಮ ಸೆರೆಯಲ್ಲಿರುವುದರಿಂದ, ಕೊಂಡಪಲ್ಲಿ ದುರ್ಗವನ್ನು ಯುದ್ಧವಿಲ್ಲದೆ ನಮ್ಮ ಅಧೀನಕ್ಕೆ ಒಪ್ಪಿಸಿದರೆ, ಎರಡು ಕಡೆಯಲ್ಲೂ ನಿರಪ ರಾಧಿ ಸೈನಿಕರು ಮಡಿಯುವುದು ತಪ್ಪುತ್ತದೆ. ನಿಮಗೆ ಇದುವರೆಗಾಗಲೇ ನಮ್ಮ ಸೈನ್ಯದ ಶಕ್ತಿಸಾಮರ್ಥ್ಯಗಳ ಅರಿವು ಸಾಕಷ್ಟು ಆಗಿದೆ ಎಂದು ನಂಬಿ ದ್ದೇನೆ. ಇನ್ನೂ ನಮ್ಮ ಶಕ್ತಿಪ್ರದರ್ಶನ ನೋಡಲಿಚ್ಛಿಸುವುದಾದರೆ, ಅದು ಪೊಟ್ನನೂರಿನ ಕಾಳಗದಲ್ಲಿ ಆಗಲಿ; ಕೊಂಡವೀಡು ರಣರಂಗದಲ್ಲಿ ಬೇಡ. ನಮ್ಮ ಸ್ನೇಹ, ಪ್ರೀತಿವಿಶ್ವಾಸಗಳು ಚಿರಂತರವಾಗಿ ಉಳಿಯಬೇಕಾದರೆ ತಾವು ನಮ್ಮ ಕೋರಿಕೆಯನ್ನು ಈಡೇರಿಸಿಕೊಡುವಿರೆಂದು ನಂಬಿದ್ದೇನೆ" ಎಂದು ಹೇಳಿದ.

"ಸಾಮ್ರಾಟರು ಇಷ್ಟು ಸ್ಪಷ್ಟವಾಗಿ ಮಾತನಾಡಿದ ಮೇಲೆ ನಮ್ಮ ಮನಸ್ಸಿನಲ್ಲಿ ಇರುವುದನ್ನು ನಾವೂ ಸ್ಪಷ್ಟಪಡಿಸಿಬಿಡುತ್ತೇವೆ. ನಮ್ಮ ಮಾತನ್ನು ಸಮಾಧಾನಚಿತ್ತದಿಂದ ಆಲಿಸಬೇಕು. ದುರ್ಗಾಧಿಪತಿಯಾದ ನಾನು ಒಬ್ಬನು ಸೆರೆಸಿಕ್ಕಿದ ಮಾತ್ರಕ್ಕೆ ಕೊಂಡಪಲ್ಲಿ ಅನಾಥವಾಯಿತೆಂದು ತಾವು ಬಗೆಯಬಾರದು. ಬಾಹುಶಕ್ತಿಯಲ್ಲಿ, ಬುದ್ಧಿಶಕ್ತಿಯಲ್ಲಿ ನನ್ನನ್ನು ಮೀರಿಸುವ ನೂರಾರು ಉತ್ಕಲದ ವೀರಪುತ್ರರು ದುರ್ಗದ ರಕ್ಷಣೆಗಾಗಿ ನಿಂತಿದ್ದಾರೆ. ನಿಮಗೆ ಕೊಂಡಪಲ್ಲಿಯು ಶರಣಾಗತವಾಗಬೇಕಾದರೆ, ಅದನ್ನು ನೀವು ಯುದ್ಧಮಾಡಿಯೇ ಗೆದ್ದು, ಸ್ವಾಧೀನಪಡಿಸಿಕೊಳ್ಳಬೇಕು. ನಾನು ಒಬ್ಬ ವ್ಯಕ್ತಿ ನಿಮಗೆ ಸೆರೆಸಿಕ್ಕಿರುವೆನೆಂದು, ದುರ್ಗದ ವೀರಪುತ್ರರ ಸ್ವಾತಂತ್ರ್ಯವನ್ನು ಬಲಿಕೊಡಲಾರೆ. ಸ್ವತಂತ್ರವಿಲ್ಲದ ಹೊನ್ನಿನ ಅರಮನೆ ಗಿಂತ, ಸ್ವತಂತ್ರವಾದ ಹುಲ್ಲಿನ ಗುಡಿಸಿಲೇ ಸುಖಕರವೆಂಬ ಮಾತನ್ನು ಪ್ರತಿಯೊಬ್ಬ ಕಳಿಂಗಪುತ್ರನೂ ಬಲ್ಲ. ನನ್ನ ಸ್ವಾತಂತ್ರ್ಯಹರಣವಾಗಿದೆ ಎಂದು ಇನ್ನೊಬ್ಬರ ಸ್ವಾತಂತ್ರ್ಯದ ಹರಣಕ್ಕೆಳೆಸುವುದಕ್ಕಿಂತ ನೀಚತನ, ಪಾಪಕೃತ್ಯ ಬೇರೆ ಇಲ್ಲ—ದೇಶಪ್ರೇಮಿಯಾದವನಿಗೆ. ಆದುದರಿಂದ ಸಾಮ್ರಾಟರು ಯುದ್ಧವಿಲ್ಲದೆ, ರಕ್ತಪಾತವಿಲ್ಲದೆ ಕೊಂಡಪಲ್ಲಿಯನ್ನು ಗೆಲ್ಲುವ ಕನಸನ್ನು ಮರೆಯಬೇಕು.

ಯುವರಾಜಕುಮಾರ ರಾಮಚಂದ್ರದೇವನ ಬಾಯಲ್ಲಿ ಬಂದ ವೀರೋದ್ಗಾರವನ್ನು ಕೇಳಿ ಕೊಂಡಪಲ್ಲಿಯನ್ನು ಯುದ್ಧವಿಲ್ಲದೆ ವಶಪಡಿಸಿ

ಕೊಳ್ಳುವ ಬಗ್ಗೆ ರಾಯನು ಕಟ್ಟಿದ ಎಲ್ಲಾ ಕನಸುಗಳು ಪುಡಿಪುಡಿಯಾಯಿತು. ರಾಮಚಂದ್ರದೇವನೊಡನೆ ಬಯಸಿದ ಆದರ್ಶ ಸ್ನೇಹ ಗಗನ ಕುಸುಮದಂತೆ ಕಂಡಿತು. ತನ್ನ ಸವಿ ಮಾತುಗಳಿಗೆ ಮಾರುಹೋಗುವ ವ್ಯಕ್ತಿ ಅವನಲ್ಲವೆಂಬುದು ಅವನ ಮಾತಿನಿಂದಲೇ ಸ್ಪಷ್ಟವಾಯಿತು. ಇನ್ನು ಹೆಚ್ಚು ಚರ್ಚಿಸಿ, ವೃಥಾ ಮನೋಕ್ಲೇಶ ಉಂಟುಮಾಡಿಕೊಳ್ಳಲು ಇಚ್ಛಿಸದೆ ವಿಷಯವನ್ನು ಇಲ್ಲಿಗೇ ಬಿಟ್ಟು ನಗುಮುಖದಲ್ಲೇ ಅವರನ್ನು ಸ್ನೇಹವಚನಗಳಿಂದ ನುಡಿಸಿ, ಅವರನ್ನು ಬೀಳ್ಕೊಂಡು ಹೊರಟನು.

ಯುವರಾಜಕುಮಾರ ರಾಮಚಂದ್ರದೇವನೊಡನೆ ನಡೆಸಿದ ಎಲ್ಲಾ ಮಾತು ಕಥೆಯನ್ನು ತಿಮ್ಮರಸನಿಗೆ ವರದಿಮಾಡಿ, ರಾಯನು ನಿಟ್ಟುಸಿರು ಬಿಟ್ಟು ನುಡಿದ "ಅಪ್ಪಾಜಿ, ದೈವಾನುಗ್ರಹದಿಂದಲೆಂಬಂತೆ ಗಜಪತಿಯ ಪತ್ನೀಪುತ್ರರು ನಮ್ಮ ವಶವಾಗಿದ್ದಾರೆ. ಇನ್ನಾದರೂ ಕೊಂಡಪಲ್ಲಿಯ ಯುದ್ಧ ಕೊನೆಗಾಣುವುದೆಂದು ಬಗೆವಿದ್ದೆ. ಆದರೆ ತುಂಬಾ ನಿರಾಶೆಯಾಯಿತು. ಯುವರಾಜಕುಮಾರರ ಮಾತಿನಿಂದ ಯುದ್ಧವಿಲ್ಲದೆ, ನಿರಪರಾಧಿ ಸೈನಿಕರ ರಕ್ತಪಾತವಿಲ್ಲದೆ ಕೊಂಡಪಲ್ಲಿ ನಮ್ಮ ವಶವಾಗುವಂತೆ ಇಲ್ಲ!"

"ಪ್ರಭುಗಳು ಈ ಬಗ್ಗೆ ಯೋಚನೆಮಾಡುವ ಕಾರಣವಿಲ್ಲ. ಯುವರಾಜಕುಮಾರರು ತಾವಾಗಿ ದುರ್ಗವನ್ನು ವಶಪಡಿಸದಿದ್ದರೆ ನಾವು ಉಪಾಯಾಂತರದಿಂದಲಾದರೂ ಈ ಕಾರ್ಯ ಸಾಧಿಷೋಣ. ಹೇಗೂ ದುರ್ಗಾಧಿಪತಿಗಳಾದ ಯುವರಾಜಕುಮಾರ ರಾಮಚಂದ್ರದೇವರು ನಮ್ಮ ಸೆರೆಯಲ್ಲಿ ಇದ್ದರೆ—ಇನ್ನು ಕೊಂಡಪಲ್ಲಿಯೂ ನಮ್ಮ ವಶವಾದಂತೆಯೇ ಸರಿ. ಎಂದು ಹೇಳಿ ರಾಯನ ಕಿವಿಯಲ್ಲಿ ತನ್ನದೊಂದು ಉಪಾಯವನ್ನು ಅರುಹಿದನು. ಅದನ್ನು ಕೇಳಿ ರಾಯನ ಕಳೆಗುಂದಿದ ಮುಖ ಹೂವಿನಂತೆ ಅರಳಿತು.

ಮಾರನೆಯದಿನ ಯುದ್ಧ ಆರಂಭವಾಗುವ ಮುನ್ನ ತಿಮ್ಮರಸನು, ಒಬ್ಬ ದೂತನೊಡನೆ ಒಂದು ಮಹತ್ವದ ಪತ್ರವನ್ನು ಕೊಟ್ಟು ಅದನ್ನು ದುರ್ಗಾಧಿಪತಿಗೆ ಮುಟ್ಟಿಸಲು ಕಳುಹಿಸಿಕೊಟ್ಟನು.

ಆ ಮಹತ್ವದ ಪತ್ರವನ್ನು ಒಯ್ದು ಆ ದೂತನು ಕೋಟೆಯ ಹೊರಗೆ ನಿಂತು ತಾನು ಬಂದಿರುವ ಉದ್ದೇಶವನ್ನು ಸಂಜ್ಞೆಯಿಂದ ತಿಳಿಸಿ, ತನ್ನೊಡನೆ ತಂದಿದ್ದ ಪತ್ರವನ್ನು ಕೋಟೆಯಮೇಲೆ ಇದ್ದ ದುರ್ಗಾಧಿಪತಿ ಶಿರಶ್ಚಂದ್ರಮಹಾಪಾತ್ರನ ಕೈಗೆ ತಲುಪಿಸಿದನು.

ಆ ಪತ್ರವನ್ನು ಓದಿಕೊಂಡು ಶಿರಶ್ಚಂದ್ರಮಹಾಪಾತ್ರನಿಗೆ ಉಂಟಾದ ಆಶ್ಚರ್ಯ ಅಷ್ಟಿಷ್ಟಲ್ಲ!

ಮೊದಲು ಆ ಪತ್ರವನ್ನು ನಂಬಲು ಸಾಧ್ಯವಾಗದೆ ಮತ್ತೊಮ್ಮೆ ಅದನ್ನು ಓದಿಕೊಂಡನು. ಕಡೆಯಲ್ಲಿದ್ದ ಸಹಿ ಅವನಿಗೆ ತುಂಬ ಪರಿಚಿತನಾಗಿದ್ದ ಯುವರಾಜಕುಮಾರ ರಾಮಚಂದ್ರದೇವನದು. ಅವನೇ ತನ್ನ ಸ್ವಹಸ್ತಾಕ್ಷರದಲ್ಲಿ ಬರೆದಿದ್ದ ಪತ್ರ ಅದು. ತಾನು ಕೊಂಡಪಲ್ಲಿಯಿಂದ ಮಹಾರಾಣಿ ಲಕ್ಷ್ಮೀಬಾಯಿಯನ್ನು ಕರೆದುಕೊಂಡು, ಪೊಟ್ಟನೂರಿಗೆ ಹೊರಟಿದ್ದಾಗ, ದುರ್ಗ ಮಧ್ಯೆ ಶತ್ರುಗಳಕೈಗೆ ಸಿಕ್ಕಿ ಸೆರೆಯಾಗಿರುವುದಾಗಿಯೂ, ಕೃಷ್ಣದೇವರಾಯನ ಸೆರೆಮನೆಯಲ್ಲಿ ಇರುವ ತಮ್ಮ ಪ್ರಾಣಕ್ಕೆ ಗಂಡಾಂತರ ಒದಗಿದೆ ಎಂದೂ, ತನ್ನ ಹಾಗೂ ತನ್ನ ತಾಯಿಯ ಪ್ರಾಣಸಂರಕ್ಷಣೆಯಾಗಬೇಕಾದರೆ ದುರ್ಗಾಧಿಪತಿಯಾದ ಶಿರಶ್ಚಂದ್ರಮಹಾಪಾತ್ರನು ಯುದ್ಧವಿಲ್ಲದೆ, ದುರ್ಗವನ್ನು ರಾಯನಿಗೆ ಒಪ್ಪಿಸಿಕೊಡಬೇಕೆಂದೂ—ತಮ್ಮ ಕೋರಿಕೆಯಂತೆ ಶಿರಶ್ಚಂದ್ರಮಹಾಪಾತ್ರನು ನಡೆಯುವುದಾಗಿ ರಾಮಚಂದ್ರದೇವನು ಬರೆದಿದ್ದನು.

ಆ ಪತ್ರ ಯುವರಾಜಕುಮಾರನ ಪತ್ರವೆಂಬುದಕ್ಕೆ ಅನುಮಾನ ಉಂಟಾಗಲಿಲ್ಲ. ಆದರೆ ಪತ್ರದಲ್ಲಿ ಉಲ್ಲೇಖಿತವಾಗಿದ್ದ ಸಂಗತಿ ಮಾತ್ರ ನಂಬಲು ಅಸಾಧ್ಯವಾಗಿತ್ತು. ಯುವರಾಜಕುಮಾರ ರಾಮಚಂದ್ರದೇವನು ತನ್ನ ತಾಯಿಯಾದ ಮಹಾರಾಣಿ ಲಕ್ಷ್ಮೀದೇವಿಯನ್ನು ಪೊಟ್ಟನೂರಿಗೆ ಬಿಟ್ಟುಬರಲು ಕೆಲವು ಮಂದಿ ಅನುಚರರೊಡನೆ, ಗುಪ್ತವಾಗಿ ಕೊಂಡಪಲ್ಲಿ ದುರ್ಗವನ್ನು ಬಿಟ್ಟುಹೋದುದು ಶಿರಶ್ಚಂದ್ರಮಹಾಪಾತ್ರನಿಗೆ ತಿಳಿದಿತ್ತು. ಆದರೆ, ಅವನು ಮಾರ್ಗಮಧ್ಯದಲ್ಲಿ ಶತ್ರುಗಳಿಗೆ ವಶವಾಗಿರುವ ಸಂಗತಿ ತಿಳಿದಿರಲಿಲ್ಲ. ಈಗ ಪತ್ರ ಮುಖೇನ ತಿಳಿದಾಗ, ಈ ವಾರ್ತೆಯನ್ನು ನಂಬಲು ಮನಸ್ಸು ಹಿಂಜರಿಯಿತು. ಈ ಪತ್ರವನ್ನು ಶತ್ರುಗಳು ಸೃಷ್ಟಿಸಿರ

ಬಾರದೇಕೆ ಎನ್ನುವ ಅನುಮಾನ ! ಆದರೆ, ಗುಟ್ಟಾಗಿ ಕೊಂಡಪಲ್ಲಿ ದುರ್ಗವನ್ನು ಬಿಟ್ಟುಹೊರಟ ಯುವರಾಜಕುಮಾರನ ವಿಷಯ ಶತ್ರುಗಳಿಗೆ ಹೇಗೆ ತಿಳಿಯಲು ಸಾಧ್ಯ ? ಈ ಪತ್ರ ಸುಳ್ಳು ಪತ್ರವೆನ್ನಲು ಶಿರಶ್ಚಂದ್ರ ಮಹಾಪಾತ್ರನಿಗೆ ಸಾಧ್ಯವಿರಲಿಲ್ಲ. ನಿಜವಾದ ಪತ್ರವೆನ್ನಲು ಪತ್ರದ ಧೋರಣೆ, ಪತ್ರದಲ್ಲಿ ನಿರೂಪಿತವಾಗಿದ್ದ ಸಂಗತಿಗಳು ಯುವರಾಜಕುಮಾರನು ಬರೆದ ಪತ್ರವೆನ್ನಲು ಸಂದೇಹಕ್ಕೆ ಎಡೆಯುಂಟುಮಾಡಿತ್ತು. ಏಕೆಂದರೆ, ಶಿರಶ್ಚಂದ್ರ ಮಹಾಪಾತ್ರನಿಗೆ ಯುವರಾಜಕುಮಾರನು ಎಂತಹ ವೀರ, ಎಷ್ಟು ಸ್ವಾಭಿಮಾನಿ, ದೇಶಪ್ರೇಮಿ ಎನ್ನುವುದು ಗೊತ್ತಿತ್ತು. ಆದರೆ ಪತ್ರದಲ್ಲಿ ರಾಮಚಂದ್ರದೇವನು ತನ್ನ ಸ್ವಭಾವಕ್ಕೆ ವಿರುದ್ಧವಾದ ರೀತಿಯಲ್ಲಿ ಪತ್ರ ಬರೆದಿದ್ದ —ಜೀವಕ್ಕೆ ಅಂಜುವ ಹೇಡಿಯಂತೆ. ಇದನ್ನು ನಂಬುವುದೆಂತು ?

ಈ ಪತ್ರವನ್ನು ನಂಬಿ ಅದರಂತೆ ನಡೆದರೆ ಒಂದು ಗಂಡಾಂತರ— ಕೊಂಡಪಲ್ಲಿ ದುರ್ಗವನ್ನು ನಾಲ್ಕು ತಿಂಗಳಿಂದಲೂ ಕಾಪಾಡಿಕೊಂಡು ಬಂದಿದ್ದು ಈಗ ದುರ್ಗವನ್ನು ಯುದ್ಧವಿಲ್ಲದೆ ಶತ್ರುವಿನ ವಶಪಡಿಸಬೇಕಾಗಿತ್ತು. ಪತ್ರವನ್ನು ಕಡೆಗಣಿಸಿ, ಯುದ್ಧಮಾಡಿದರೆ, ಅಲ್ಲಿ ಶತ್ರುವಿನ ಸೆರೆಮನೆಯಲ್ಲಿರಬಹುದಾದ ರಾಜಕುಮಾರ ಹಾಗೂ, ಮಹಾರಾಣಿಯ ಜೀವಕ್ಕೆ ಶತ್ರುಗಳಿಂದ ಯಾವ ಗಂಡಾಂತರ ಒದಗುವುದೋ? ಈ ಸಂದಿಗ್ಧತೆಯಿಂದ ಪಾರಾಗುವ ದಾರಿಕಾಣದೆ, ನಡೆದುಕೊಳ್ಳಬೇಕಾದ ಮಾರ್ಗ ಹೊಳೆಯದೆ ವಿಹ್ವಲಗೊಂಡನು. ಇದು ತನಗೆ ಬರೆದ ಪತ್ರವಾದರೂ, ಕೊಂಡಪಲ್ಲಿಯ ಹಿತರಕ್ಷಣೆಗೆ ಸಂಬಂಧಿಸಿದ ಪ್ರಶ್ನೆಯಾಗಿದ್ದುದರಿಂದ, ದುರ್ಗದಲ್ಲಿರುವ ಎಲ್ಲ ದಳಪತಿಗಳ ಅಭಿಪ್ರಾಯವನ್ನು ತೆಗೆದುಕೊಂಡು ಅನಂತನ ಕಾರ್ಯೋನ್ಮುಖನಾಗಬೇಕೆಂದು ನಿರ್ಧರಿಸಿ, ಅದನ್ನು ದಳಪತಿಗಳ ಸಭೆಯಲ್ಲಿಟ್ಟು, ತನ್ನ ಅನುಮಾನಗಳನ್ನೆಲ್ಲ ಸೂಚಿಸಿದ. ದಳಪತಿಗಳಲ್ಲಿ ಬಹಳ ಹೊತ್ತು ಈ ಪತ್ರದ ಬಗ್ಗೆ ಚರ್ಚೆ ನಡೆದು ಕಡೆಗೊಂದು ವಿಷಯ ನಿರ್ಧಾರವಾಯಿತು.

ಯುವರಾಜಕುಮಾರ ಮತ್ತು ಮಹಾರಾಣಿಯವರು ನಿಜಕ್ಕೂ ಶತ್ರುವಿನ ಕೈಸೆರೆ ಸಿಕ್ಕಿ ಅವರ ಜೀವ ಗಂಡಾಂತರದಲ್ಲಿ ಇರುವುದು ನಿಜವೇ ಸುಳ್ಳೇ ಎಂಬುದನ್ನು ತಿಳಿದುಕೊಂಡು, ಅನಂತರ ದುರ್ಗವನ್ನು ಶತ್ರು

ಗಳಿಗೆ ಯುದ್ಧವಿಲ್ಲದೆ ಒಪ್ಪಿಸುವುದೇ, ಬಿಡುವುದೇ ಎಂಬ ಸಂಗತಿಯನ್ನು ತೀರ್ಮಾನಿಸಬೇಕೆಂದು ಒಮ್ಮತ ಅಭಿಪ್ರಾಯಕ್ಕೆ ಬರಲಾಯಿತು. ಅದರಂತೆ ಪತ್ರವಾಹಕನ ಮೂಲಕ, ತಮ್ಮ ಯುವರಾಜಕುಮಾರರು, ನಿಜವಾಗಿಯೂ ಶತ್ರುಸೇನೆಗಳಿಗೆ ಸೆರೆಸಿಕ್ಕಿದ್ದರೆ ಅದನ್ನು ಖಚಿತಪಡಿಸಿಕೊಡಲು, ಒಂದುಬಾರಿ ತನಗೆ ಕಾಣಿಸಿಕೊಳ್ಳಬೇಕೆಂದೂ ತಿಳಿಸಲಾಯಿತು.

ಈ ಪತ್ರವನ್ನು ಓದಿಕೊಂಡ ತಿಮ್ಮರಸನಿಗೆ ತನ್ನ ಸಂಚು ನೆರವೇರಿದುದಕ್ಕಾಗಿ ಸಂತೋಷ ಉಂಟಾಯಿತು. ಅವನು ಕೂಡಲೇ ರಾಜಕುಮಾರನನ್ನು ಕೊಂಡಪಲ್ಲಿಯ ಜನರಿಗೆ ದೂರದಿಂದ ದರ್ಶನ ಕೊಡಲು ವ್ಯವಸ್ಥೆ ಮಾಡಿದ. ತಮ್ಮ ಉದ್ದೇಶ್ಯ ರಾಜಕುಮಾರನಿಗೆ ತಿಳಿಯದಂತೆ ಮುಂಜಾಗ್ರತೆ ವಹಿಸಿ, ಉಪಾಯಾಂತರವಾಗಿ ರಾಜಕುಮಾರನ ಮನವೊಲಿಸಿಕೊಂಡು, ವಾಯುಸಂಚಾರದ ನಿಮಿತ್ತದಲ್ಲಿ ಕೋಟೆಯ ಸಮೀಪವಾಗಿ, ರಾಜಕುಮಾರನನ್ನು ಕುದುರೆಯ ಮೇಲೆ ಕರೆದುಕೊಂಡು ಹೋದನು. ಶತ್ರುಗಳ ಜತೆಯಲ್ಲಿ ಇರುವ ತಮ್ಮ ಯುವರಾಜಕುಮಾರನನ್ನು ನೋಡಿ, ಕೊಂಡಪಲ್ಲಿಯ ಪ್ರಜೆಗಳು, ಸೈನಿಕರು, ದಳಪತಿಗಳೂ, ದುರ್ಗಾಧಿಪತಿಯೂ ಹೊರಗೆ ಜಯಕಾರ ಮಾಡಿ ರಾಜಕುಮಾರನ ಗಮನ ಸೆಳೆದರೂ ಅವರ ಹೃದಯದಲ್ಲಿ ಬೆಂಕಿ ಬಿದ್ದಷ್ಟು ಯಾತನೆಯಾಗಿತ್ತು.

ಅವರೆಲ್ಲರಿಗೆ ರಾಮಚಂದ್ರದೇವನೂ, ಮಹಾರಾಣಿ ಲಕ್ಷ್ಮೀದೇವಿಯೂ ಶತ್ರುಗಳಿಗೆ ಸಿಕ್ಕಿಬಿದ್ದಿರುವುದು ನಿಜವೆಂದೂ, ಅವರ ಪ್ರಾಣಗಳು ಗಂಡಾಂತರದಲ್ಲಿ ಇರುವುದು ಖಂಡಿತವೆಂದೂ ತಿಳಿಯಿತು. ಆ ಬಗ್ಗೆ ಅವರಿಗೆ ಸಂಶಯ ಉಂಟಾಗಲಿಲ್ಲ. ಅವರಿಗೆ ಈಗ ಬೇಕಾಗಿದ್ದುದು—ತಮ್ಮ ಸುಖ, ತಮ್ಮ ಸ್ವಾತಂತ್ರ್ಯಗಳಲ್ಲ. ರಾಜಕುಮಾರರ, ಮಹಾರಾಣಿಯವರ ಕ್ಷೇಮ. ಕೊಂಡಪಲ್ಲಿಯನ್ನು ಶತ್ರುಗಳ ಕೋರಿಕೆಯಂತೆ ಅವರಿಗೆ ಸ್ವಾಧೀನ ಮಾಡಿದರೆ, ತಮ್ಮ ಪ್ರೀತಿಯ ಯುವರಾಜಕುಮಾರರ, ಮಹಾರಾಣಿಯವರ ಪ್ರಾಣಗಳು ಉಳಿಯುವುವು ಎಂದು ಭಾವಿಸಿ, ದುರ್ಗಾಧಿಪತಿಯಾದ ಶಿರಶ್ಚಂದ್ರಮಹಾಪಾತ್ರನನ್ನು ಕೊಂಡಪಲ್ಲಿಯನ್ನು ರಾಯನಿಗೆ ಶರಣಾಗತ ಮಾಡಲು ಒತ್ತಾಯಪಡಿಸಿದರು.

ಜನತೆಯ ಅಭೀಷ್ಟವೇನೆಂದು ತಿಳಿದಮೇಲೆ ಅದನ್ನು ತಿರಸ್ಕರಿಸಿ ನಡೆಯುವ ಧೈರ್ಯ ಶಿರಶ್ಚಂದ್ರಮಹಾಪಾತ್ರನಿಗೆ ಉಂಟಾಗಲಿಲ್ಲ. ಜನತೆಯ ಒತ್ತಾಸೆಯಂತೆ, ಯುವರಾಜಕುಮಾರರ ಹಿತದೃಷ್ಟಿಯಿಂದ ಕೊಂಡಪಲ್ಲಿಯನ್ನು ರಕ್ತಪಾತವಿಲ್ಲದೆ, ರಾಯನಿಗೆ ಒಪ್ಪಿಸಲು ತಾನು ಸಿದ್ಧನಾಗಿರುವುದಾಗಿ ಶಿರಶ್ಚಂದ್ರಮಹಾಪಾತ್ರನು ಕೃಷ್ಣದೇವರಾಯನಿಗೆ ಪತ್ರ ಬರೆದನು.

ಆದರಂತೆ ಕೊಂಡಪಲ್ಲಿಯು ರಾಯನ ವಶವಾಯಿತು. ತಿಮ್ಮರಸನು ಮಾಡಿದ್ದ ಸಂಚು ಸಫಲವಾಯಿತು.

ಈ ಎಲ್ಲ ಸಂಗತಿ—ತನ್ನ ಹೆಸರಿನಲ್ಲಿ ಸುಳ್ಳು ಪತ್ರ ಬರೆಸಿ ಕೊಂಡಪಲ್ಲಿಯ ಜನರನ್ನು ಮೋಸಪಡಿಸಿ, ಅದನ್ನು ಯುದ್ಧವಿಲ್ಲದೆ, ವಶಪಡಿಸಿಕೊಂಡ ಸಂಗತಿ ತಿಳಿದಮೇಲೆ ಯುವರಾಜಕುಮಾರ ರಾಮಚಂದ್ರದೇವನಿಗಾದ ವ್ಯಥೆ ಅಷ್ಟಿಷ್ಟಲ್ಲ. ಅವನಿಗೆ ತಿಮ್ಮರಸನ ತಂತ್ರವನ್ನು ಕೇಳಿ ಮೈಯೆಲ್ಲಾ ಉರಿಯಿತು. ಅವನು ಇಷ್ಟು ಹೇಯಕಾರ್ಯಕ್ಕೆ ಕೈ ಹಾಕುವನೆಂದು ತಿಳಿದಿರಲಿಲ್ಲ. ಒಮ್ಮೆ ಅವನ ತಂತ್ರದ ಜಾಣ್ಮೆಗೆ, ಮುತ್ಸದ್ದಿತನಕ್ಕೆ ವಿಸ್ಮಯ! ಮತ್ತೊಮ್ಮೆ ತನ್ನನ್ನು ನಂಬಿದವರನ್ನೂ ಮೋಸಗೊಳಿಸಿ, ಸ್ವಾರ್ಥ ಸಾಧಿಸಿದನಲ್ಲ ಎನ್ನುವ ದ್ವೇಷ! ರಾಯನು ಯುದ್ಧ ಮಾಡದೆ, ಭೇದದಿಂದ ಕೊಂಡಪಲ್ಲಿಯನ್ನು ವಶಪಡಿಸಿಕೊಂಡುದಕ್ಕಾಗಿ, ರಾಯನಬಗ್ಗೆ ಅವನ ಅಭಿಮಾನ ಕಡಿಮೆಯಾಯಿತು. ರಾಜನೀತಿಯಲ್ಲಿ ಎಲ್ಲ ಬಗೆಯ ತಂತ್ರಗಳಿಗೂ ಅವಕಾಶವಿದೆ ಎಂದು ನಂಬಿದ್ದ ರಾಯನಿಗೆ ತಾನು ಕೊಂಡಪಲ್ಲಿಯನ್ನು ವಶಪಡಿಸಿಕೊಂಡ ಬಗೆ, ಬುದ್ಧಿಚತುರತೆಯ ಪ್ರದರ್ಶನವಾಯಿತೇ ಹೊರತು, ಲಜ್ಜಾಸ್ಪದ ವರ್ತನೆಯಾಗಿ ಕಾಣಲಿಲ್ಲವೆಂತಲೇ ಕೊಂಡವೀಡು, ಒಂದುಹನಿ ರಕ್ತವಿಲ್ಲದೆ ತನಗೆ ವಶವಾದುದಕ್ಕಾಗಿ ತುಂಬಾ ಸಂತೋಷಪಟ್ಟನು.

ಕೊಂಡಪಲ್ಲಿ ರಾಯನ ವಶವಾದಮೇಲೆ, ಅಲ್ಲಿನ ಜನತೆಗೆ ಕೃಷ್ಣದೇವರಾಯನ ಸಂಚು ತಿಳಿದು ತುಂಬಾ ವಿಷಾದವಾಯಿತು. ಈಗ ಕಾರ್ಯ ಮಿಂಚಿಹೋಗಿದ್ದುದರಿಂದ, ಯಾರೇನುಮಾಡಲು ಸಾಧ್ಯವಿರಲಿಲ್ಲ. ದುರ್ಗದ ರಕ್ಷಣೆಗೆ ನಿಯೋಜಿತರಾಗಿದ್ದ ಪ್ರಮುಖ ದಳಪತಿಗಳಾದ ಶಿರಶ್ಚಂದ್ರಮಹಾಪಾತ್ರ, ಬಿಜ್ಜಲಿಖಾನ್ ಇವರುಗಳನ್ನೇ ರಾಯನು ಹಿಡಿದು, ಸೆರೆಮನೆಯ

ಲ್ಲಿಟ್ಟನು. ಇವರಲ್ಲಿ ಬೋದಜಣ್ಣಮಹಾಪಾತ್ರನು ರಾಯನಲ್ಲಿ ಕ್ಷಮಾಪಣೆ ಕೇಳಿದ್ದರಿಂದ ಅವನನ್ನು ಸೆರೆಯಿಂದ ಬಿಡುಗಡೆ ಮಾಡಲಾಯಿತು. ಅವನು ರಾಯನ ಕೋರಿಕೆಯಂತೆ ರಾಯನ ಸೈನ್ಯದಲ್ಲಿ ಗೂಢಚಾರನಾಗಿ ನೇಮಿತ ನಾದನು. ಕ್ಷಮಾಪಣೆ ಕೋರಲು ಒಪ್ಪದಿದ್ದ ಶಿರಶ್ಚಂದ್ರಮಹಾಪಾತ್ರನು ಸೆರೆಯಲ್ಲಿ ಕೊಳೆಯುತ್ತ ಬಿದ್ದನು.

ಆದರಂತೆ, ಯುವರಾಜಕುಮಾರ ರಾಮಚಂದ್ರದೇವನೂ ಕೃಷ್ಣದೇವ ರಾಯನ ಕೃಪಾಭಿಕ್ಷೆಯನ್ನು ತಿರಸ್ಕರಿಸಿದನು. ತನ್ನ ಸೋದರನಾದ ವೀರಭದ್ರದೇವನಂತೆ, ರಾಯನ ಸೇವೆಯಲ್ಲಿರಲು ಒಪ್ಪದೆ ಇದ್ದುದರಿಂದ ಅವನನ್ನೂ, ಮಹಾರಾಣಿ ಲಕ್ಷ್ಮೀದೇವಿಯನ್ನೂ ವಿಜಯನಗರದ ಸೆರೆಮನೆ ಯಲ್ಲಿ ಇಡಿಸಿದನು.

ಕೊಂಡಪಲ್ಲಿಯಾದಮೇಲೆ ಉತ್ಕಲದ ಅನೇಕ ಗಿರಿ ದುರ್ಗಗಳು, ರಾಯನ ಪ್ರಚಂಡ ಸೇನಾಬಲದೆದುರು ನಿಲ್ಲಲಾರದೆ, ಒಂದಾದಮೇಲೊಂದ ರಂತೆ ವಶವಾಗುತ್ತಾ ಬಂದವು.

ಪೇನುಗೊಂಡದ ದುರ್ಗಾಧಿಪತಿ ರಾಮಯಮಂತ್ರಿ ಭಾಸ್ಕರರಾಯನು ರಾಯನಿಗೆ ಶರಣುಬಂದನು. ಭಿಲ್ಲಮಕೊಂಡದ ದುರ್ಗಾಧಿಪತಿ ವೀರ ಭದ್ರಯ್ಯನೂ, ನಾಗಾರ್ಜನಕೊಂಡದ ದುರ್ಗಾಧಿಪತಿ ಅಯ್ಯಲಯ್ಯನೂ, ರಾಯನಸೇನೆಯ ಎದುರು ನಿಲ್ಲಲಾರದೆ, ತಮ್ಮ ದುರ್ಗಗಳನ್ನು ರಾಯನಿಗೆ ಒಪ್ಪಿಸಿದರು. ಇದಾದಮೇಲೆ ಅದ್ದಂಕಿ, ತಂಗಡಿ, ಕೀಲವರಂ ಮೊದಲಾದ ದುರ್ಗಗಳು ರಾಯನ ವಶವಾದವು.

ಅನಂತರ ರಾಯನ ದೃಷ್ಟಿ ಸಿಂಹಾದ್ರಿಯಮೇಲೆ ತಿರುಗಿತು. ಸಿಂಹಾದ್ರಿಯೂ ರಾಯನಿಗೆ ಸುಲಭವಾಗಿ ವಶವಾಯಿತು. ಅಲ್ಲಿ ರಾಯನು ಆರು ತಿಂಗಳುಗಳ ಕಾಲ ವಿಶ್ರಾಂತಿ ಸುಖವನ್ನನುಭವಿಸಿ, ಪೊಟ್ಟನೂರಿನ ಮೇಲೆ ಧಾಳಿ ಇಡಲು ಸೈನ್ಯಸಮೇತ ಹೊರಟನು.

೮

ಪ್ರತಾಪರುದ್ರ ಗಜಪತಿಯು ಬೆಳಗಿನ ತನ್ನ ಸ್ನಾನಾನ್ಹಿಕಗಳನ್ನು ತೀರಿಸಿಕೊಂಡು ತನ್ನ ಪ್ರೀತಿಯ ಗ್ರಂಥವಾದ ಶ್ರೀಮದ್ರಾಮಾಯಣದ ಪಠಣದಲ್ಲಿ ತಲ್ಲೀನನಾಗಿದ್ದನು. ಮೊದಲಿನಿಂದಲೂ ರಾಮಾಯಣವೆಂದರೆ ಗಜಪತಿಗೆ ಅತ್ಯಂತಪ್ರಿಯವಾದ, ಪೂಜ್ಯವಾದ ಪವಿತ್ರಗ್ರಂಥ. ಅವನ ದೃಷ್ಟಿಯಲ್ಲೂ ಶ್ರೀರಾಮಚಂದ್ರನಂತಹ ಆದರ್ಶಪ್ರಭು, ಪತಿ, ಪುತ್ರ, ಸೋದರ ಜಗತ್ತಿನಲ್ಲಿ ಇನ್ನೊಬ್ಬನಿಲ್ಲ. ಅಂತೆಯೇ ಸೀತಾದೇವಿಯೂ ಸ್ತ್ರೀಯರ ಆದರ್ಶಮಣಿ. ಅವರ ಪುಣ್ಯ ಕಥೆಯನ್ನು ಓದಿದಷ್ಟು ಮತ್ತೂ ಓದುವ ಆಸೆಯಾಗುತ್ತಿತ್ತು. ಗಜಪತಿಗೆ ಶ್ರೀ ರಾಮಾಯಣಗ್ರಂಥ ಕೇವಲ ಧರ್ಮಗ್ರಂಥವಾಗಿರದೆ, ಆದು ಅವನ ಕಷ್ಟಸುಖಗಳಲ್ಲಿ ಗೆಳೆಯ ನಂತೆ ಮಾರ್ಗದರ್ಶಿಯಾಗಿತ್ತು. ಅದರ ಒಂದೊಂದು ಘಟನೆಯೂ ಮಾನವನನ್ನು ದೈವತ್ವಕ್ಕೇರಿಸುವ ಆದರ್ಶದ ಹೆದ್ದಾರಿ. ಬೇರೆಬೇರೆ ಭೂಮಿಕೆಗಳಲ್ಲಿ ಬೇರೆಬೇರೆ ಅರ್ಥ ಕೊಡುವ ನಿತ್ಯನೂತನ ಕಾವ್ಯ. ಅದರ ರಸಾಸ್ವಾದನೆ ಮಾಡಿದಷ್ಟು ಮನಸ್ಸಿಗೆ, ಹೃದಯಕ್ಕೆ ಅಪ್ಯಾಯಮಾನ ವಾಗುವುದು. ಅದನ್ನು ಓದಿದಷ್ಟೂ ಹೊಸಹೊಸ ಅರ್ಥ ಹೊಳೆಯುವುದು. ಎಷ್ಟೋಬಾರಿ, ರಾಮಾಯಣದ ದಿವ್ಯ ಗಂಗಾಪ್ರವಾಹದಲ್ಲಿ ತೇಲಿಹೋಗು ತ್ತಿದ್ದ ಮನಸ್ಸು ಅತೀಂದ್ರಿಯ ಜಗತ್ತಿನ ಚೇತನ. ನಿತ್ಯಸತ್ಯಗಳ ದರ್ಶನ ದಿಂದ ಪುಳಕಿತವಾಗುತ್ತಿತ್ತು. ಈ ಕಾವ್ಯಾನಂದದಲ್ಲಿ ತನ್ನನ್ನೇ ಮರೆತ ಗಜಪತಿಯನ್ನು ಎಚ್ಚರಿಸಲು ಬೇರೊಬ್ಬರು ಬೇಕಾಗುತ್ತಿತ್ತು!

ಬಾಲ್ಯದಿಂದಲೂ, ಗಜಪತಿಗೆ ದೈವಬ್ರಾಹ್ಮಣರಲ್ಲೂ, ಗುರುಹಿರಿಯರಲ್ಲೂ ಅತಿಶಯವಾದ ಶ್ರದ್ಧಾಭಕ್ತಿಗಳಿದ್ದವು. ಕಟಕಪುರಿಯ ಶ್ರೀ ಜಗನ್ನಾಥಸ್ವಾಮಿಯೇ ಅವನ ಕುಲದೈವ. ಅವನ ಪಿತಾಮಹನಾದ ಅನಂಗ ಭೀಮದೇವನು ಜಗನ್ನಾಥಸ್ವಾಮಿಗೆ ಸುಂದರವಾದ ಮಂದಿರವನ್ನು ಪೂರಿಕ್ಷೇತ್ರದಲ್ಲಿ ಕಟ್ಟಿಸಿಕೊಟ್ಟಿದ್ದನು. ಅವನ ಭಕ್ತಿಗೆ ಮೆಚ್ಚಿ ಶ್ರೀ ಕೃಷ್ಣಪರಮಾತ್ಮನು ಜಗನ್ನಾಥನ ಅಭಿದಾನದಲ್ಲಿ ಅಲ್ಲಿ ನೆಲಸಿದನೆಂಬ ಪ್ರತೀತಿ ಇತ್ತು.

ಹಿಂದೆ ಅನಂಗ ಭೀಮನು ಉತ್ಕಲವನ್ನು ಧರ್ಮದಿಂದ ಆಳುತ್ತಿದ್ದಾಗ ಅವನ ಕನಸಿನಲ್ಲಿ ಶ್ರೀಕೃಷ್ಣನು ಕಾಣಿಸಿಕೊಂಡು ತಾನು ಸಮುದ್ರದಲ್ಲಿ ತೇಲುತ್ತಾ ಬಿದ್ದಿರುವುದಾಗಿಯೂ, ತನ್ನನ್ನು ದಡಕ್ಕೆ ತಂದು ಒಂದು ದೇವಾಲಯದಲ್ಲಿ ಪ್ರತಿಷ್ಟಿಸಿದರೆ, ಅವನ ಇಷ್ಟಾರ್ಥಸಿದ್ಧಿಯಾಗುವುದೆಂದು ಹೇಳಿದಂತೆ ಆಯಿತು. ಅದರಂತೆ ಅನಂಗ ಭೀಮದೇವನು ಮಾರನೇ ದಿನ ಸಮುದ್ರತೀರಕ್ಕೆ ಬಂದು ನೋಡಿದಾಗ ಮೀನು ಹಿಡಿಯಲು ಹೋಗಿದ್ದ ಬೆಸ್ತರು ಬೀಸಿದ್ದ ಬಲೆಯಲ್ಲಿ ಪುರುಷಪ್ರಮಾಣದ ಎರಡು ಮರದ ದಿಮ್ಮಿಗಳು ಬಂದು ಸೇರಿಕೊಂಡವು. ಅವನ್ನು ಯಾವುದೋ ಪ್ರಾಣಿ ಎಂದು ಭ್ರಮಿಸಿ ದಡಕ್ಕೆ ತಂದು ನೋಡಿದಾಗ, ಅವು ಮರದ ತುಂಡುಗಳಾಗಿದ್ದುವು. ಬೆಸ್ತರು ನಿರಾಶರಾಗಿ, ಆ ತುಂಡುಗಳನ್ನು ದಡದ ಮೇಲೆ ಹಾಕಿ, ಮತ್ತೆ ಬಲೆ ಬೀಸುವ ಪ್ರಯತ್ನದಲ್ಲಿರುವಾಗ, ಅಲ್ಲಿಗೆ ಅನಂಗ ಭೀಮದೇವನು ಬಂದನು. ದಡದಲ್ಲಿ ಬಿದ್ದಿದ್ದ ಮರದ ತುಂಡುಗಳಲ್ಲಿ ಸ್ವಾಮಿಯ ದರ್ಶನವಾಗಿ ಮೈ ರೋಮಾಂಚನಗೊಂಡಿತು. ಅವುಗಳನ್ನು ಭಯಭಕ್ತಿಗಳಿಂದ ಅರಮನೆಗೆ ತೆಗೆದುಕೊಂಡುಹೋಗಿ ಪೂಜಿಸಿದನು.

ಗಜಪತಿಗೆ ತನ್ನ ಕನಸ್ಸಿನಲ್ಲಿ ಕಂಡ ಆ ಸ್ವಾಮಿಗೂ, ಈ ಮರದ ತುಂಡುಗಳಿಗೂ ಯಾವುದೊಂದು ಸಾಮ್ಯ ಕಲ್ಪಿಸಲು ಸಾಧ್ಯವಾಗಲಿಲ್ಲ. ಆಗ ರಾಜಪುರೋಹಿತರು ಬಂದು ಆ ಮರದ ತುಂಡುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಗಜಪತಿಗೆ ಇಂತೆಂದರು.

ಇದನ್ನು ಸಾಮಾನ್ಯ ಮರದ ತುಂಡೆಂದು ತಿಳಿಯಬಾರದು ಪ್ರಭು ! ಇದರಲ್ಲಿ ದಿವ್ಯಮಂಗಳಸ್ವರೂಪನಾದ ಆ ಸ್ವಾಮಿಯ ಚೇತನ ಜಡವಾಗಿ ನಿದ್ರಿಸುತ್ತದೆ. ಆ ದಿವ್ಯ ಚೇತನವನ್ನು ಪೂಜೆ, ಹವನ, ಹೋಮಗಳಿಂದ

ಎಚ್ಚರಗೊಳಿಸಿದರೆ, ಸ್ವಾಮಿಯು ಸುಪ್ರೀತನಾಗಿ ವಿಗ್ರಹವಾಗಿ ಮೈದೋರು ವನು. ತಮ್ಮ ಭಕ್ತಿಯನ್ನು ಪರೀಕ್ಷಿಸಲು ಸ್ವಾಮಿಯು ಈ ಆಟ ಹೂಡಿ ದ್ದಾನೆ. ತಾವು ಧೃತಿಗೆಡಬಾರದು. ನಿಷ್ಠೆಯಿಂದ ತಾವು ಸ್ವಾಮಿಯನ್ನು ಒಂದು ತಿಂಗಳ ಕಾಲ ಸೇವಿಸಿದರೆ, ಸ್ವಾಮಿಯು ನಿಮಗೆ ಪ್ರತ್ಯಕ್ಷನಾಗು ತ್ತಾನೆ'' ಎಂದು ಹೇಳಿ ಅಂದಿನಿಂದಲೇ ಆ ದಿವ್ಯ ಚೇತನವನ್ನು ಎಚ್ಚರ ಗೊಳಿಸುವ ಕಾರ್ಯಕ್ಕೆ ಆರಂಭಿಸಿದರು.

ಆ ಮರದ ತುಂಡುಗಳನ್ನು ಒಂದು ಕೋಣೆಯಲ್ಲಿ ಇಟ್ಟು ಪೂಜೆ ಮಾಡಿ, ಅನಂತರ ಕೋಣೆಯ ಬಾಗಿಲಿಗೆ ಭದ್ರವಾದ ಬೀಗ ಹಾಕಿ ಆ ಕೋಣೆಯ ಬಾಗಿಲನ್ನು ಅವಧಿಗೆ ಮುಂಚೆ ಯಾರೂ ತೆರೆಯಬಾರದೆಂದು ಕಟ್ಟಪ್ಪಣೆ ಮಾಡಲಾಯಿತು. ಆ ಕೋಣೆಯ ಹೊರವಲಯದಲ್ಲಿ ವಿಶಾಲ ವಾದ ಯಜ್ಞವೇದಿಕೆಯು ರಚಿಸಲ್ಪಟ್ಟು, ಅನೇಕ ವಿಪ್ರೋತ್ತಮರು ತಿಂಗಳವರೆಗೆ ಸಂತತವಾದ ಯಜ್ಞಯಾಗಗಳಲ್ಲೂ, ದಾನಧರ್ಮಗಳಲ್ಲೂ ಭಾಗವಹಿಸಿದರು. ಅನಂಗ ಭೀಮದೇವನು ಯಜ್ಞದೀಕ್ಷೆಯನ್ನು ಹಿಡಿದು ಒಂದು ತಿಂಗಳವರೆಗೆ, ಹವಿಸ್ಸನ್ನು ಅಗ್ನಿದೇವನಿಗೆ ಅರ್ಪಿಸಿ, ದೇವತೆಗಳನ್ನು ಪ್ರೀತಿಪಡಿಸಿ, ದಾನಧರ್ಮಗಳಿಂದಲೂ, ಭೂರಿ ಭೋಜನಗಳಿಂದಲೂ ಎಲ್ಲ ಜನರನ್ನು ಸಂತೋಷಗೊಳಿಸಿದನು. ನಾಳೆಗೆ ಯಜ್ಞ ಪರಿಸಮಾಪ್ತಿಯಾ ಗುತ್ತದೆ ಎನ್ನಬೇಕಾದರೆ. ಅಲ್ಲಿ ಕತ್ತಲಕೋಣೆಯಲ್ಲಿ ಮೈತುಂಬಿ ಬರುತ್ತಿದ್ದ ಸ್ವಾಮಿಯ ದಿವ್ಯಮಂಗಳ ರೂಪವನ್ನು ನೆನೆದು ಗಜಪತಿಯ ಮೈ ಪುಳಕಿತ ವಾಯಿತು. ಈ ವೇಳೆಗಾಗಲೇ ಮರದ ತುಂಡುಗಳು ಮೊಳೆತು ವಿಗ್ರಹ ಗಳಾಗಿ ಮಾರ್ಪಟ್ಟಿರಬೇಕು—ಎಂದು ಕುತೂಹಲವಾಯಿತು. ಈ ಕುತೂ ಹಲ ಬೃಹದಾಕಾರವಾಗಿ ಬೆಳೆದು ಅನಂಗದೇವನನ್ನು ಒಂದೇಸಮನೆ ಕಾಡಿತು. ಅದನ್ನು ತೃಪ್ತಿಪಡಿಸದ ಹೊರತು ಮನಸ್ಸಿಗೆ ವ್ಯವಧಾನವಿಲ್ಲ ವಾಯಿತು. ಅವನು ಮರದ ತುಂಡುಗಳನ್ನು ಇರಿಸಿದ್ದ ಕೋಣೆಯ ಬಾಗಿ ಲನ್ನು ತೆರೆದು ಅವಧಿ ಪೂರೈಸುವ ಮೊದಲೇ ಸ್ವಾಮಿಯ ದರ್ಶನಾಕಾಂಕ್ಷಿ ಯಾಗಿ ಬಂದು ನೋಡುತ್ತಾನೆ—ಕೇವಲ ಮರದ ತುಂಡಿನಂತಿದ್ದ ಆ ದಿಮ್ಮಿ ಗಳಲ್ಲಿ ಜೀವವಾಹಿನಿ ಹರಿದು ವಿಗ್ರಹವಾಗಿ ಮಾರ್ಪಟ್ಟಿತ್ತು! ಹಸನ್ಮುಖಿ ಯಾದ ಸ್ವಾಮಿಯ ಮುದ್ದಾದ ಮುಖ—ಕಣ್ಣು, ಕಿವಿ, ಮೂಗು, ಬಾಯಿ

ಗಳೆಲ್ಲ ಕೆತ್ತಿ ಮಾಡಿದ ವಿಗ್ರಹದಂತೆ ಸುಸ್ಪಷ್ಟವಾಗಿ ಮೂಡಿತ್ತು. ಉಳಿದ ಭಾಗಗಳ ರಚನೆ ಇನ್ನೂ ಸಂಪೂರ್ಣವಾಗಿರಲಿಲ್ಲ, ಈ ಒಂದುರಾತ್ರಿ ಕಳೆದಿದ್ದರೆ, ಸ್ವಾಮಿಯು ವಿಗ್ರಹರೂಪದಲ್ಲಿ ಕಂಗೊಳಿಸುತ್ತಿದ್ದನು. ಆದರೆ ಅವಧಿ ಮುಗಿಯುವ ಮುನ್ನವೇ ಅನಂಗ ಭೀಮದೇವನು ಸ್ವಾಮಿಯ ದರ್ಶನವನ್ನು ಪಡೆದುದರಿಂದ ಆದರ ಬೆಳವಣಿಗೆ ಅಷ್ಟಕ್ಕೆ ನಿಂತು ಹೋಗಿತ್ತು.

ಈ ವಾರ್ತೆಯನ್ನು ಕೇಳಿ, ಗಾಬರಿಗೊಂಡು ಬಂದ ರಾಜಪುರೋಹಿತರು ಅಪೂರ್ಣಗೊಂಡಿದ್ದ ಸ್ವಾಮಿಯ ವಿಗ್ರಹವನ್ನು ನೋಡಿ ತುಂಬಾ ವಿಷಾದ ಉಂಟಾಯಿತು. ಅವರಿಗೆ ಗಜಪತಿಯು ಸ್ವಾಮಿಯ ಚೇತನ ಪೂರ್ಣ ವಿರಸವಾಗಿ, ವಿಗ್ರಹವಾಗಿ ರೂಪ ಪಡೆಯುವ ಮೊದಲೇ ಆದನ್ನ ನೋಡಲು ಬಂದುದು ನವಮಾಸ ತುಂಬಿ, ಶಿಶು ಜನನವಾಗುವ ಮೊದಲೇ ಶಿಶುವನ್ನು ನೋಡಲು ತಾಯಿಯ ಗರ್ಭದಿಂದ ಹೊರಗೆ ತೆಗೆದಂತೆ ಭಾಸವಾಯಿತು. ಅವರಿಗೆ ಅನಂಗ ಭೀಮದೇವನು ಭ್ರೂಣಹತ್ಯಾ ದೋಷ ಮಾಡಿದಂತೆ ಅನಿಸಿತು. ಈ ಘೋರ ಪಾಪದ ಪ್ರಾಯಶ್ಚಿತ್ತಾರ್ಥವಾಗಿ ಅನಂಗ ಭೀಮದೇವನು ತನ್ನ ಒಂದು ಅಂಗವನ್ನು ಬಲಿಗೊಡಬೇಕಾಗಿತ್ತು. ಇಲ್ಲದಿದ್ದರೆ ದೇಶಕ್ಕೆ ಅನಿಷ್ಟ ಸಂಭವಿಸಿ, ಕ್ಷಾಮಡಾಮರಗಳಿಂದ ಕಂಗೆಡುವ ಪರಿಸ್ಥಿತಿ ಒದಗುತಿತ್ತು. ತಾನುಮಾಡಿದ ಅಪಚಾರದಿಂದ ಜನತೆಯು ಶಿಕ್ಷೆಗೀಡಾಗುವುದನ್ನು ನೋಡಲಿಚ್ಛಿಸದೆ, ಅನಂಗ ಭೀಮದೇವನು ತನ್ನ ದೇಹದ ಒಂದು ಅಂಗವನ್ನೇ ಬಲಿಕೊಡಲು ನಿಶ್ಚಯಿಸಿದನು. ಆಗ ರಾಜ ಪುರೋಹಿತರು ಪ್ರಜಾಕೋಟಿಯಬಗ್ಯೆ ಗಜಪತಿಗೆ ಇರುವ ಆದರ ಅಭಿಮಾನಗಳನ್ನು ಕಂಡು ಹರ್ಷಗೊಂಡು, ಒಂದು ಸಲಹೆಯನ್ನು ಮಾಡಿದರು. ಅವರ ಸಲಹೆಯಂತೆ, ಅನಂಗ ಭೀಮದೇವನು ತನ್ನ ಬಲಗಾಲಿನಲ್ಲಿದ್ದ ಆರನೆಯ ಬೆರಳನ್ನು ಕತ್ತರಿಸಿ ಸ್ವಾಮಿಗೆ ಅರ್ಪಿಸಿದನು. ಅಂದಿನಿಂದ ಅವನಿಗೆ ಅನಂಗ ಭೀಮದೇವನೆಂದು ಹೆಸರಾಯಿತು.

ಸ್ವಾಮಿಯನ್ನು ಆಗಿದ್ದ ಸ್ಥಿತಿಯಲ್ಲಿಯೇ ಪ್ರತಿಷ್ಠಾಪಿಸಲಾಯಿತು. ಅನಂಗ ಭೀಮದೇವನ ಭಕ್ತಿಗೆ ಮೆಚ್ಚಿ ಅನುಗ್ರಹಿಸಲು ಬಂದಿದ್ದ ಸ್ವಾಮಿಯು ತನ್ನ ಸೋದರನಾದ ಬಲದೇವನೊಂದಿಗೆ ಕಟಕಪುರಿಯಲ್ಲಿ ಜಗನ್ನಾಥನೆಂಬ

ಅಭಿದಾನದಲ್ಲಿ ಚಿರನಾಗಿ ನೆಲಸಿದನು. ಜಗನ್ನಾಥನ ಕೃಪೆ ದೊರೆತಮೇಲೆ ಅನಂಗದೇವನ ರಾಜ್ಯ ವಿಸ್ತರಿಸಿತು. ಕೀರ್ತಿ ದಶದಿಕ್ಕುಗಳಿಗೂ ಹರಡಿತು.

ತನ್ನ ಪೂರ್ವೀಕರ ದೈವಭಕ್ತಿಯನ್ನು ಬಾಲ್ಯದಿಂದಲೂ ಕೇಳುತ್ತಿದ್ದ ಪ್ರತಾಪರುದ್ರ ಗಜಪತಿಗೆ ಬಾಲ್ಯದಲ್ಲಿಯೇ ಜಗನ್ನಾಥನ ಬಗೆಗೆ ಅನನ್ಯವಾದ ಭಕ್ತಿಯುಂಟಾಗಿತ್ತು. ಜಗನ್ನಾಥನು ಅವನ ಕಣ್ಣಿಗೆ ವಿಗ್ರಹವಾಗಿ ತೋರದೆ, ಸಜೀವಮೂರ್ತಿಯಾಗೇ ತೋರುತ್ತಿದ್ದನು. ಒಮ್ಮೊಮ್ಮೆ ಭಕ್ತಿ ಪರವಶನಾಗಿ ಗಜಪತಿಯು ಪ್ರಾರ್ಥಿಸುತ್ತಾ ಕುಳಿತನೆಂದರೆ ಎಂತಹ ನಾಸ್ತಿಕರಿಗೂ ಭಕ್ತಿಯ ಆವೇಶ ಉಂಟಾಗುತ್ತಿತ್ತು. ಗಜಪತಿಯ ಭಕ್ತಿ ಕೇವಲ ಡಂಭಾಚಾರವಾಗದೆ ಹೃದಯಾಂತರಾಳದ ನಿಜವಾದ ಭಕ್ತಿಯಾಗಿತ್ತು. ಜಗನ್ನಾಥನಲ್ಲಿ ಅವನಿಗಿದ್ದ ಭಕ್ತಿಯ ಹೆಚ್ಚಳವನ್ನು ತೋರಿಸಲು ಈ ನಿದರ್ಶನವೇ ಸಾಕು.

ಪ್ರತಾಪರುದ್ರ ಗಜಪತಿಯು ಉತ್ಕಲ ಸಿಂಹಾಸನವನ್ನು ಹತ್ತುವ ಕಾಲಕ್ಕೆ ರಾಜ್ಯವು ನಿಷ್ಕಂಟಕವಾಗಿರಲಿಲ್ಲ. ದೇಶದ ಒಳಗೂ, ಹೊರಗೂ ಶತ್ರುಗಳು ಸ್ವಾರ್ಥಸಾಧನೆಗಾಗಿ ಹೊಂಚುಹಾಕಿ ಕಾಯುತ್ತಿದ್ದರು. ಹೊರಗಿನ ಶತ್ರು ಭಯಕ್ಕಿಂತಲೂ ಒಳಗಿನ ಶತ್ರು ಭಯ ಉತ್ಕಲ ಸಿಂಹಾಸನಕ್ಕೆ ಅಪಾಯಕಾರಿಯಾಗಿತ್ತು. ಪ್ರತಾಪರುದ್ರ ಗಜಪತಿಯ ಜ್ಞಾತಿಗಳಲ್ಲಿ ಅನೇಕರು ಗಜಪತಿಯೊಂದಿಗೆ ಸವಿಮಾತುಗಳನ್ನಾಡುತ್ತಾ ಒಳಗೆ, ಅಂತರಂಗದಲ್ಲಿ ಮತ್ಸರದಿಂದ ಕಲುಷಿತರಾಗಿದ್ದರು. ಈ ಹಿತಶತ್ರುಗಳ ದುರಾಲೋಚನೆಯನ್ನು ಸೂಕ್ಷ್ಮವಾಗಿ ಅರಿತಿದ್ದ ಗಜಪತಿಯು ಆದಷ್ಟು ದೂರ ಅವರಿಂದ ಇರಲೆತ್ನಿಸಿದ್ದನು. ಇಷ್ಟಾದರೂ ಗಜಪತಿಯ ಪ್ರಾಣಕ್ಕೆ ಒಮ್ಮೆ ಗಂಡಾಂತರ ಬಂದಿತ್ತು—ಅವನ ಒಬ್ಬ ಜ್ಞಾತಿಯಿಂದ. ಅದೂ ಗಜಪತಿಯು ನಿರೀಕ್ಷಿಸದ ರೀತಿಯಲ್ಲಿ.

ಪ್ರತಾಪರುದ್ರ ಗಜಪತಿಗೆ ಜಗನ್ನಾಥಸ್ವಾಮಿಯಲ್ಲಿ ಅಸದೃಶವಾದ ಭಕ್ತಿ ಇರುವುದು ಲೋಕಕ್ಕೇ ವಿದಿತವಾಗಿತ್ತು. ಗಜಪತಿಯು ಉಷಃಕಾಲಕ್ಕೇ ಎದ್ದು, ಸ್ನಾನ ಸಂಧ್ಯಾವಂದನೆಗಳನ್ನು ತೀರಿಸಿಕೊಂಡು ದೇವಾಲಯಕ್ಕೆ ಪೂಜಾ ಸಾಮಗ್ರಿಗಳೊಂದಿಗೆ ಬರುತ್ತಿದ್ದನು. ಆ ವೇಳೆಗೆ ಪೂಜಾರಿಯು ಸ್ವಾಮಿಗೆ ಅಭಿಷೇಕ ಮಾಡಿ, ಹೂಗಳಿಂದ ಅಲಂಕರಿಸಿ,

ಗಜಪತಿಗಾಗಿ ಕಾಯುತ್ತಿದ್ದನು. ಗಜಪತಿಯು ಬಂದೊಡನೆಯೇ, ತಾವು ತಂದಿದ್ದ ಹೂ, ಗಂಧಗಳಿಂದ ಸ್ವಾಮಿಯನ್ನು ಅರ್ಚಿಸಿ ತೀರ್ಥ ಪ್ರಸಾದ ಗಳನ್ನು ಪಡೆದು, ಅರಮನೆಗೆ ಹಿಂದಿರುಗಿ ಬಂದು ರಾಮಾಯಣ ಪಠಣ ಮಾಡಿ ಅನಂತರ ತಮ್ಮ ನಿತ್ಯಕರ್ಮಗಳಿಗೆ ಗಮನಕೊಡುತ್ತಿದ್ದನು. ಇದು ಮೊದಲಿನಿಂದಲೂ ಬಂದಿದ್ದ ಪರಿಪಾಠ. ಎಂತಹ ಪ್ರಸಂಗದಲ್ಲೇ ಆಗಲಿ, ಕಟಕಪುರಿಯಲ್ಲಿ ಇದ್ದಾಗ, ಸ್ವಾಮಿಯ ತೀರ್ಥ ಪ್ರಸಾದಗಳಿಲ್ಲದೆ, ಬೇರೆ ಯಾವ ಕೆಲಸಕ್ಕೂ ಆರಂಭಿಸುತ್ತಿರಲಿಲ್ಲ. ದೇವತಾರ್ಚನೆಯಾದ ನಂತರವೇ ಉಳಿದ ಲೋಕ ವ್ಯವಹಾರ.

ಗಜಪತಿಯ ಈ ನಿಷ್ಠೆಯನ್ನು ದುರುಪಯೋಗಪಡಿಸಿಕೊಂಡು, ಅವರ ಜ್ಞಾತಿಯೊಬ್ಬನು ಅವರ ಪ್ರಾಣಕ್ಕೆ ಗಂಡಾಂತರ ತರಲು ನಿಶ್ಚಯಿ ಸಿದನು.

ಅವನು ಜಗನ್ನಾಥನ ಪೂಜೆಗೆಂದು ನಿಯಮಿತನಾಗಿದ್ದ ಪೂಜಾರಿಗೆ ಹಣದ ಆಸೆಯೊಡ್ಡಿ ಅವನನ್ನು ಪ್ರಲೋಭಕ್ಕೆ ಒಳಪಡಿಸಿಕೊಂಡನು. ತೀರ್ಥ ದಲ್ಲಿ ವಿಷ ಬೆರಸಿ, ಅದರ ಸುಳಿವು ಗಜಪತಿಗೆ ತಿಳಿಯದಂತೆ, ಅವನಿಗೆ ಕೊಟ್ಟು ಆ ಮೂಲಕ ತನ್ನ ಮನದ ಸಂಕಲ್ಪವನ್ನು ಈಡೇರಿಸಿಕೊಳ್ಳಲು ಆಶಿಸಿದನು ಮೊದಲು ಮೊದಲು ಪೂಜಾರಿಯು ಈ ಹೇಯಕಾರ್ಯಕ್ಕೆ ಸ್ವಾಮಿದ್ರೋಹಕ್ಕೆ ಒಪ್ಪಲಿಲ್ಲ. ಆದರೆ ಅವನನ್ನು ಹೆದರಿಸಿ, ಬೆದರಿಸಿ, ಒಡವೆವಸ್ತುಗಳ ಆಸೆಯಿಂದ ಅವನನ್ನು ಈ ಕೃತ್ಯಕ್ಕೆ ಪ್ರೇರೇಪಿಸಿದನು.

ಅಂದು ಗಜಪತಿಯು ಎಂದಿಗಿಂತಲೂ ಹೊತ್ತುಮೀರಿ ಎದ್ದುದರಿಂದ ದೇವಾಲಯಕ್ಕೆ ಬರುವುದು ಕೊಂಚಹೊತ್ತು ಮೀರಿತ್ತು. ಪೂಜಾರಿಯು, ಅಭಿಷೇಕ, ಅರ್ಚನೆಗಳನ್ನೆಲ್ಲಾ ಪೂರೈಸಿ, ಮಂಗಳಾರತಿಗಾಗಿ ಗಜಪತಿಯ ಬರವನ್ನೇ ಕಾಯುತ್ತಿದ್ದನು. ಎಂದಿನಂತೆಯೇ ಗಜಪತಿಯು ದೇವಾಲಯಕ್ಕೆ ಬಂದು, ಸ್ವಾಮಿಗೆ ದೀರ್ಘದಂಡ ನಮಸ್ಕಾರ ಹಾಕಿ, ಹೂ, ಹಣ್ಣು, ಗಂಧ ಗಳಿಂದ ಅರ್ಚಿಸಿ, ಮಹಾಮಂಗಳಾರತಿಗಾಗಿ, ತದೇಕಚಿತ್ತನಾಗಿ ಸ್ವಾಮಿ ಯನ್ನು ಧ್ಯಾನಿಸುತ್ತಾ ನಿಂತಿದ್ದನು. ಅವನ ಭವ್ಯವಾದ ನಿಲುವು, ನಿಷ್ಕಳಂಕ ವಾದ ಮುಖವನ್ನು ಕಂಡು ಪೂಜಾರಿಗೆ ಹೆದರಿಕೆಯಾಯಿತು. ಆದರೂ ಧೈರ್ಯಗೆಡದೆ, ಮಹಾಮಂಗಳಾರತಿಯನ್ನು ಮಾಡಿ ಗಜಪತಿಗೆ ತೀರ್ಥವನ್ನು

ಕೊಡಲು ನಿಂತನು. ಇನ್ನೇನು ತೀರ್ಥವನ್ನು ಚಿನ್ನದ ಸಂಪುಟದಿಂದ ತೆಗೆದು ಗಜಪತಿಯ ಕೈಗೆ ಹಾಕಬೇಕೆನ್ನುವಷ್ಟರಲ್ಲಿ, ಉದ್ಧರಣೆಯು ಕೈ ಜಾರಿ ನೆಲಕ್ಕೆ ಬಿದ್ದುಹೋಯಿತು. ಎಂದೂ ಹೀಗೆ ಆದುದಿಲ್ಲ. ಗಜಪತಿಗೆ ಅಚ್ಚರಿಯಾಯಿತು. ಅವನು ಪೂಜಾರಿಯ ಮುಖವನ್ನು ನೋಡಿದನು. ಪೂಜಾರಿಯ ಮುಖ ಬೆವರುತ್ತಿತ್ತು. ಗಜಪತಿಯ ದೃಷ್ಟಿಯನ್ನು ಎದುರಿಸ ಲಾರದೆ, ಅವನು ತಲೆತಗ್ಗಿಸಿ, ಮತ್ತೆ ತೀರ್ಥೋದಕ ಕೊಡಲು ಪ್ರಯತ್ನಿ ಸಿದನು. ಮತ್ತೊಮ್ಮೆಯೂ, ತೀರ್ಥ ಗಜಪತಿಯ ಹಸ್ತಕ್ಕೆ ಬೀಳುವ ಬದಲು ನೆಲಕ್ಕೆ ಚಲ್ಲಿತು.—ನಡುಗುತ್ತಿದ್ದ ಕೈಯ್ಯಲ್ಲಿ ಸರಿಯಾಗಿ ತೀರ್ಥ ಕೊಡಲು ಸಾಧ್ಯವಾಗದೆ, ಇದರಿಂದ ಗಜಪತಿಗೆ ತುಂಬಾ ವಿಸ್ಮಯ ವುಂಟಾಯಿತು. ಆದರೂ ಅವನು ತುಟಿ ಎರಡು ಮಾಡದೆ, ಪೂಜಾರಿಯ ಮುಖವನ್ನು ಆತಂಕದೃಷ್ಟಿಯಲ್ಲಿ ನೋಡುತ್ತಾ, ತೀರ್ಥಕ್ಕಾಗಿ ಕೈ ಚಾಚಿಯೇ ಇದ್ದ.

ಪೂಜಾರಿ ಮೂರನೆಯಬಾರಿ ತೀರ್ಥ ಕೊಡಲು ಪ್ರಯತ್ನಿಸಿ ಮುಂದೆ ಬಂದನು. ಅವನ ಮುಖವನ್ನೇ ದಿಟ್ಟಿಸುತ್ತಿದ್ದ ಗಜಪತಿಯ ಕಣ್ಣುಗಳ ತೀಕ್ಷ್ಣ ನೋಟ ನೋಡಿ, ಪೂಜಾರಿಗೆ ಮುಖ ಬಿಳಿಚಿಕೊಂಡಿತು. ಮೈ ಎಲ್ಲಾ ಬೆವರಿತು. ತನ್ನ ಗುಟ್ಟು ತಿಳಿದರೆ, ತನ್ನ ಗತಿ ಪೂರೈಸಿದಂತೆಯೇ ಸರಿ ಎಂದು ಹೆದರಿದ. ತನ್ನನ್ನು ನಂಬಿದ ಹೆಂಡತಿ ಮಕ್ಕಳ ಗತಿಯನ್ನು ಆಲೋಚಿಸಿದ. ತನ್ನನ್ನು ಪುತ್ರವಾತ್ಸಲ್ಯದಿಂದ ನೋಡಿಕೊಂಡು, ಯಾವು ದಕ್ಕೂ ಕೊರತೆ ಇಲ್ಲದಂತೆ ಇರಿಸಿದ್ದ ಗಜಪತಿಯುಂತಹ ನಿಷ್ಕಪಟ, ನಿರಾ ಡಂಬರ, ಪರಮಭಾಗವತ ಶಿರೋಮಣಿಯನ್ನು ನಾನು ವಿಷ ಬೆರಸಿದ್ದ ತೀರ್ಥವನ್ನು ಕೊಟ್ಟು ಕೊಲ್ಲಬೇಕೆ? ಈ ಪಾಪಕೆಲಸ ಮಾಡಿ ಗಜಪತಿ ಯನ್ನು ಕೊಲ್ಲುವುದಕ್ಕಿಂತಲೂ, ತನ್ನ ತಪ್ಪನ್ನು ಒಪ್ಪಿಕೊಂಡು, ಬರುವ ಶಿಕ್ಷೆಯನ್ನು ಅನುಭವಿಸುವುದೇ ಮೇಲೆನಿಸಿತು. ಅವನು "ಪ್ರಭೂ!" ಎಂದು ಗಟ್ಟಿಯಾಗಿ ಹೇಳಿ, ಕಣ್ಣಿನಲ್ಲಿ ಧಾರಾಕಾರವಾಗಿ ನೀರು ಸುರಿಸುತ್ತಾ ನಿಂತನು.

ಅವನ ವರ್ತನೆ ಗಜಪತಿಯನ್ನು ಬೆರಗುಗೊಳಿಸಿತು. ಆರಂಭದಿಂದಲೂ ಪೂಜಾರಿಯು ಒಂದುಬಗೆಯಾಗಿದ್ದಾನೆ. ತನನ್ನು ಕಂಡರೆ ಏಕೋ ಹೆದರುತ್ತಿ

ದ್ದಾನೆ. ತೀರ್ಥ ಕೊಡಲು ಕೈ ನಡುಗುತ್ತಿದೆ. ಎರಡುಬಾರಿ ತೀರ್ಥ ಕೊಡಲೆತ್ನಿಸಿ ವಿಫಲನಾಗಿದ್ದಾನೆ! ಈಗ ತೀರ್ಥ ಕೊಡುವ ಬದಲು ಅಳುತ್ತಾ ನಿಂತಿದ್ದಾನೆ! ಇದರಲ್ಲಿ ಏನೋ ವಿಶೇಷವಿದೆ ಎಂದು ಭಾವಿಸಿ, ಕುತೂಹಲಪೂರಿತ ನೋಟದಲ್ಲಿ ಗಜಪತಿಯು ಪೂಜಾರಿಯನ್ನು ನೋಡಿದನು.

"ಪ್ರಭು! ನನ್ನ ತಪ್ಪನ್ನು ಕ್ಷಮಿಸಬೇಕು. ನಾನು ಪರಮಪಾಪಿ, ಕೃತಘ್ನ! ಪರಮನೀಚ! ತಮ್ಮ ಋಣ ತಿಂದೂ, ತಮಗೆ ಕೇಡು ಬಗೆದಿರುವ ಮಹಾದ್ರೋಹಿ! ನನ್ನ ತಪ್ಪನ್ನು ತಾವು ಕ್ಷಮಿಸಬೇಕು—ದುರುಳರ ಮಾತು ಕೇಳಿಕೊಂಡು ತೀರ್ಥದಲ್ಲಿ ವಿಷ ಬೆರಸಿ ಪರಮಭಾಗವತರಾದ ತಮಗೆ ಕೊಡಲೆತ್ನಿಸಿದೆ. ವಿಷ ಬೆರತಿರುವ ಈ ತೀರ್ಥವನ್ನು ತಮಗೆ ಕೊಡಲಾರೆ! ದಯವಿಟ್ಟು........ದಯವಿಟ್ಟು ನನ್ನ ಮಹಾಪರಾಧವನ್ನು ಕ್ಷಮಿಸಿ ಉದ್ಧಾರ ಮಾಡಬೇಕು" ಎಂದು ಪ್ರಭುಗಳ ಕಾಲಿಗೆ ಬಿದ್ದನು. ಅವನನ್ನು ಸಂತೈಸಿ, ಸಮಾಧಾನಪಡಿಸುತ್ತಾ ಗಜಪತಿಯು ನಿರ್ವಿಕಾರನಾಗಿ ಹೇಳಿದನು.

"ಸ್ವಾಮಿ, ತಾವು ಈ ಬಗ್ಗೆ ಹೆಚ್ಚು ಚಿಂತಿಸಬಾರದು. ಯಾವುದೋ ದುರ್ಗಳಿಗೆಯಲ್ಲಿ ಪ್ರಲೋಭಕ್ಕೆ ಸಿಲುಕಿ, ತಾವು ಈ ಅಕೃತ್ಯಕ್ಕೆ ಮನಸ್ಸು ಕೊಟ್ಟಿರಿ. ಆದರೆ ಸ್ವಭಾವತಃ ಸಾತ್ವಿಕರಾದ ತಮ್ಮಿಂದ ಈ ದುಷ್ಕಾರ್ಯ ನಡೆಯಬೇಕಾಯಿತು. ಇದೇ ಜಗನ್ನಾಥನಲೀಲೆ ತಾವು ಈ ಬಗ್ಗೆ ಹೆಚ್ಚು ಕಳವಳಪಡಬಾರದು. ತಮ್ಮ ಪಶ್ಚಾತ್ತಾಪವೇ ತಮ್ಮ ಎಲ್ಲಾ ಪಾಪಗಳನ್ನೂ ಸಹಿಸಿದೆ. ನೀವು ಜಗನ್ನಾಥನನ್ನು ಮೊರೆಹೋಗಿ. ಅವನೇ ಜಗನ್ನಾಥ! ನಿಜವಾದ ಜಗದ್ರಕ್ಷಕ. ಮನುಜಕೋಟಿಯ ಅನಂತ ಪಾಪಗಳನ್ನು ಪರಿಹರಿಸಿ, ಉದ್ಧರಿಸಬಲ್ಲ ಏಕೈಕ ಪ್ರಭು!" ಎಂದು ಸ್ವಾಮಿಗೆ ಕೈಜೋಡಿಸಿ, ನಮಸ್ಕರಿಸಿ, ಧ್ಯಾನಮಗ್ನನಾದನು. ಅನಂತರ ಕಣ್ಣುತೆರೆದು,

"ಸ್ವಾಮಿ, ತಾವು ತೀರ್ಥಪ್ರಸಾದವನ್ನು ಕೊಡೋಣವಾಗಲಿ!" ಎಂದು ಪ್ರಾರ್ಥಿಸಿದ.

"ಪ್ರಭು! ಈ ತೀರ್ಥದಲ್ಲಿ ವಿಷ ಬೆರತಿದೆ ಅದನ್ನು ಹೇಗೆ ಕೊಡಲಿ?"

"ನೀವು ಚಿಂತಿಸುವ ಕಾರಣವಿಲ್ಲ! ಜಗನ್ನಾಥನನ್ನು ಧ್ಯಾನಿಸಿ ತೀರ್ಥವನ್ನು ಕೊಡಿ. ಅವನ ಕೃಪೆಯಿಂದ ಹಾಲಾಹಲವೂ ಅಮೃತವಾಗಬಲ್ಲದು."

"ಪ್ರಭು! ನನ್ನಿಂದ ಈ ಕಾರ್ಯ ಮಾತ್ರ ಸಾಧ್ಯವಿಲ್ಲ!"

"ಏಕೆ? ನೀವು ಅಧೈರ್ಯಪಡುವ ಕಾರಣವಿಲ್ಲ. ಇದು ನಮ್ಮಿಬ್ಬರ ಭಕ್ತಿಯನ್ನು ಪರೀಕ್ಷಿಸಲು ಜಗನ್ನಾಥಸ್ವಾಮಿಯು ಒಡ್ಡಿರುವ ಅಗ್ನಿಪರೀಕ್ಷೆ! ಇದರಲ್ಲಿ ನಾವು ಕೃತಕೃತ್ಯವಾದರೆ ಸ್ವಾಮಿಯ ದಿವ್ಯಾನುಗ್ರಹಕ್ಕೆ ಪಾತ್ರರಾಗುತ್ತೇವೆ. ಈ ಪರೀಕ್ಷೆಗೆ ಹಿಂಜರಿದರೆ, ನಮ್ಮ ಭಕ್ತಿಯ ಬರಡುತನವನ್ನು ನಾವೇ ಪ್ರದರ್ಶಿಸಿದಂತೆ ಆಗುತ್ತದೆ. ತಾವು ಸ್ವಾಮಿಯನ್ನು ಅನನ್ಯ ರೀತಿಯಿಂದ ಪ್ರಾರ್ಥಿಸಿ, ನನಗೆ ತೀರ್ಥವನ್ನು ಕೊಡಿ!'' ಎಂದು ಹೇಳಿ, ಪೂಜಾರಿಯಿಂದ ಬಲವಂತವಾಗಿ ತೀರ್ಥವನ್ನು ಪಡೆದು ಹಿಂದುಮುಂದೆ ನೋಡದೆ, ಜಗನ್ನಾಥನ ದಿವ್ಯನಾಮ ಸಂಕೀರ್ತನ ಮಾಡುತ್ತಾ ಕಣ್ಣು ಮುಚ್ಚಿ ಕುಡಿದುಬಿಟ್ಟನು. ಅದೇನು ಆಶ್ಚರ್ಯ! ಗಜಪತಿಯು ಕುಡಿದ ವಿಷ ಅಮೃತವಾಗಿ ಮಾರ್ಪಟ್ಟಿತ್ತು! ವಿಷ ಬೆರೆತ ತೀರ್ಥವನ್ನು ಸೇವಿಸಿದ್ದರೂ, ಗಜಪತಿಯು ಮಾತ್ರ ಮೊದಲಿನಂತೆಯೇ ಇದ್ದನು! ತನ್ನ ಕಣ್ಣೆದುರಿಗೇ ನಡೆದ ಈ ಪವಾಡದ ಅದ್ಭುತವನ್ನು ನೋಡಿ ಪೂಜಾರಿಯು ಸ್ತಂಭೀಭೂತನಾಗಿ ನಿಂತನು.

ಇದನ್ನೆಲ್ಲಾ ದೂರದಲ್ಲಿ ಅಡಗಿ ನೋಡುತ್ತಾ ನಿಂತಿದ್ದ ಗಜಪತಿಯ ಪ್ರಾಣ ಅಪಹರಿಸಲು ಪ್ರಯತ್ನಿಸಿದ್ದ ಆ ವಿಶ್ವಾಸಘಾತುಕನಾದ ಜ್ಞಾತಿಗೆ ಗಜಪತಿಯು ವಿಷವನ್ನು ಕುಡಿದರೂ ಸಾಯದೆ ಉಳಿದುಕೊಂಡುದನ್ನು ನೋಡಿ ಗಾಬರಿಯಾಯಿತು. ಅವನಿಗೆ ತಾನು ಮಾಡಿದ ಭಯಂಕರ ಕೃತ್ಯದ ಅರಿವಾಗಿ, ತನಗೆ ಕಾದಿರುವ ಶಿಕ್ಷೆಯನ್ನು ನೆನೆದು ತತ್ತರಿಸಿದ. ಅವನಿಗೆ ತಲೆಸುತ್ತಿ ಬಂತು. ತನ್ನನ್ನು ಉದ್ಧರಿಸಬಲ್ಲವನು ಗಜಪತಿಯೇ ಎಂದು ಓಡಿಬಂದು ಗಜಪತಿಯ ಕಾಲಿನ ಮೇಲೆ ಬಿದ್ದು ಕ್ಷಮೆಯನ್ನು ಕೋರಿದ. ಗಜಪತಿಯು ಕ್ಷಮಾದಾನ ನೀಡುವತನಕ ಅವನು ಮೇಲೇಳಲಿಲ್ಲ

ಈ ಘಟನೆ ಕರ್ಣಾಕರ್ಣಿತವಾಗಿ ಹರಡಿ ಗಜಪತಿಯ ದೈವಭಕ್ತಿ, ಕ್ಷಮೆ ಎಲ್ಲರ ಮನೆ ಮಾತಾಯಿತು. ಗಜಪತಿಯ ಮೇಲೆ ದ್ವೇಷ ಕಾರುತ್ತಿದ್ದ ಹಗೆಗಳೆಲ್ಲರೂ ಈಗ ಗಜಪತಿಯ ಪರಮಾಪ್ತ ಮಿತ್ರರಾಗಿದ್ದರು. ಹಾಲಾಹಲವನ್ನು ಕುಡಿದು ಅರಗಿಸಿಕೊಂಡ ಗಜಪತಿ, ಜ್ಞಾತಿಗಳ ದ್ವೇಷ

ವನ್ನೆಲ್ಲಾ ಹೀರಿ ಅರಗಿಸಿಕೊಂಡಿದ್ದ. ಹೀಗೆ ಗಜಪತಿಯ ದೈವಭಕ್ತಿ ಗಜಪತಿಯನ್ನು ಎಲ್ಲಾ ವಿಪತ್ತುಗಳಿಂದ ಕಾಯ್ದಿತ್ತು !

ಇಂದು ಪ್ರಾತಃಕಾಲದ ಪೂಜೆ ಪುರಸ್ಕಾರಗಳು ಮುಗಿದು, ಮಡಿಯಲ್ಲೇ ಶ್ರೀಮದ್ರಾಮಾಯಣದ ಯುದ್ಧಕಾಂಡವನ್ನು ಓದುತ್ತಿದ್ದ ಗಜಪತಿಗೆ ಅಶೋಕವನದಲ್ಲಿ ರಾವಣನಿಂದ ಇಡಲ್ಪಟ್ಟದ್ದ ಜಾನಕಿಯ ಕಥಾಭಾಗವನ್ನು ಓದಿಕೊಂಡು, ತನ್ನ ಪತ್ನಿಯ ನೆನಪಾಗಿ ಹಾಗೇ ಹನಿಗಣ್ಣಾದನು. ತನ್ನಮೇಲೆ ಸಣ್ಣ ಕಾರಣಕ್ಕಾಗಿ ಮುನಿಸು ಮಾಡಿಕೊಂಡು, ಕೊಂಡಪಲ್ಲಿಗೆ ಹೋಗಿದ್ದ ಮಹಾರಾಣಿ ಲಕ್ಷ್ಮೀಬಾಯಿಯು ತನ್ನ ದುರ್ದೈವವೆನ್ನುವಂತೆ, ಕೃಷ್ಣದೇವರಾಯನ ಕೈಗೆ ಸೆರೆ ಸಿಕ್ಕಿರುವ ಸಂಗತಿಯನ್ನು ಚಾರರ ಮೂಲಕ ತಿಳಿದಲಾಗಾಯಿತು ಗಜಪತಿಯ ಮನಸ್ಸು ಅಶಾಂತಿಯ ಮಡುವಾಗಿತ್ತು. ಕೊಂಡವೀಡಿನ ಪಟ್ಟಿಗೆಯಲ್ಲಿ ತನ್ನ ಎರಡುಕಣ್ಣುಗಳಂತಿದ್ದ, ವೀರಭದ್ರದೇವ ಹಾಗೂ ನರಹರಿಪಾತ್ರರು ಕೃಷ್ಣದೇವರಾಯನಿಗೆ ಸೆರೆಯಾಗಿದ್ದರು. ಅವರು ಕೃಷ್ಣದೇವರಾಯನ ಸೆರೆಮನೆಯಲ್ಲಿಯೇ ಕೊಳೆಯುತ್ತಾ ಬಿದ್ದಿದ್ದರೆ ಗಜಪತಿಗೆ ಅಷ್ಟು ದುಃಖವಾಗುತ್ತಿರಲಿಲ್ಲ. ಆದರೆ ಅವರು ಉತ್ಕಲಪುತ್ರರಾಗಿದ್ದೂ, ತನ್ನ ಕಣ್ಮಣಿಗಳಂತಿದ್ದೂ, ಇಂದು ಯಾವುದೋ ಲೋಭಕ್ಕೆ ಬಲಿಯಾಗಿ, ಉತ್ಕಲದ ಪರಮಶತ್ರುವಾದ ಕೃಷ್ಣದೇವರಾಯನ ಸೇವೆಯನ್ನು ಒಪ್ಪಿಕೊಂಡು ಮಲೆಬೆನ್ನೂರಿಗೆ ಹೋದುದು ಗಜಪತಿಗೆ ಅಪಮಾನವಾಗಿತ್ತು. ಅವನು ಅಪಮಾನದ ಬೇಗೆಯಲ್ಲಿ ಬೇಯುತ್ತಿದ್ದ. ಅವರು ತನ್ನ ಭಾಗಕ್ಕೆ, ಉತ್ಕಲಭಾಗಕ್ಕೆ ಇದ್ದೂ ಸತ್ತಂತೆಯೇ ಎಂದು ಸಮಾಧಾನ ತಾಳಲೆತ್ನಿಸಿದರೂ, ಮರುಕ್ಷಣದಲ್ಲಿ ತಾನು ಅವರಿಬ್ಬರಬಗ್ಗೆ ಕಟ್ಟಿದ ಎಲ್ಲ ಹೊಂಗನಸು ಪುಡಿಪುಡಿಯಾಯಿತಲ್ಲ ಎನ್ನುವ ದುಃಖದಿಂದ ಮನಸ್ಸು ಮದುಡಿಕೊಳ್ಳುತ್ತಿತ್ತು ; ಹೃದಯಾಂತರಾಳದಲ್ಲಿ ಮಾತಿಗೆ ನಿಲುಕದ ಮೂಕಯಾತನೆಯಾಗುತ್ತಿತ್ತು. ತಾನು ರತ್ನಗಳೆಂದು ತಿಳಿದಿದ್ದ ಅವರು ಗಾಜಿನ ಚೂರುಗಳಾದರಲ್ಲ ಎಂಬುದೇ ಗಜಪತಿಯ ವ್ಯಥೆಗೆ ಕಾರಣವಾಗಿತ್ತು.

ಈ ಗಾಯ ಮಾಗುವ ಮೊದಲೇ ಗಾಯದ ಮೇಲೆ ಬೊಕ್ಕೆ ಬಿದ್ದವೆ. ಕೊಂಡಪಲ್ಲಿಯಿಂದ ಗೂಢಚಾರರು ವಾರ್ತೆ ತಂದಿದ್ದರು. ಕೊಂಡಪಲ್ಲಿಯು

ಕೃಷ್ಣದೇವರಾಯನ ಕುತಂತ್ರಕ್ಕೆ ಬಲಿಯಾಗಿ ಯುದ್ಧವಿಲ್ಲದೆ ವಶವಾಯಿತೆಂದೂ, ಯುವರಾಜಕುಮಾರನೂ, ಮಹಾರಾಣಿ ಲಕ್ಷ್ಮೀಬಾಯಿಯೂ ಕೃಷ್ಣದೇವರಾಯನಿಗೆ ಸೆರೆಸಿಕ್ಕಿರುವರೆಂದೂ, ಯುವರಾಜಕುಮಾರ ರಾಮಚಂದ್ರದೇವನು ಕೃಷ್ಣದೇವರಾಯನ ಕೃಪಾಭಿಕ್ಷೆಯನ್ನು, ಸ್ನೇಹಹಸ್ತವನ್ನು ತಿರಸ್ಕರಿಸಿದುದರಿಂದ ಅವರಿಬ್ಬರನ್ನು ವಿಜಯನಗರದ ಸೆರೆಮನೆಯಲ್ಲಿ ಇಡಲಾಗಿದೆ ಎಂದೂ ದೂತರು ವಾರ್ತೆ ತಂದಿದ್ದರು. ಇದನ್ನು ಕೇಳಿ ಗಜಪತಿಗೆ ಉಂಟಾದ ಮನೋವೇದನೆ ಅಷ್ಟಿಷ್ಟಲ್ಲ. ಅವನ ಪ್ರೀತಿಯ ಉದಯಗಿರಿ, ಕೊಂಡವೀಡು, ಕೊಂಡಪಲ್ಲಿದುರ್ಗಗಳು ಕೈಬಿಟ್ಟುಹೋಗಿದ್ದವು. ಇವುಗಳನ್ನು ಕಳೆದುಕೊಂಡುದಕ್ಕೆ ಗಜಪತಿಗೆ ಹೆಚ್ಚು ದುಃಖವಾಗಿರಲಿಲ್ಲ. ಮತ್ತೆ ಯುದ್ಧಮಾಡಿ ಇವುಗಳನ್ನು ರಾಯನಿಂದ ಕಿತ್ತುಕೊಳ್ಳಬಹುದೆಂಬ ಧೈರ್ಯವಿತ್ತು. ಆದರೆ ತನ್ನ ಪ್ರೀತಿಯ ಪುತ್ರ ಹಾಗೂ ಪ್ರಿಯತಮೆಯರೂ ರಾಯನ ಕೈಗೆ ಸಿಕ್ಕಿ, ಅವನ ಸೆರೆಮನೆಯಲ್ಲಿ ಕೊಳೆಯುತ್ತಾ ಬಿದ್ದಿರುವ ಸಂಗತಿಯನ್ನು ನೆನೆದಾಗ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತೆ ಆಗುತ್ತಿತ್ತು. ಉತ್ಕಲದ ಸಮಸ್ತ ಜನತೆಯ ಆಶೋತ್ತರಗಳ ಪ್ರತಿನಿಧಿಯಂತೆ ಇದ್ದ ಯುವರಾಜ ರಾಮಚಂದ್ರದೇವ ಮತ್ತು ಉತ್ಕಲದ ರಾಜಲಕ್ಷ್ಮಿಯಂತಿದ್ದ ಮಹಾರಾಣಿಯಾದ ಲಕ್ಷ್ಮೀಬಾಯಿಯು ಶತ್ರುವಿನ ಸೆರೆಮನೆಯಲ್ಲಿ ದಿನ ಕಳೆಯಬೇಕಾಗಿ ಬಂದ ಉತ್ಕಲದ ದೌರ್ಭಾಗ್ಯ ನೆನೆದು ಅವನ ಮನಸ್ಸು ಮುಮ್ಮಲ ಮರುಗುತ್ತಿತ್ತು. ತಾಯಿ ಇದ್ದೂ ಅನಾಥಳಾದ ಜಗನ್ಮೋಹಿನಿಯನ್ನು ನೋಡಿದಾಗ, ಮಹಾರಾಣಿಯಿಲ್ಲದೆ ಕಂಗೆಡುವ ಅರಮನೆಯ ಪರಿಜನರನ್ನು ನೋಡಿದಾಗ ಗಜಪತಿಗೆ ದುಃಖ ಒತ್ತರಿಸಿಕೊಂಡು ಬರುತ್ತಿತ್ತು. ಇಷ್ಟಕ್ಕೆಲ್ಲ ತಾನೇ ಕಾರಣನೆಂದು ಒಮ್ಮೊಮ್ಮೆ ಅನಿಸಿ ತನ್ನ ಬಗೆಗೆ ತಿರಸ್ಕಾರ ಉಂಟಾಗುತ್ತಿತ್ತು. ಆದರೆ ಮರುಗಳಿಗೆಯಲ್ಲಿ ಎಲ್ಲವೂ ಜಗನ್ನಾಥನ ಇಷ್ಟ. ತನ್ನನ್ನೂ. ತನ್ನವರನ್ನೂ ಪರೀಕ್ಷಿಸಲು ಈ ಬಗೆಯ ಕಷ್ಟವನ್ನೊಡ್ಡಿ ಆ ಸ್ವಾಮಿಯು ತಮ್ಮ ಸತ್ವಪರೀಕ್ಷೆ ಮಾಡುತ್ತಿರುವನೆಂದು ಒಮ್ಮೊಮ್ಮೆ ಸಮಾಧಾನ ತಾಳುವನು. ಆದರೆ ಮೇಲಿಂದಮೇಲೆ ಬರುತ್ತಿದ್ದ ಅನಿಷ್ಟದ ವಾರ್ತೆಗಳನ್ನು ಕೇಳಿ ಕೇಳಿ, ಅವನ ಮನಸ್ಸಿನ ಧೃತಿಗೆಟ್ಟು ನಿರಾಶಾಭಾವನೆಯುಂಟಾಗುತ್ತಿತ್ತು. ಅಂತಹ ವೇಳೆಯಲ್ಲಿ ಧೈರ್ಯ ತುಂಬು

ತ್ತಿದ್ದವಳೆಂದರೆ ಜಗನ್ಮೋಹಿನಿ! ಮತ್ತೊಂದು ಶ್ರೀಮದ್ರಾಮಾಯಣ! ಇಂದು ಸೀತಾಮಾತೆಗೆ ರಾವಣನ ಕೈಯ್ಯಿಂದ ಆದ ತೊಂದರೆಗಳನ್ನು ಓದಿಕೊಂಡಂತೆ ಅವನ ಮನಸ್ಸು, ವಿಜಯನಗರದ ಸೆರೆಮನೆಯಲ್ಲಿ ಕೊಳೆಯುತ್ತಾ ಬಿದ್ದಿರುವ ತನ್ನ ಪತ್ನೀಪುತ್ರರನ್ನು ನೆನೆಯುತ್ತಿತ್ತು. ಅವನು ಹಾಗೆಯೇ ಇನ್ನೂ ಎಷ್ಟು ವೈಮರೆತು ಕುಳಿತಿರುತ್ತಿದ್ದನೋ ಹೇಳುವುದು ಕಷ್ಟ! ಆದರೆ ಜಗನ್ಮೋಹಿನಿ ಅಲ್ಲಿಗೆ ಬಂದುದರಿಂದ ಗಜಪತಿಯ ಸಮಾಧಿಗೆ ಭಂಗವುಂಟಾಯಿತು.

"ಅಪ್ಪಾಜೀ........" ಎಂದು ತನ್ನ ಮಂಜುಳ ಧ್ವನಿಯಲ್ಲಿ ಕರೆದಾಗಲೇ ಗಜಪತಿಗೆ ಎಚ್ಚರ.

"ಹಾಂ" ಎಂದು ಎಚ್ಚೆತ್ತು "ಕರೆದೆಯಾ ಮಗು?" ಎಂದು ಬಡಬಡಿಸಿದ ಗಜಪತಿ. ಈ ಮಾತಿಗೆ ಜಗನ್ಮೋಹಿನಿ ತುಂಟನಗೆ ನಕ್ಕಳು.

"ನೀನು ಇಲ್ಲಿಗೆ ಯಾವಾಗ ಬಂದೆ ಮಗು?"

"ನಾನು ಆಗಲೇ ಬಂದೆ ಅಪ್ಪಾಜಿ, ಆದರೆ ನೀವು ಪುಸ್ತಕವನ್ನು ಮುಂದಿಟ್ಟುಕೊಂಡು ಏನನ್ನು ಕನಸು ಕಾಣುತ್ತಿದ್ದಿರಿ. ನಿಮ್ಮ ಕನಸಿಗೆ ಭಂಗ ತರಬಾರದೆಂದು ನಾನು ಬಹಳಹೊತ್ತು ಕಾದೆ. ನೀವು ನಿಮ್ಮ ಸ್ವಪ್ನರಾಜ್ಯದಿಂದ ಹೊರಗೆ ಬರುವಂತೆ ಕಾಣಲಿಲ್ಲ. ಅಲ್ಲದೆ ನೀವು ಯಾವುದನ್ನೊ ನೆನೆದು ದುಃಖಿಸುತ್ತಿರುವಂತೆ ತೋರಿತು. ನನಗೆ ಹೆದರಿಕೆಯಾಗಿ ನಿಮ್ಮನ್ನು ಗಟ್ಟಿಯಾಗಿ ಕೂಗಿದೆ! ನಾನು ಬಂದುದರಿಂದ ನಿಮ್ಮ ಧ್ಯಾನಕ್ಕೆ ಭಂಗವುಂಟಾಗಿದ್ದರೆ ದಯವಿಟ್ಟು ಕ್ಷಮಿಸಿ ಅಪ್ಪಾಜಿ!" ಎಂದಳು. ಜಗನ್ಮೋಹಿನಿ.

"ನಿನ್ನಿಂದ ನನ್ನಧ್ಯಾನಕ್ಕೆ ಭಂಗವುಂಟಾಗಿಲ್ಲ ಮಗು; ನಾನು ರಾಮಾಯಣದಲ್ಲಿ ಸೀತಾ ವನವಾಸದ ಪ್ರಕರಣ ಓದುತ್ತಿದ್ದೆ; ಹಾಗೇ ಇನ್ನೇನೋ ಸಂಗತಿ ನೆನಪಿಗೆ ಬಂತು, ಅದನ್ನೇ ಯೋಚಿಸುತ್ತಿದ್ದೆ ಅಷ್ಟೆ."

"ನೀವು ನನ್ನೊಂದಿಗೆ ಏನನ್ನೋ ಮರೆಮಾಚುತ್ತಿದ್ದೀರಿ ಅಪ್ಪಾಜಿ!"

"ಇಲ್ಲ ಮಗು!"

"ಹಾಗಾದರೆ ನೀವೇಕೆ ಅಳುತ್ತಿದ್ದುದು?"

"ನಾನು ಅಳುತ್ತಿರುವೆನೆಂದು ನಿನಗೆ ಯಾರು ಹೇಳಿದರು ಮಗು? ಅಳಲು ನನಗೇನಾಗಿದೆ..........?"

"ನಿಮ್ಮ ದುಃಖದ ಕಾರಣ ನನಗೆ ತಿಳಿದಿದ್ದರೆ ನಾನು ಈ ಪ್ರಶ್ನೆಯನ್ನು ಕೇಳುತ್ತಲೇ ಇರಲಿಲ್ಲ. ಏಕೋ ಏನೋ? ಈ ಕೆಲವು ದಿನಗಳಿಂದ ನೀವು ಏನನ್ನೋ ಕುರಿತು ಚಿಂತಿಸುತ್ತಿದ್ದೀರಿ. ಅದೇನೆಂದು ನನಗೆ ಮಾತ್ರ ನೀವು ತಿಳಿಸುತ್ತಿಲ್ಲ!"

"ಅಂತಹ ಯಾವ ಸಂಗತಿಯೂ ಇಲ್ಲ ಮಗು. ರಾಮಾಯಣದ ಕಥಾಭಾಗ ಓದುತ್ತಿದ್ದಂತೆ, ನಿಮ್ಮ ತಾಯಿಯ ನೆನಪಾಯಿತು. ನಿನ್ನ ಅಣ್ಣನ ನೆನಪಾಯಿತು. ನಿನ್ನ ನೆನಪಾಯಿತು. ನನ್ನೊಬ್ಬನ ದೆಸೆಯಿಂದ ನಿಮ್ಮೆಲ್ಲರಿಗಾದ ತೊಂದರೆಯನ್ನು ನೆನೆದಾಗ ಬಹುಶಃ ಕಣ್ಣಿನಲ್ಲಿ ನೀರು ಚಿಮ್ಮಿರಬಹುದು ಅಷ್ಟೆ."

"ಇಷ್ಟಕ್ಕೆಲ್ಲ ಕಣ್ಣೀರಿಡುವವರು ನೀವಲ್ಲ ಅಪ್ಪಾಜಿ. ಇದಕ್ಕೂ ಮಹತ್ತರ ಯಾವದೋ ಬೇರೆ ಕಾರಣವಿರಬೇಕು. ಅಣ್ಣನ ಬಗ್ಗೆ, ಅಮ್ಮನ ಬಗ್ಗೆ ನೀವು ಕಣ್ಣೀರು ತರುವುದು ಸಹಜ. ಆದರೆ ನನ್ನ ಬಗ್ಗೆ ನಿಮಗೇಕೆ ದುಃಖವಾಗಬೇಕು. ನನಗೆ ಏನಾಗಿದೆ ಎಂದು ನೀವು ದುಃಖಿಸಬೇಕು.

"ಹೌದು ಕಂದ, ನೀನು ಸುಖವಾಗಿಯೇ ಇರುವೆ. ಭಗವಂತನು ನಿನ್ನನ್ನು ಸದಾ ಹೀಗೆಯೇ ಇಟ್ಟಿರಲಿ. ನೀನು ಸದಾ ಹೀಗೆ ಹಸನ್ಮುಖಿಯಾಗಿಯೇ ಇರು ಕಂದ. ಕಡೆತನಕ ಹೀಗೆಯೇ ನಗುನಗುತ್ತಿರು. ನನಗೆ ಬೇಕಾಗಿರುವುದು ಇಷ್ಟೆ" ಎಂದು ಹಸನ್ಮುಖಿಯಾಗಿ ತುಂಬುನಗುವನ್ನು ನಕ್ಕು ಮಗಳ ತಲೆಯನ್ನು ಪ್ರೀತಿಯಿಂದ ನೇವರಿಸಿದನು.

ತಂದೆಯ ಮುಖದಮೇಲಿನ ಚಿಂತೆಯ ಕಾರ್ಮೋಡ ಚಲನ, ನಗೆಯ ಬೆಳುದಿಂಗಳು ಮೊದಲಿನಂತೆ ಮೂಡಿದುದರಿಂದ ಜಗನ್ಮೋಹಿನಿಗೆ ಎಷ್ಟೋ ಸಂತೋಷವಾಯಿತು. ಅವಳು ತಂದೆಯೊಡನೆ ಅದೂ ಇದೂ ಮಾತಾಡುವುದರಲ್ಲಿ ತಾನು ಬಂದ ಕೆಲಸವನ್ನೇ ಮರೆತು ಹಿಂದಿರುಗಿದಳು. ಅವಳು ಹೋಗುವತನಕ ಅವಳೊಡನೆ ಸಂತೋಷದಿಂದಲೇ ಮಾತನಾಡುತ್ತಿದ್ದು, ಅವಳು ಕಣ್ಮರೆಯಾದೊಡನೆಯೇ ಒಂದು ನಿಟ್ಟುಸಿರನ್ನು ಬಿಟ್ಟನು ಗಜಪತಿ.

ಈ ಘಟನೆಯಾದಮೇಲೆ ಗಜಪತಿಯು ಜಗನ್ಮೋಹಿನಿಗೆ ತನ್ನ ಅಂತರಂಗದಲ್ಲಿ ನಡೆಯುವ ತುಮುಲ ಯುದ್ಧವನ್ನೂ, ಚಿಂತೆ ಬೇಗೆಯನ್ನೂ ತೋರಗೊಡಬಾರದೆಂದು ಆದಷ್ಟುಮಟ್ಟಿಗೆ ಎಚ್ಚರವಹಿಸಿದನು. ತಂದೆಯ ನಗುಮುಖವನ್ನು ನೋಡಿ ತಂದೆಯು ಸಂತೋಷದಿಂದ ಇರುವುದಾಗಿ ಜಗನ್ಮೋಹಿನಿ ಭಾವಿಸಿದಳು. ಆದರೆ ಇದೆಲ್ಲ ಕೊಂಚಕಾಲ ಮಾತ್ರ. ಕೆಲವು ತಿಂಗಳು ಕಳೆದನಂತರ ಮೊದಲಿನಂತೆಯೇ ಚಿಂತಾಂಗನೆಗೆ ಅವಕಾಶ ಕೊಟ್ಟಿದ್ದ—ಗಜಪತಿ.

ಈ ಅವಧಿಯಲ್ಲಿ ಗಜಪತಿಯ ಚಿತ್ತ ಶಾಂತಿಯನ್ನು ಕದಡುವ ಒಂದು ಘಟನೆ ನಡೆದಿತ್ತು. ಸಿಂಹಾದ್ರಿಯಲ್ಲಿ ಬೀಡುಬಿಟ್ಟಿದ್ದ ಕೃಷ್ಣದೇವರಾಯನು ತನ್ನೊಡನೆ ಸಂಧಾನಕ್ಕೆಳಸಿ, ವಿಫಲನಾದ ಸಿಟ್ಟಿಗೆ ಜಗನ್ಮೋಹಿನಿಯಮೇಲೆ ಸೇಡು ತೀರಿಸಿಕೊಳ್ಳಲು, ಅವಳನ್ನು ಕಮ್ಮಾರನಿಗೆ ಕೊಟ್ಟು ವಿವಾಹ ಮಾಡಲು ಶಪಥಮಾಡಿ ಆದರಂತೆ ಶಿಲಾಲೇಖನ ಬರೆಸಿರುವನೆಂಬ ವಾರ್ತೆಯನ್ನು ಗೂಢಚಾರರು ತಂದು ಗಜಪತಿಯ ಕಿವಿಯಮೇಲೆ ಹಾಕಿದ್ದರು. ಈ ವಾರ್ತೆಯನ್ನು ಕೇಳಿ ಗಜಪತಿಯು ಮೆಟ್ಟಿದ ಕಾಳಿಂಗನಂತೆ ಬುಸುಗುಟ್ಟಿದ. ದ್ವೇಷದಿಂದ ಮುಖ ಕಪ್ಪಿಟ್ಟಿತು. ತನ್ನಮೇಲಿನ ಸಿಟ್ಟನ್ನೂ, ಅಸಮಾಧಾನವನ್ನೂ ಜಗನ್ಮೋಹಿನಿಯಮೇಲೆ ತೀರಿಸಿಕೊಳ್ಳಲು ನಿಶ್ಚಯಿಸಿದ ರಾಯನು ಗಜಪತಿಯ ದೃಷ್ಟಿಯಲ್ಲಿ ನೀಚನೂ, ದುರುಳನೂ ಆಗಿ ತೋರಿದನು. ಅವನಂತಹ ನೀಚನಿಗೆ ಮಗಳನ್ನು ಕೊಟ್ಟು ಮದುವೆ ಮಾಡುವುದಕ್ಕಿಂತ, ಅವಳನ್ನು ಭಾವಿಗೆ ತಳ್ಳುವುದು ಲೇಸೆಂದು ಅನಿಸಿತು. "ಗಜಪತಿಯ ಮೈಯಲ್ಲಿ ಒಂದುತೊಟ್ಟು ರಕ್ತವಿರುವತನಕ, ಜಗನ್ಮೋಹಿನಿಯ ಆಸೆಯನ್ನು ರಾಯನು ಮರೆಯಬೇಕು. ಜಗನ್ಮೋಹಿನಿಯು ಕೈಸೆರೆ ಸಿಗುವಮಾತು ಹಾಗಿರಲಿ, ಅವಳ ನೆರಳೂ ಅವನಿಗೆ ದೊರೆಯುವುದಿಲ್ಲ! ಅದುಹೇಗೆ ಜಗನ್ಮೋಹಿನಿಯನ್ನು ತನ್ನ ಕುದುರೆ ಲಾಳ ಹೊಡೆಯುವ ಕಮ್ಮಾರನಿಗೆ ಕೊಟ್ಟು ವಿವಾಹಮಾಡುತ್ತಾನೆ ನಾನು ನೋಡುತ್ತೇನೆ।" ಎಂದು ರೋಷಾವೇಶದಲ್ಲಿ ಹುಬ್ಬು ಗಂಟಿಕ್ಕಿ ಸಿಂಹಗರ್ಜನೆ ಮಾಡಿದನು.

ಆದರೆ ಸಿಂಹಾದ್ರಿಯ ಕಡೆಯಿಂದ ಕೃಷ್ಣದೇವರಾಯನು ಪೊಟ್ಟನೂರಿನಮೇಲೆ ಧಾಳಿಯಿಡಲು ಸಕಲ ಸಿದ್ಧತೆಗಳನ್ನು ಮಾಡಿಕೊಂಡು, ಕೆಲವೇ

ದಿನಗಳಲ್ಲಿ ದಂಡೆತ್ತಿ ಬರುವನೆಂದು ಸುದ್ದಿಯನ್ನು ಕಳಿಸಿದನು. ಇದರಿಂದ ಗಜಪತಿಯ ರಣೋತ್ಸಾಹ ಒಮ್ಮೆಲೇ ಅಡಗಿ, ರಾಯನು ಪೊಟ್ನೂರಿನ ಮೇಲೆ ಧಾಳಿ ಇಟ್ಟರೆ ಹೇಗೆ? ಎನ್ನುವ ಚಿಂತೆಯಿಂದ, ಅನ್ನಾಹಾರಗಳೂ ಬೇಡವಾಗಿ ಗಜಪತಿಯು ಕಂಗಾಲಾದನು. ಅವನ ನೆಚ್ಚಿನ ಪುತ್ರರಿಬ್ಬರು ಶತ್ರುವಿನ ಸೆರೆಯಲ್ಲಿ ಇದ್ದುದರಿಂದ ಗಜಪತಿಗೆ ಈ ದುರವಸ್ಥೆ ಒದಗಿತ್ತು. ಅವನು ತನ್ನ ಅಸಹಾಯಕತೆಗಾಗಿ ಮುಮ್ಮುಲ ಮರುಗುತ್ತಿದ್ದನು. ಜಗನ್ಮೋಹಿನಿಯು ನೆನಪಾದರಂತೂ, ತನ್ನ ಮೇಲಿನ ಸಿಟ್ಟಿನ ಕಾರಣದಿಂದಾಗಿ ಅವಳಮೇಲೆ ರಾಯನು ಸೇಡು ತೀರಿಸಿಕೊಳ್ಳುವಂತೆ ಆಯಿತೆ? ಎಂದು ಅಪಾರ ದುಃಖವಾಗುತ್ತಿತ್ತು! ಇದನ್ನು ಜಗನ್ಮೋಹಿನಿಯಿಂದ ಮುಚ್ಚಿಡಲು ಗಜಪತಿಯಿಂದ ಸಾಧ್ಯವಾಗಲಿಲ್ಲ.

ಒಂದು ದಿನ ಗಜಪತಿಯು ಜಗನ್ಮೋಹಿನಿಯದೇ ಆದ ಚಿಂತೆಯಲ್ಲಿ ಮೈಮರೆತು ಕುಳಿತಿರುವಾಗ, ಜಗನ್ಮೋಹಿನಿಯು ಅಲ್ಲಿಗೆ ಬಂದಳು. ಅವಳನ್ನು ನೋಡುತ್ತಲೇ ಗಜಪತಿಯ ಕಣ್ಣಿನಲ್ಲಿ ಕಂಬನಿದುಂಬಿತು. ಮಗಳನ್ನು ಪಕ್ಕದಲ್ಲಿ ಕೂಡಿಸಿಕೊಂಡು, ತನ್ನಂಥವನ ಹೊಟ್ಟೆಯಲ್ಲಿ ಏಕೆ ಹುಟ್ಟಿದೆ ಮಗು! ಎಂದು ಗದ್ಗದಕಂಠದಲ್ಲಿ ಹೇಳಿದ ಗಜಪತಿ.

ಜಗನ್ಮೋಹಿನಿಗೆ ತನ್ನ ತಂದೆಯ ವರ್ತನೆ ಮೊದಲು ಅರ್ಥವಾಗಲಿಲ್ಲ. ಆವಳು ಭಾವೋನ್ಮಾದದಲ್ಲಿ ಇದ್ದ ತನ್ನ ತಂದೆಯನ್ನು ಎವೆಯಿಕ್ಕದೆ ನೋಡಿದಳು. ತನ್ನ ತಂದೆಯ ಚಿಂತಾಜನಕವಾದ ಸ್ಥಿತಿಯನ್ನು ನೋಡಿ ಅವಳಿಗೆ ದುಃಖ ಬಿತ್ತರಿಸಿಕೊಂಡು ಬಂದಿತು. ಅವಳು ಗಳಗಳನೆ ಅತ್ತಳು. ಅನಂತರ ದುಃಖವನ್ನು ತಡೆದುಕೊಂಡು ಹೇಳಿದಳು.

"ಅಪ್ಪಾಜಿ, ಇತ್ತೀಚಿನ ದಿನಗಳಲ್ಲಿ ನೀವು ಯಾವುದೋ ಚಿಂತೆಯಿಂದ ಒಂದೇಸಮನೆ ಕೊರಗುತ್ತಲಿದ್ದೀರಿ. ಅದೇನೆಂದು ನೀವು ಹೇಳುತ್ತಿಲ್ಲ. ನಾನು ಪ್ರಶ್ನಿಸಿದಾಗಲೆಲ್ಲಾ ನನ್ನೊಂದಿಗೆ ಮರೆಮಾಚಲು ಬೇರೆ ಏನಾದರೂ ಹೇಳುತ್ತೀರಿ. ನೀವು ಮರೆಮಾಚುತ್ತಿರುವುದನ್ನು ನೋಡಿದರೆ, ನೀವು ಯಾವುದೋ ನನ್ನ ಬಗೆಯ ಚಿಂತೆಯಿಂದ, ಕೊರಗಿ ಕಂಗಾಲರಾಗುತ್ತಿರುವಿರೆಂದು ಅನಿಸುತ್ತದೆ. ಈಗೆಂಟುದಿನಗಳ ಹಿಂದೆ, ಸಿಂಹಾದ್ರಿಯಿಂದ ಚಾರನೊಬ್ಬನು ಬಂದು ತಮ್ಮೊಡನೆ ಅಂತರಂಗದಲ್ಲಿ ಬಹಳಹೊತ್ತು ಮಾತನಾಡು

ತ್ತಿದ್ದ. ಅದೇನು ಭಯಂಕರ ಸುದ್ದಿಯನ್ನು ತಮ್ಮ ಕಿವಿಗೆ ಅವನು ತಂದನೋ ನಾಕಾಣೆ. ಅಂತೂ ಅಂದಿನಿಂದಲೂ ನಿಮ್ಮನ್ನು ನೋಡುತ್ತ ಬಂದಿದ್ದೇನೆ. ನೀವು ಏನನ್ನೋ ತಲೆಗೆ ಹಚ್ಚಿಕೊಂಡು ಕೊರಗುತ್ತಲಿದ್ದೀರಿ. ಅದೇನೆಂದು ನಿಮ್ಮಿಂದಲೇ ಬರಲೆಂದು ನಾನು ಇದುವರೆಗೂ ಕಾದುಕಾದು ನಿರಾಶೆಯಾಯಿತು. ಈಗ ಕುತೂಹಲವನ್ನು ತಡೆಯದೆ ನಾನೇ ಬಂದಿದ್ದೇನೆ. ನಿಮ್ಮನ್ನು ದಹಿಸುತ್ತಿರುವ ಚಿಂತೆ ಯಾವುದು ?

ಇದಕ್ಕೆ ಮೂಲವಾದ, ದೂತನು ತಂದ ಆ ಭಯಂಕರ ಸುದ್ದಿ ಏನು ? ನನ್ನೊಂದಿಗೆ ಎಲ್ಲ ರಾಜಕೀಯವನ್ನು ಚರ್ಚಿಸುತ್ತಿದ್ದ ನೀವು ಈ ವಿಷಯವನ್ನು ಏಕೆ ಗೋಪ್ಯ ಇರಿಸಿದ್ದೀರೋ ನನಗೆ ತಿಳಿಯದಾಗಿದೆ. ನಾನು ಕೇಳಬಾರದಂತಹ ಸುದ್ದಿಯೇ ಅದು ? ನನ್ನೊಡನೆ ಹೇಳಬಾರದಂತಹ ಗೋಪ್ಯದ ಸಂಗತಿಯೇ ಅದು ? ತಮ್ಮ ವಿಶ್ವಾಸಕ್ಕೆ, ನಂಬಿಕೆಗೆ ನಾನು ಅರ್ಹಳಲ್ಲವೆಂದು ಅದನ್ನು ನನ್ನಿಂದ ಬಚ್ಚಿಟ್ಟದ್ದೀರಾ ? ಯಾವುದನ್ನೂ ಸ್ಪಷ್ಟವಾಗಿ ಹೇಳಿಬಿಡಿ ಅಪ್ಪಾಜಿ, ತಮ್ಮ ಹೃದಯವನ್ನು ಹಿಂಡುತ್ತಿರುವ ಆ ಸಂಗತಿಯನ್ನು ನನಗೆ ತಿಳಿಸಿದರೆ, ಅದರ ನಿವಾರಣೆಗೆ ನನ್ನಿಂದಲೇನಾದರೂ ಮಾಡಲು ಸಾಧ್ಯವಾದರೆ, ಪ್ರಾಣವನ್ನಾದರೂ ಒತ್ತೆಯಿಟ್ಟು ಮಾಡಿಕೊಡುತ್ತೇನೆ. ನೀವು ನನ್ನನ್ನು ಸಂಶಯದಿಂದ ನೋಡಬಾರದು. ನೀವು ರೂಪಿಸಿದ ವಿಗ್ರಹ ಇದು. ನಿಮ್ಮ ಸತ್ಕೀರ್ತಿಗೆ ಕಳಂಕ ತರುವ ಎಂತಹ ಕೆಲಸವೂ ನನ್ನಿಂದ ನಡೆಯದೆಂಬ ಭರವಸೆಯನ್ನು ಕೊಡುತ್ತೇನೆ. ಇನ್ನಾದರೂ ನಿಮ್ಮ ಚಿಂತೆಯೇನೆಂಬುದನ್ನು ನನಗೆ ತಿಳಿಸಿ. ಅದನ್ನು ನಿವಾರಿಸಲು ಸಾಧ್ಯವಿದ್ದರೆ, ನನ್ನ ಸರ್ವಸ್ವವನ್ನು ಬಲಿಗೊಟ್ಟಾದರೂ ನಿವಾರಿಸುತ್ತೇನೆ." ಎಂದು ಬಡಬಡಿಸಿದಳು ಜಗನ್ಮೋಹಿನಿ.

ಜಗನ್ಮೋಹಿನಿಯ ಮಾತುಗಳನ್ನು ಕೇಳಿ, ಗಜಪತಿಯು ನೊಂದ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು. ಒಳಗೊಳಗೆ ಕುದಿಯುತ್ತಿದ್ದ ಮನಸ್ಸಿನ ಬೇಗುದಿಯನ್ನೆಲ್ಲಾ ಹೊರಗೆಹಾಕಲು ಸೂಕ್ತ ಸಂದರ್ಭ ಒದಗಿತ್ತು. ರಾಯನು ಸಿಂಹಾದ್ರಿಯಲ್ಲಿ ಮಾಡಿರುವ ಪ್ರತಿಜ್ಞೆ ಶಿಲಾಲೇಖನದ ವೃತ್ತಾಂತವನ್ನು ಜಗನ್ಮೋಹಿನಿಗೆ ಹೇಗೆ ತಿಳಿಸುವುದೆಂದು ತನ್ನಲ್ಲೇ ಮಿಡುಕುತ್ತಿದ್ದ ಗಜಪತಿಗೆ ಆ ಎಲ್ಲ ಸಂಗತಿಯನ್ನು ತಿಳಿಸಲು

ಸೂಕ್ತ ಸುಸಂಧಿ ದೊರೆತಿತ್ತು ಎಂತಲೇ ಗಜಪತಿಯು ಜಗನ್ಮೋಹಿನಿಯೊಂದಿಗೆ ತನ್ನ ಮನವಳಲನ್ನೆಲ್ಲಾ ಆಮೂಲಾಗ್ರವಾಗಿ ತೋಡಿಕೊಂಡನು.

"ಸಿಂಹಾದ್ರಿಯಿಂದ ಬಂದ ದೂತನು ಮತ್ತೆ ಅನಿಷ್ಟದ ಸುದ್ದಿಯನ್ನೇ ತಂದಿದ್ದಾನೆ ಮಗು!"

"ಒಂದಾದಮೇಲೊಂದರಂತೆ, ಅನಿಷ್ಟಗಳ ಪರಂಪರೆಯೇ ನಮಗೊದಗಿರುವಾಗ, ಮತ್ತೊಂದು ಅನಿಷ್ಟ ಬಂದೊದಗಿದರೆ ನೀವೇಕೆ ಚಿಂತಿಸಬೇಕು. ಎಂತೂ ನೀರಿನಲ್ಲಿ ಮುಳುಗಿದ್ದೇವೆ. ಇನ್ನು ಚಳಿ ಏನು ಮಳೆ ಏನು? ನಮಗೆಲ್ಲವೂ ಒಂದೇ........"

ಎಂದು ವಿಷಣ್ಣಳಾಗಿ ನಕ್ಕಳು ಜಗನ್ಮೋಹಿನಿ.

"ಈಬಾರಿ ಕೃಷ್ಣದೇವರಾಯನ ದೃಷ್ಟಿ ನಮ್ಮಮೇಲೆ ತಿರುಗಿದೆ. ನಮ್ಮನ್ನು ಸೆರೆಹಿಡಿಯಲು ಪೊಟ್ನನೂರಿನಮೇಲೆ ದಂಡೆತ್ತಿ ಬರಲು, ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದಾನಂತೆ."

"ಇಷ್ಟಕ್ಕಾಗಿ ನಾವು ಹೆದರುವುದೇ? ನಮ್ಮ ಪಾಲಿಗೆ ಜಗನ್ನಾಥನಿದ್ದಾನೆ. ಅವನನ್ನು ನಂಬಿ ಧೈರ್ಯದಿಂದ ನಾವೂ ಯುದ್ಧಸನ್ನದ್ಧರಾಗೋಣ. ಮುಂದೆ ದೇವರು ಮಾಡಿಸಿದ್ದಂತೆ ಆಗಲಿ."

"ಶತ್ರು ದಂಡೆತ್ತಿ ಬರುವನೆಂದು ನಾನು ಧೈರ್ಯಗುಂದಿಲ್ಲ ಮಗು. ನಾನು ಯುದ್ಧಕ್ಕೆ ಎಂದೂ ಹೆದರಿದವನಲ್ಲ. ಇಂದೂ ಹೆದರುವುದಿಲ್ಲ. ಆದರೆ ಯುದ್ಧವಾದರೆ, ನಿನ್ನ ರಕ್ಷಣೆ ಹೇಗೆ ಎಂದು ನಿನ್ನ ವಿಷಯದಲ್ಲಿ ನನಗೆ ಕಳವಳ ಉಂಟಾಗಿದೆ, ರಾಯನ ಆ ವೀರ ಪ್ರತಿಜ್ಞೆಯನ್ನು ಕೇಳಿದಲಾಗಾಯಿತು ನಿನ್ನ ರಕ್ಷಣೆಯ ಚಿಂತೆಯೇ ಚಿಂತೆ ನನಗೆ!"

"ಅದಾವ ಪ್ರತಿಜ್ಞೆ ಅಪ್ಪಾಜಿ?"

"ಆ ಪ್ರತಿಜ್ಞೆಯೇ ನನ್ನ ಇಷ್ಟೆಲ್ಲ ಚಿಂತೆಗೆ ಕಾರಣ ಮಗು. ಕೃಷ್ಣದೇವರಾಯನು ನನ್ನೊಡನೆ ಸಂಧಾನಕ್ಕೆಳಸಿ ವಿಫಲನಾದಮೇಲೆ ನನ್ನ ಮೇಲಿನ ಸಿಟ್ಟನ್ನು ನಿನ್ನಮೇಲೆ ತೀರಿಸಿಕೊಳ್ಳುವ ಪ್ರತಿಜ್ಞೆ ಮಾಡಿದ್ದಾನಂತೆ. ಅದನ್ನೇ ಸಿಂಹಾದ್ರಿಯಲ್ಲಿ ಶಿಲಾಲೇಖನವಾಗಿ ಕೊರಸಿದ್ದಾನಂತೆ." ಎಂದು ಹೇಳಿ, ರಾಯನ ಪ್ರತಿಜ್ಞೆ ಹಾಗೂ ಶಿಲಾಲೇಖನದ ವೃತ್ತಾಂತವನ್ನು ಜಗನ್ಮೋಹಿನಿಗೆ ಅರುಹಿದನು.

ಇದನ್ನು ಕೇಳಿ ಜಗನ್ಮೋಹಿನಿ ತನ್ನಲ್ಲೇ ನಕ್ಕು ಹೇಳಿದಳು. "ಇಷ್ಟು ಅಲ್ಪಸಂಗತಿಗಾಗಿ ನೀವು ಇಷ್ಟು ಕಳವಳ, ಚಿಂತೆಪಡಬೇಕೆ ಅಪ್ಪಾಜಿ ?"

"ಕೃಷ್ಣದೇವರಾಯನ ವಿಷಯ ನಿನಗಿನ್ನೂ ಚನ್ನಾಗಿ ತಿಳಿಯದು ಮಗು. ರಾಯನು ಒಮ್ಮೆ ಪ್ರತಿಜ್ಞೆ ಮಾಡಿದನೆಂದರೆ ತೀರಿತು. ಅದನ್ನೆಂದಿಗೂ ಮುಗಿಸದೆ ಬಿಡನು. ಈ ಪ್ರತಿಜ್ಞೆಯನ್ನು ಈಡೇರಿಸುವ ಸಲುವಾಗಿಯೇ ರಾಯನು ಪೊಟ್ಟನೂರಿನಮೇಲೆ ಧಾಳಿಯಿಡಲು ನಿಶ್ಚಯಿಸಿರುವನಂತೆ. ದುರ್ದೈವದಿಂದ ಯುದ್ಧದಲ್ಲಿ ಅಚಾತುರ್ಯವಾಗಿ ನೀನು ಅಸಾಥೆಯಾದರೆ ಹೇಗೆ ಎಂಬುದೇ ನನ್ನ ಚಿಂತೆ. ಆ ದುರುಳ ರಾಯನಿಂದ ನಿನ್ನನ್ನು ರಕ್ಷಿಸುವವರು ಯಾರು? ಎಂದು ಹಗಲಿರುಳೂ ಕೊರಗುತ್ತಿದ್ದೇನೆ. ವಾಸ್ತವಾಂಶ ಹೇಳುವುದಾದರೆ, ರಾಯನು ಮಾಡಿದ ಪ್ರತಿಜ್ಞೆಯನ್ನು ಕೇಳಿದ ಲಾಗಾಯಿತು ನನ್ನ ಮನಸ್ಸಿಗೆ ನೆಮ್ಮದಿ ತಪ್ಪಿಹೋಗಿದೆ. ನಿಂತಲ್ಲಿ, ಕೂತಲ್ಲಿ ಇದೇ ಚಿಂತೆ, ಇದೇ ಯೋಚನೆ ನನಗೆ! ನಿನಗೆ ಈ ಸಂಗತಿಗಳನ್ನು ಹೇಳಿದರೆ ನೀನೆಲ್ಲಿ ನೊಂದುಕೊಳ್ಳುವೆಯೋ ಎಂದು ನಿನ್ನಲ್ಲಿ ಹೇಳಲು ಇದುವರೆಗೆ ಹಿಂಜರಿದೆ. ಈಗ ನಿನ್ನ ಬಲಾತ್ಕಾರಕ್ಕೆ ಹೇಳಲೇಬೇಕಾಯಿತು. ಈ ವಿಪತ್ತಿನಿಂದ ನಿನ್ನನ್ನು ಜಗನ್ನಾಥನೇ ಕಾಪಾಡಬೇಕು!" ಎಂದು ಗಜಪತಿ ನಿಟ್ಟುಸಿರಿಟ್ಟನು.

"ಅಪ್ಪಾಜಿ, ನಿಮ್ಮ ಎದೆಯಲ್ಲಿ ದಹಿಸುತ್ತಿರುವ ಚಿಂತಾಗ್ನಿ ಏನೆಂದು ಈಗಲಾದರೂ ನನ್ನೊಡನೆ ತಿಳಿಸಿದಿರಲ್ಲ. ಈಗ ನನ್ನ ಮನಸ್ಸಿಗೆ ಎಷ್ಟೋ ಸಮಾಧಾನವಾಗಿದೆ. ನೀವು ನನ್ನ ರಕ್ಷಣೆಯ ವಿಷಯದಲ್ಲಿ ಇಷ್ಟೆಲ್ಲ ಕೊರಗನ್ನು ಹಚ್ಚಿಕೊಳ್ಳಬಾರದು ಅಪ್ಪಾಜಿ ನಾನು ಹೆಣ್ಣೇ ಇರಬಹುದು. ಆದರೆ ಪ್ರತಾಪರುದ್ರ ಗಜಪತಿಯ ಮಗಳೆಂಬುದನ್ನು ಮರೆಯಬಾರದು. ನನ್ನಲ್ಲಿ ರಾಜಪುತ್ರಿಯ ರಕ್ತ ಹರಿಯುತ್ತಿದೆ. ನನ್ನನ್ನು ಸಾಮಾನ್ಯ ಹೆಣ್ಣೆಂದು ತಿಳಿದು ಕೈಮಾಡಲು ಆ ರಾಯನು ಬಂದುದಾದರೆ, ಅವನ ಸಾವು ಸನ್ನಿಹಿತವಾಯಿತೆಂದೇ ತಿಳಿಯಿರಿ. ನಾನು ಕ್ಷತ್ರಿಯ ರಮಣಿ, ಸಾವಿಗಂಜುವವಳಲ್ಲ. ನೀವು ಅಪ್ಪಣೆ ಕೊಟ್ಟರೆ, ನಾನೂ ಯುದ್ಧರಂಗಕ್ಕೆ

ಪ್ರವೇಶಿಸಿ, ಯುದ್ಧಮಾಡುತ್ತೇನೆ. ಕ್ಷತ್ರಿಯ ರಮಣಿಯ ಕೈವಾಡವೇನೆಂದು ಆ ರಾಯನಿಗೆ ತೋರಿಸಿಕೊಡುತ್ತೇನೆ.

"ಆದರೆ ನೀವು, ಹೆಣ್ಣಾಗಿ ಹುಟ್ಟಿದ ತಪ್ಪಿಗೆ ನನ್ನನ್ನು ಅರಮನೆಯ ಅಂತಃಪುರದಲ್ಲಿ ಸೆರೆಯಲ್ಲಿಟ್ಟದ್ದೀರಿ. ನಾನು ಗಂಡಾಗಿ ಹುಟ್ಟಿದ್ದರೆ, ನನ್ನ ಕಾರಣದಿಂದ ಇಷ್ಟೆಲ್ಲ ವಿಪತ್ಪರಂಪರೆಗಳು ಒದಗುತ್ತಿರಲಿಲ್ಲ. ಆಗ ನಾನೂ ಯುವರಾಜಕುಮಾರನಂತೆ ಕೈಯ್ಯಲ್ಲಿ ಕತ್ತಿ ಹಿರಿದು ಶತ್ರುಗಳ ಮೇಲೆ ಯುದ್ಧಮಾಡುಬಹುದಿತ್ತು. ಆದರೆ ನಮ್ಮನ್ನು ಅಬಲೆ ಎಂದು ಕರೆದು ನಮ್ಮ ಬಲವನ್ನೆಲ್ಲಾ ನಿರರ್ಥಕಗೊಳಿಸಿದ್ದೀರಿ. ಈಗಲೂ ನನಗೆ ಯುದ್ಧರಂಗಕ್ಕೆ ಹೊರಡಲು ಅನುಮತಿ ಕೊಡಿ, ಸಾಕು. ಆ ಧೂರ್ತ ರಾಯನಿಗೆ ನಾನು ರೂಪದಲ್ಲಿ ಜಗನ್ಮೋಹಿನಿ ಮಾತ್ರವೇ ಅಲ್ಲ, ಸಮರದಲ್ಲಿ ಮಹಾಕಾಳಿ ಎಂಬುದನ್ನು ತೋರಿಸಿಕೊಡುತ್ತೇನೆ. ನೀವು ನನ್ನ ರಕ್ಷಣೆಯ ಬಗ್ಗೆ ಲವಲೇಶವಾದರೂ ಚಿಂತಿಸಬಾರದು. ಎಲ್ಲರನ್ನೂ ಕಾಯುವ ಜಗದ್ರಕ್ಷಕ ಜಗನ್ನಾಥನು ಇರುವಾಗ ನೀವೇಕೆ ಚಿಂತಿಸುತ್ತೀರಿ ಅಪ್ಪಾಜೀ" ಎಂದು ನಮ್ರಳಾಗಿ ಹೇಳಿದಳು ಜಗನ್ಮೋಹಿನಿ.

ಜಗನ್ಮೋಹಿನಿಯ ಮಾತು ಕೇಳಿ ಗಜಪತಿಯು ನೊಂದ ಹೃದಯಕ್ಕೆ ಏಷ್ಟೋ ತಂಪಾಯಿತು. ಜಗನ್ಮೋಹಿನಿಯು ಸಾಮಾನ್ಯ ಹೆಣ್ಣಿನಂತೆ ಮಾತನಾಡದೆ ಅವಳು ಕ್ಷತ್ರಿಯ ರಮಣಿಗೊಪ್ಪುವ ರೀತಿಯಲ್ಲಿ ಮಾತನಾಡಿದ್ದುದನ್ನು ಕೇಳಿ ಗಜಪತಿಯ ಮನಸ್ಸಿಗೆ ಎಷ್ಟೋ ಸಂತೋಷವಾಯಿತು. ಅವನ ಮೇಲಿದ್ದ ದೊಡ್ಡ ಹೊರೆ ಕೆಳಗೆ ಇಳಿಸಿದಂತೆ ಆಯಿತು. "ನಿಜಕ್ಕೂ ಜಗನ್ಮೋಹಿನಿ ತಮ್ಮ ಹೆಮ್ಮೆಯ ಮಗಳೇ !"ಎನ್ನುವ ಉದ್ಗಾರ ತೆಗೆದ ಗಜಪತಿ, ಅವಳು ಅಲ್ಲಿಂದ ಹೊರಟುಹೋದಮೇಲೆ ಅವನ ಮುಖದಲ್ಲಿ ಒಂದು ಬಗೆಯ ತೃಪ್ತಿಯ ನಗೆ ಕಾಣಿಸಿಕೊಂಡಿತು.

೯

ಗಜಪತಿಯು ಜಗನ್ಮೋಹಿನಿಯೊಂದಿಗೆ ಮಾತನಾಡುತ್ತಾ ಕುಳಿತಿದ್ದನು. ಚಾರನೊಬ್ಬನು ಕಾಣಿಸಿಕೊಂಡು, ಒಬ್ಬ ಸನ್ಯಾಸಿಯು ಗಜಪತಿಯನ್ನು ನೋಡಲು ಬಂದಿರುವುದಾಗಿಯೂ, ಅಪ್ಪಣೆಯಾದರೆ ಕರೆತರುವುದಾಗಿಯೂ ತಿಳಿಸಿದನು. ಈ ವೇಳೆಯಲ್ಲಿ ತನ್ನನ್ನು ನೋಡಲು ಅದಾವ ಸನ್ಯಾಸಿಯು ಬಂದಿರುವನೆಂದು ನೋಡಲು, ಅವನನ್ನು ಕೂಡಲೇ ತನ್ನ ಬಳಿಗೆ ಕರೆದುಕೊಂಡು ಬರಲು ಗಜಪತಿಯು ತಿಳಿಸಿದನು.

ರಾಜದೂತನು ಒಬ್ಬ ತರುಣ ಸನ್ಯಾಸಿಯನ್ನು ಕರೆತಂದು ಪ್ರತಾಪರುದ್ರ ಗಜಪತಿಯ ಎದುರಿನಲ್ಲಿ ನಿಲ್ಲಿಸಿ, ಅಲ್ಲಿಂದ ಹೊರಟುಹೋದನು.

ಗಜಪತಿ ಹಾಗೂ ಜಗನ್ಮೋಹಿನಿಯರು ಆ ಸನ್ಯಾಸಿಯನ್ನು ಎವೆಯಿಕ್ಕದೆ ನೋಡಿದರು. ಆಜಾನುಬಾಹುವಾದ ತೇಜಸ್ವಿಯಾದ ಆ ಸನ್ಯಾಸಿಯು ಅವರ ಗಮನವನ್ನು ಸೆರೆಹಿಡಿದನು. ದೀರ್ಘವಾದ ಗಡ್ಡದಿಂದ ಶೋಭಿಸುತ್ತಿದ್ದ, ಕಾಷಾಯ ವಸ್ತ್ರಧಾರಿಯಾಗಿದ್ದ ಆ ಸನ್ಯಾಸಿಯು ಅವರಿಗೆ ಕುತೂಹಲ ಕೆರಳಿಸಿದನು. ಅವನ ಮುಖದಲ್ಲಿ ಹೊಳೆಯುತ್ತಿದ್ದ ಕಣ್ಣುಗಳನ್ನು ಅವರು ಎಲ್ಲೋ ನೋಡಿದ ನೆನಪಾಯಿತು. ಅವನ ವಿಶಾಲವಾದ ಲಲಾಟ ಪ್ರದೇಶವನ್ನೂ, ಯೋಧನಿಗೊಪ್ಪುವ ಮೈಕಟ್ಟಿನಿಂದ ಶೋಭಿಸುತ್ತಿದ್ದ ಆ ಯುವಕನ ನಿಲುವನ್ನು ನೋಡಿದರೆ, ಅವರಿಗೆ ಅವನನ್ನು ಎಲ್ಲೋ ನೋಡಿದ್ದ ನೆನಪಾಗುತ್ತಿತ್ತು. ಆದರೆ ಎಲ್ಲಿ ಎಂಬುದು ಮಾತ್ರ ಎಷ್ಟು ಆಲೋಚಿಸಿದರೂ ತಲೆಗೆ ಹೊಳೆಯಲಿಲ್ಲ.

" ಮಹಾಪ್ರಭುಗಳಿಗೆ ಜಯವಾಗಲಿ ! "

ಆ ಧ್ವನಿಯಲ್ಲೂ ಪರಿಚಿತಭಾವವಿತ್ತು ; ಗಜಪತಿ ಬೆರಗಾಗಿ ನಿಂತು ಆ ಸನ್ಯಾಸಿಯನ್ನು ನೋಡುತ್ತಾ ಹೇಳಿದ.

" ತಮ್ಮನ್ನು ನೋಡದರೆ, ಮಹಾತ್ಮರಂತೆ ಕಾಣುತ್ತಿದ್ದೀರಿ. ತಾವು ದಯಮಾಡಿಸಬೇಕು........ತಮ್ಮ ಪಾದಧೂಳಿಯಿಂದ ನಮ್ಮ ಅರಮನೆ ಪವಿತ್ರವಾಯಿತು. ತಾವು ಈ ಆಸನದಲ್ಲಿ ಕೂತುಕೊಳ್ಳೋಣವಾಗಲಿ. ಎಂದು ಬಿನ್ನವಿಸಿಕೊಂಡ. ಆದರಂತೆ ಆ ಸನ್ಯಾಸಿಯು ತನಗೆ ತೋರಿಸಿದ ಪೀಠದಲ್ಲಿ ಮಂಡಿಸಿ, ಗಜಪತಿಯನ್ನು ಮುಗುಳ್ನಗೆಯಿಂದ ನೋಡುತ್ತಾ ಕುಳಿತ.

" ತಮ್ಮನ್ನು ನೋಡಿದರೆ ತಾವು ತುಂಬಾ ಮಹಿಮರಂತೆ ಕಾಣುತ್ತದೆ ತಾವು ಯಾರೆಂದು ಅಪ್ಪಣೆ ಕೊಡಿಸಬೇಕು ! "

ಈ ಮಾತು ಕೇಳಿ ಬಳಿಯಲ್ಲೇ ಇದ್ದ ಜಗನ್ಮೋಹಿನಿ ಬಿದ್ದು ಬಿದ್ದು ನಗಲು ತೊಡಗಿದಳು. ಇದ್ದಕ್ಕಿದ್ದಂತೆ ನಗಲು ತೊಡಗಿದ ಜಗನ್ಮೋಹಿನಿಯನ್ನು ನೋಡಿ, ಗಜಪತಿಗೆ ಒಂದುಬಗೆಯ ಅಸಮಾಧಾನ ಉಂಟಾಯಿತು.

" ಮಗೂ, ತಪಸ್ವಿಗಳ ಎದುರಿನಲ್ಲಿ ಹಾಗೆಲ್ಲ ನಗಬಾರದು ! " ಎಂದನು ಗಂಭೀರವಾಗಿ. ಆದರೂ ಜಗನ್ಮೋಹಿನಿ ನಗುವುದನ್ನು ನಿಲ್ಲಿಸಲಿಲ್ಲ. ' ಅವರು ಒಳ್ಳೇ ತಪಸ್ವಿಗಳು, ನೀವು ಒಳ್ಳೇ ಶಿಷ್ಯರು. ಚೆನ್ನಾಗಿದೆ ಎಂದಳು ಪರಿಹಾಸ್ಯಮಾಡುವ ಧ್ವನಿಯಲ್ಲಿ.

" ತಪಸ್ವಿಗಳ ಬಗ್ಗೆ ಹಾಗೆಲ್ಲ ಹಗುರವಾಗಿ ಮಾತನಾಡಬಾರದು ಮಗು. ಇದು ನಮಗೆ ಶ್ರೇಯಸ್ಕರವಲ್ಲ ! "

" ಅವರು ಇಲ್ಲಿಗೆ ಬಂದಿರುವುದು ನಮ್ಮ ಶ್ರೇಯಸ್ಕರಕ್ಕಾಗಿಯೇ ಅಪ್ಪಾಜಿ ! ನೋಡೋಣ ಹೇಳಿ ಅವರು ಯಾರು ? ಎಲ್ಲಿಯವರು ? ಅವರಬಗ್ಗೆ ನಿಮಗೇನಾದರೂ ತಿಳಿದಿದ್ದರೆ ಹೇಳಿ ನೋಡೋಣ ! "

ಎಂದಳು ನಗುತ್ತಲೇ ಜಗನ್ಮೋಹಿನಿ.

" ಅವರು........ಅವರು........ಯಾರೋ ಮಹಾತ್ಮರು. ಎಲ್ಲೋ ನೋಡಿರುವ ನೆನಪು ! ಎಲ್ಲಿ ಎಂದು ಮಾತ್ರ ಹೊಳೆಯುತ್ತಿಲ್ಲ ! "

" ಅಪ್ಪಾಜಿ, ಈಚಿನದಿನಗಳಲ್ಲಿ ನೀವು ಚಿಂತಿಸಿ, ಚಿಂತಿಸಿ ಅಕಾರಣ

ವಾಗಿ ಕಣ್ಣೀರು ಸುರಿಸಿ, ಕಣ್ಣು ನೋಟವನ್ನೇ ಕಳೆದುಕೊಂಡಿದ್ದೀರಿ ಎನ್ನಲು ಇದೇ ಸಾಕ್ಷಿ. ನಿಮ್ಮ ಕಣ್ಣಿಗೆ ಪಾಪ ಕಾವಿಯುಟ್ಟವರೆಲ್ಲ ಸನ್ಯಾಸಿಗಳಾಗಿ ಕಾಣುತ್ತಾರೆ, ಕತ್ತಿ ಹಿರಿದವರೆಲ್ಲರೂ ವೀರರಾಗಿಯೇ ಕಾಣುತ್ತಾರೆ ಅಲ್ಲವೇ, ಅಪ್ಪಾಜಿ?''

ಈ ಮಾತಿನಿಂದ ಗಜಪತಿಯು ಕಸಿವಿಸಿಗೊಂಡು ಮಗಳ ಮುಖವನ್ನೊಮ್ಮೆ ಆ ಸನ್ಯಾಸಿಯ ಮುಖವನ್ನೊಮ್ಮೆ ನೋಡಲು ತೊಡಗಿದ. ಅವರಿಬ್ಬರೂ ನಸುನಗುತ್ತಿದ್ದುದರಿಂದ ಇದರ ಅರ್ಥವೇನೆಂದು ಗಜಪತಿಗೆ ಆಗಲೇ ಇಲ್ಲ. "ಅಪ್ಪಾಜಿ, ನಿಮಗೆ ಇನ್ನೂ ತಿಳಿಯಲಿಲ್ಲವೆ? ಈ ಸನ್ಯಾಸಿಯು ಯಾರೆಂದು ಇನ್ನೂ ಗೊತ್ತಾಗಲಿಲ್ಲವೆ? ಆ ಸನ್ಯಾಸಿಯ ಮುಖವನ್ನು ನೋಡಿ—ಅವರು ಮಹಾತ್ಮರೋ, ಮಹಾತ್ಮರ ಸೋಗುಹಾಕಿ ಬಂದಿರುವ ಗೂಢಚಾರರೋ ನಿಮಗೆ ತಿಳಿಯುತ್ತದೆ. ಮೊದಲು ಅವರ ಕೃತಕ ಗಡ್ಡಮೀಸೆಗಳನ್ನು ಕಿತ್ತುಹಾಕಿ!"

ಈ ಮಾತು ಜಗನ್ಮೋಹಿನಿಯು ಹೇಳುತ್ತಿದ್ದಂತೆ, ಆ ಸನ್ಯಾಸಿಯು ತನ್ನ ಗಡ್ಡದಮೇಲೆ ಕೈಯಾಡಿಸಿದ. ಕೃತಕ ಮೀಸೆ, ತಲೆಗೂದಲುಗಳೂ ಕೈಗೆ ಬಂತು. ಆಗ ಗಜಪತಿ ನೋಡುತ್ತಾನೆ. ತನ್ನ ಎದುರಿಗೆ ಸನ್ಯಾಸಿಯ ಸೋಗಿನಲ್ಲಿ ನಿಂತವನು ಬೇರಾರೂ ಆಗಿರದೆ ತನ್ನ ನೆಚ್ಚಿನ, ಹೆಮ್ಮೆಯ ಸಾಕುಪುತ್ರ ನರಹರಿಪಾತ್ರ! ಅವನನ್ನು ನೋಡುತ್ತಲೇ ಅವನ ಬಳಿಗೆ ಓಡಿ ಹೋಗಿ ಅವನನ್ನು ಪ್ರೀತಿಯಿಂದ ಆಲಂಗಿಸಿದನು. ಸಂತೋಷದ ಕಣ್ಣೀರು ಇಬ್ಬರಿಗೂ! ಅವರು ಬಹಳಕಾಲದ ನಂತರ ಒಬ್ಬರನ್ನೊಬ್ಬರು ನೋಡಿದ್ದರು. ದೀರ್ಘಕಾಲದ ವಿರಹ ಅವರಿಬ್ಬರನ್ನು ಮತ್ತಷ್ಟು ಹತ್ತಿರಕ್ಕೆ ತಂದಿತ್ತು.

ಸಂತೋಷದ ಉನ್ಮಾದ ಇಳಿದಮೇಲೆ ಗಜಪತಿ ಕೇಳಿದ.

"ಇದೇನು ನರಹರಿ, ನೀನು ಇಲ್ಲಿ? ಇದೇನು ನಿನ್ನ ಅವತಾರ? ಇಲ್ಲಿಗೆ ನೀನು ಯಾವಾಗ ಬಂದಿ? ಏನು ಸಮಾಚಾರ?" ಎಂದು ಒಮ್ಮೆಲೇ ನಾಲ್ಕಾರು ಪ್ರಶ್ನೆಗಳನ್ನು ಹಾಕಿದನು.

"ಇದು ಹೀಗೆಯೇ........ದೊಡ್ಡ ಕಥೆ. ನಿಮಗೆ ಆಮೇಲೆ ಹೇಳುತ್ತೇನೆ........ಮೊದಲು ನಾನು ಸ್ನಾನಮಾಡಬೇಕು. ಅನಂತರ ಈ ವೇಷ ಬದಲಿಸಬೇಕು"........ಎಂದನು ನರಹರಿ.

ಅವನನ್ನು ಸ್ನಾನಕ್ಕೆ ಎಬ್ಬಿಸಲು ಬಂದ ಜಗನ್ಮೋಹಿನಿ, ಅವನನ್ನು ಕುಚೋದ್ಯಮಾಡಲು ಹೇಳಿದಳು.

"ಅಂತೂ ನೀವು ಅಪ್ಪಾಜಿಯವರಮೇಲೆ ಒಳ್ಳೆಯ ಮಂಕುಬೂದಿಯನ್ನೇ ಹಾಕಿದಿರಿ. ಅವರು ನಿಮ್ಮನ್ನು ನಿಜವಾದ ಸನ್ಯಾಸಿಯೇ ಎಂದು ಭ್ರಮಿಸಿದ್ದರು. ಅಬ್ಬಾ ! ಅದೇನು ನಾಟಕ ನಿಮ್ಮದು ?"

"ಹೌದೇನೂ !" ಎಂದು ಅರ್ಥಪೂರ್ಣವಾಗಿ ನಕ್ಕ ನರಹರಿಪಾತ್ರ.

"ಹೌದು ನರಹರಿ, ನಿನ್ನ ಕಾವಿಯಬಟ್ಟೆಯನ್ನು ನೋಡಿ, ನೀನೊಬ್ಬ ಸನ್ಯಾಸಿ—ಮಹಾಮಹಿಮನಾದ ತಪಸ್ವಿ ಎಂದು ನಾನು ಮೋಸಹೋದೆ. ನಿನ್ನನ್ನು ನೋಡಿದರೆ ಎಂತಹವರೂ ಹಾಗೇ ಮೋಸಹೋಗಲೇಬೇಕು. ನಿನ್ನ ವೇಷ ಅಷ್ಟು ಸಹಜವಾಗಿತ್ತು. ಅಲ್ಲದೆ ಕಾವಿಯುಟ್ಟು ಬಂದವರನ್ನು ಶಂಕಿಸುವುದು ಮಹಾಪಾಪ ! ಕಾವಿ ವೈರಾಗ್ಯದ ಚಿನ್ಹೆ. ಅಂತಲೇ ನಾನು ನಿನ್ನನ್ನು ನಿಜಕ್ಕೂ ಒಬ್ಬ ಸನ್ಯಾಸಿಯೆಂದೇ ಭಾವಿಸಿದೆ........"

ಎಂದು ಗಜಪತಿ ನಡುವೆ ಬಾಯಿಹಾಕಿದ.

"ಅಪ್ಪಾಜಿ, ನೀವು ಬೆಳ್ಳಗಿರುವುದನ್ನೆಲ್ಲಾ ಹಾಲೆಂದು ತಿಳಿದಿರುವುದರಿಂದಲೇ ನಮ್ಮ ಉತ್ಕಲಕ್ಕೆ ಈ ಗಂಡಾಂತರ ಬಂದಿರುವುದು !"

ಎಂದಳು ಜಗನ್ಮೋಹಿನಿ.

"ಅದು ಅಪ್ಪಾಜಿಯವರ ಸಹಜಸ್ವಭಾವ. ಬೆಳ್ಳಗಿರುವುದೆಲ್ಲಾ ಅವರಿಗೆ ಹಾಲಾಗಿಯೇ ಕಾಣುತ್ತದೆ ಒಳ್ಳೆಯ ಮಾತನಾಡುವವರೆಲ್ಲ ಸ್ನೇಹಿತರಾಗಿಯೇ ಕಾಣುತ್ತಾರೆ. ಇದು ಸರಳಮನಸ್ಸಿನ ಅವರ ಸಹಜಗುಣ. ಇದನ್ನು ಸದ್ಗುಣವೆನ್ನಬೇಕೋ ದುರ್ಗುಣವೆನ್ನಬೇಕೋ ನಾನರಿಯೆ. ಆದರೂ ಅವರ ಸರಳತನ, ಸದ್ಗುಣಗಳನ್ನು ದುರುಪಯೋಗಪಡಿಸಿಕೊಳ್ಳುವ ಸ್ವಾರ್ಥಿಗಳು ಇರುವತನಕ ಇದು ಒಂದು ಅವಗುಣವೆಂದೇ ಹೇಳಬೇಕು. ಇದರಿಂದ ಹಾನಿಯೇ ಹೊರತು ವೃದ್ಧಿಯಿಲ್ಲ"

ಎಂದ ನರಹರಿಪಾತ್ರ.

ತಮ್ಮ ಗುಣಾವಗುಣಗಳನ್ನು ತನಗೆ ತುಂಬಾ ಬೇಕಾಗಿದ್ದ ಇಬ್ಬರು ಪ್ರಿಯ ವ್ಯಕ್ತಿಗಳು ಮಾತನಾಡುವುದನ್ನು ಕೇಳಿ ಗಜಪತಿಗೆ ಪ್ರಿಯವೇ ಆಯಿತು. ಆದರೂ ಹೇಳಿದ.

"ನನ್ನ ಗುಣಕಥನ ಅನಂತರ ನಡೆಯಲಿ. ಮೊದಲು ಎಲ್ಲಿಂದ ಬಂದದ್ದು ? ಏನು ಸಮಾಚಾರ ? ಅದನ್ನು ಮೊದಲು ತಿಳಿಸು ?"

"ನಾನು ಸದ್ಯಕ್ಕೆ ಸಿಂಹಾದ್ರಿಯಿಂದ ಬರುತ್ತಿದ್ದೇನೆ. ಇದಕ್ಕೂ ಮೊದಲು ಮಲೆಬೆನ್ನೂರಿನಿಂದ ಸಿಂಹಾದ್ರಿಗೆ ಬಂದೆ—ವಿಜಯನಗರದ ಮಾರ್ಗವಾಗಿ ಇಲ್ಲಿಗೆ ಈಗಷ್ಟೇ ಬಂದೆ ?"

"ನೀನು ವಿಜಯನಗರದ ಅರಮನೆಯಲ್ಲಿರುವ ಯುವರಾಜಕುಮಾರ ನನ್ನು ನೋಡಿದೆಯಾ ? ಮಹಾರಾಣಿಯನ್ನು ನೋಡಿದೆಯಾ ? ಅವರು ಅಲ್ಲಿ ಆರೋಗ್ಯವಾಗಿದ್ದಾರೆಯೇ ? ಅವರ ಕುಶಲವಾರ್ತೆಯನ್ನು ವಿಶದವಾಗಿ ಹೇಳು ?"

"ಯುವರಾಜಕುಮಾರರೂ, ಮಹಾರಾಣಿಯವರೂ ಶತ್ರುವಿನ ಸೆರೆ ಮನೆಯಲ್ಲಿ—ಬಲವಾದ ರಕ್ಷಣೆಯಲ್ಲಿ ಇದ್ದುದರಿಂದ ಅವರನ್ನು ನೋಡಲು ಸಾಧ್ಯವಾಗಲಿಲ್ಲ. ಆದರೂ ಸಂಗ್ರಹಿಸಿಕೊಂಡ ಸುದ್ದಿಯ ಆಧಾರದಮೇಲೆ ಅವರು ಆರೋಗ್ಯವಾಗಿರುವರೆಂದೂ, ಸ್ವಾತಂತ್ರ್ಯವೊಂದನ್ನು ಬಿಟ್ಟು ಮತ್ತೆಲ್ಲಾ ಅನುಕೂಲವನ್ನು ಅವರಿಗೆ ಸೆರೆಮನೆಯಲ್ಲೇ ಒದಗಿಸಿರುವುದಾ ಗಿಯೂ ತಿಳಿಯಿತು." ಈ ವಾರ್ತೆಯನ್ನು ಕೇಳಿ ಗಜಪತಿಗೆ ತುಂಬಾ ಸಂತೋಷವುಂಟಾಯಿತು. ಅವನು ಒಂದು ಸಮಾಧಾನದ ನಿಟ್ಟುಸಿರನ್ನು ಬಿಟ್ಟನು.

"ಅಪ್ಪಾಜಿ, ನೀವು ಯುವರಾಜಕುಮಾರರ ಹಾಗೂ, ಮಹಾರಾಣಿ ಯವರ ಕ್ಷೇಮಸಮಾಚಾರವನ್ನು ವಿಚಾರಿಸಿದಿರಿ; ಆದರೆ, ವೀರಭದ್ರದೇವನ ಕ್ಷೇಮಸಮಾಚಾರ ವಿಚಾರಿಸುವುದನ್ನು ಮರೆತಿರಿ."

ಎಂದು ಎಚ್ಚರಿಸಿದಳು ಜಗನ್ಮೋಹಿನಿ.

ಈ ಮಾತು ಕೇಳಿ ಗಜಪತಿಯು ಮುಖ ಗಂಟಿಕ್ಕಿ ಹೇಳಿದ.

"ಆ ದೇಶದ್ರೋಹಿಯ ಮಾತನ್ನು ನನ್ನೊಡನೆ ಎತ್ತಬೇಡ. ಆ ನೀಚನ ವಿಷಯವೊಂದನ್ನು ಬಿಟ್ಟು ಬೇರೆ ಏನುಬೇಕಾದರೂ ಕೇಳು."

"ನಿಮಗೆ ಅವನಮೇಲೆ ಏಕಿಷ್ಟು ಸಿಟ್ಟು ಅಪ್ಪಾಜಿ ? ನಮ್ಮೆಲ್ಲರಂತೆ, ಅವನೂ ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನಲ್ಲವೆ ?"

ಎಂದಳು ಜಗನ್ಮೋಹಿನಿ.

"ಅವನು ನನ್ನ ಮಗನಲ್ಲ. ನನ್ನ ಹೊಟ್ಟೆಯಲ್ಲಿ ಹುಟ್ಟಿದ— ವೀರಭದ್ರದೇವನೆನ್ನುವ ಮಗನು ಎಂದೋ ತೀರಿಕೊಂಡ. ಈಗ ಇರುವವನು ದೇಶದ್ರೋಹಿಯಾದ, ಕುಲಘಾತುಕನಾದ ವೀರಭದ್ರದೇವ! ಅವನೂ ಕೃಷ್ಣದೇವರಾಯನಂತೆಯೇ, ಉತ್ಕಲದ ಪ್ರಥಮ ಶತ್ರು!''

"ಅಪ್ಪಾಜಿ, ಕರ್ಣಕಠೋರವಾದ ಈ ಮಾತುಗಳನ್ನು ನಾನು ಕೇಳಲಾರೆ. ಈ ಮಾತಿನಿಂದ ನನಗೆ ತುಂಬಾ ವ್ಯಥೆಯುಂಟಾಗುತ್ತಿದೆ. ತಮ್ಮ ಪವಿತ್ರವಾದ ಹೊಟ್ಟೆಯಲ್ಲಿ ಹುಟ್ಟಿದ, ವೀರಭದ್ರದೇವನು ಎಂದಾದರೂ ದೇಶದ್ರೋಹಿಯಾಗಬಲ್ಲನೇ ? ಕುಲಘಾತುಕನಾಗಬಲ್ಲನೇ ? ತಾವು ತಪ್ಪು ಕಲ್ಪನೆಯಿಂದ ಈ ಆರೋಪವನ್ನು ಅವನಮೇಲೆ ಹೊರೆಸುತ್ತಿದ್ದೀರಿ ಅಪ್ಪಾಜಿ. ತಮ್ಮ ಪುತ್ರನೆಂದಿಗೂ ದೇಶದ್ರೋಹಿಯಲ್ಲ! ಎಂದಿಗೂ ಉತ್ಕಲಕ್ಕೆ ಎರಡು ಬಗೆದವನಲ್ಲ! ನನ್ನ ಮಾತನ್ನು ಕೇಳಿ! ನನ್ನಲ್ಲಿ ನಂಬಿಕೆ ಇಡಿ! ತಮಗೆ ವೀರಭದ್ರದೇವನಲ್ಲಿ ಇರಬಹುದಾದ ತಪ್ಪು ಕಲ್ಪನೆಯನ್ನು ಹೊರದೂಡುವ ಸಲುವಾಗಿಯೇ ನಾನು ಇಲ್ಲಿಗೆ ಬಂದುದು........ನನ್ನ ಮಾತನ್ನು ಸಮಾಧಾನಚಿತ್ತದಿಂದ ಆಲಿಸಬೇಕು"

ಎಂದು ಬಡಬಡಿಸಿದನು ನರಹರಿಪಾತ್ರ. ಅವನಿಗೆ ಗಜಪತಿಯ ಬಾಯಲ್ಲಿ ಬಂದ ತನ್ನ ಗೆಳೆಯನ ನಿಂದನೆಯನ್ನು ಕೇಳಲು ಸಾಧ್ಯವಾಗಲಿಲ್ಲ. ಅಂತಲೇ ಆ ಎಲ್ಲಾ ಮಾತನ್ನೂ ಹೇಳಿದ್ದ.

"ವೀರಭದ್ರದೇವನ ವಿಷಯ ನನಗೆ ಚೆನ್ನಾಗಿ ಗೊತ್ತಿದೆ. ಕೊಂಡವೀಡಿನ ರಕ್ಷಣೆಗಾಗಿ ನಾನು ಅವನನ್ನು ನೇಮಿಸಿದ್ದು. ದುರ್ಗದ ಪ್ರಜೆಗಳ ಹಾಗೂ ಸೈನಿಕರ ಭವಿಷ್ಯವನ್ನು ಅವನ ಕೈಯ್ಯಲ್ಲಿ ಇರಿಸಿದ್ದೆ. ತನ್ನ ಪ್ರಾಣವನ್ನಾದರೂ ಒತ್ತೆಯಿಟ್ಟು ದುರ್ಗವನ್ನು ಶತ್ರುಗಳ ಕೈಯ್ಯಿಂದ ರಕ್ಷಿಸುವುದಾಗಿ ಶಪಥಮಾಡಿದ್ದ ಅವನು. ಕಡೆಗೆ ಆದುದೇನು? ಆ ದ್ರೋಹಿ ಪ್ರಾಣದಮೇಲಿನ ಆಸೆಯಿಂದ ದುರ್ಗವನ್ನು ರಾಯನಪಾಲು ಮಾಡಿದ. ಅಷ್ಟೇ ಅಲ್ಲ, ರಾಯನ ಎಂಜಲಿ ಗೆಕೈಯೊಡ್ಡಿದ. ಅವನ ಕೃಪಾಭಿಕ್ಷೆಯನ್ನು ಪಡೆದು ಮಲೆಬೆನ್ನೂರಿನ ಮಾಂಡಲೀಕ್ವರನಾಗಿ ನೇಮಕ ಹೊಂದಿದ. ಉತ್ಕಲದ ಉಪ್ಪುಂಡು ಬೆಳೆದ ಅವನು ಉತ್ಕಲದ ಪರಮಶತ್ರುವಿನ ಎಂಜಲಿಗೆ ಆಸೆಪಟ್ಟು, ತನ್ನನ್ನು ನಂಬಿದವರನ್ನು ಹೇಡಿಯಂತೆ ಕೈಬಿಟ್ಟು,

ಸ್ವಾರ್ಥ ಸಾಧಿಸಿಕೊಂಡ ಆ ನೀಚನ ವಿಷಯ ನನಗೆ ಚನ್ನಾಗಿ ತಿಳಿದಿದೆ. ನೀನು ಏನೂ ಹೇಳಬೇಕಾಗಿಲ್ಲ." ಎಂದು ಗಜಪತಿಯು ಗುಡುಗಿದನು.

"ಅಪ್ಪಾಜಿಯವರು ರಾಜಕುಮಾರ ವೀರಭದ್ರರ ಬಗೆಗೆ ತುಂಬಾ ತಪ್ಪು ತಿಳಿದುಕೊಂಡಿದ್ದಾರೆ. ಅಪ್ಪಾಜಿ, ಜಗನ್ನಾಥನ ಆಣೆ ಇಟ್ಟು ಹೇಳುತ್ತೇನೆ ನನ್ನ ಮಾತನ್ನು ನಂಬಿ. ರಾಜಪುತ್ರರೆಂದಿಗೂ ತಮಗೆ ಎರಡು ಬಗೆದಿಲ್ಲ. ಅವರೆಂದಿಗೂ ಉತ್ಕಲಕ್ಕೆ ದ್ರೋಹಮಾಡಿಲ್ಲ; ಎಂದಿಗೂ ನಂಬಿದವರನ್ನು ಕೈಬಿಟ್ಟು ಸ್ವಾರ್ಥಿಯಾಗಿಲ್ಲ."

"ಗೆಳೆಯನ ಕೃತ್ಯಗಳನ್ನು ಗೆಳೆಯನೇ ಹೊಗಳಬೇಕು. !"

ಗಜಪತಿ ತಿರಸ್ಕಾರದಿಂದ ನುಡಿದ.

"ಇದರಲ್ಲಿ ಯಾವ ಹೊಗಳಿಕೆಯೂ ಇಲ್ಲ ಅಪ್ಪಾಜಿ. ಇರುವ ಸತ್ಯಾಂಶಗಳನ್ನು ತಮ್ಮ ಮುಂದಿಡುತ್ತಿದ್ದೇನೆ ಅಷ್ಟೆ. ಕೊಂಡವೀಡು ಶತ್ರುಗಳಿಗೆ ಹೇಗೆ ವಶವಾಯಿತೆಂಬ ಸಂಗತಿಯನ್ನು, ರಾಜಕುಮಾರರು ಮಲೆಬೆನ್ನೂರಿನ ಮಾಂಡಲೀಕರಾಗಿ ಹೇಗೆ ನೇಮಕರಾದರೆಂಬ ಸಂಗತಿಯನ್ನು ನೀವು ತಿಳಿದಿದ್ದರೆ, ರಾಜಕುಮಾರರನ್ನು ಈಬಗೆಯಲ್ಲಿ ತಿರಸ್ಕಾರದಿಂದ ನೋಡುತ್ತಿರಲಿಲ್ಲ" ಎಂದು ಹೇಳಿ, ಕೊಂಡವೀಡು ಶತ್ರುಗಳಿಗೆ ಬಲಿಯಾದ ಕಥೆ, ವೀರಭದ್ರದೇವನು ಕೃಷ್ಣದೇವರಾಯನನ್ನು ಕೊಲ್ಲಲು ಪ್ರಯತ್ನಿಸಿ, ವಿಫಲನಾಗಿ ಕಡೆಗೆ ರಾಯನಿಂದ ಹೇಗೆ ಸನ್ಮಾನಿಸಲ್ಪಟ್ಟನೆಂಬ ಸಂಗತಿಯನ್ನು ವಿವರವಾಗಿ ಹೇಳಿದನು.

"ನಾವು ಮಲೆಬೆನ್ನೂರಿಗೆ ಹೋದುದರಲ್ಲಿ ಯಾವ ಸ್ವಾರ್ಥವೂ ಇಲ್ಲ ಅಪ್ಪಾಜಿ. ಮಲೆಬೆನ್ನೂರಿನ ಮಾಂಡಲೀಕರಾಗಿದ್ದುಕೊಂಡೇ, ಕೃಷ್ಣದೇವರಾಯನಿಗೆ ಸ್ನೇಹಿತರಂತೆ ನಟಿಸುತ್ತಲೇ, ಅವನಮೇಲಿನ ದ್ವೇಷ ತೀರಿಸಿಕೊಳ್ಳಲು ಈ 'ಸೇವೆಗೆ' ನಾವು ಒಪ್ಪಿ ಅಲ್ಲಿಗೆ ಹೋಗಿರುವುದು. ಅಲ್ಲಿ ಇದ್ದುಕೊಂಡೇ, ರಾಯನ ವಿರುದ್ಧ ಒಳಸಂಚುಮಾಡಿ, ರಾಯನ ಹಿತಶತ್ರುಗಳನ್ನೆಲ್ಲಾ ಕೂಡಿಹಾಕಿ, ದಂಗೆ ಎದ್ದು, ಆಮೂಲಕ ಕೃಷ್ಣದೇವರಾಯನು ಉತ್ಕಲದಿಂದ ಓಡಿಹೋಗುವಂತೆ, ಮಾಡುವುದೇ ನಮ್ಮ ಉದ್ದಿಶ್ಯ. ಈ ಉದ್ದಿಶ್ಯ ಸಾಧನೆಗಾಗಿಯೇ ಕೃಷ್ಣದೇವರಾಯನ ಊಳಿಗಕ್ಕೆ ಸೇರಿಕೊಂಡುದು. ತಂತ್ರದಿಂದ ಉತ್ಕಲವನ್ನು ಆಕ್ರಮಿಸಿಕೊಂಡಿರುವ ರಾಯನನ್ನು

ತಂತ್ರದಿಂದಲೇ ಹಿಮ್ಮೆಟ್ಟಿಸಬೇಕೆಂದು ನಮ್ಮ ಆಸೆ. ನಮ್ಮ ಅಂತರಂಗದ ಈ ಆಶಯಗಳು ರಾಯನಿಗೆ ತಿಳಿದರೆ, ನಮಗೆ ಕೇಡುಂಟಾಗುವುದರಿಂದ, ಅವು ಯಾವ ರೀತಿಯಲ್ಲೂ ಶತ್ರುವಿನ ಕಿವಿಗೆ ಬೀಳದಂತೆ, ಎಚ್ಚರ ವಹಿಸಿದ್ದೇವೆ. ಈ ಕಪಟನಾಟಕಕ್ಕೆ ಬೇಕಾಗುವ ರೀತಿಯಲ್ಲಿ ನಮ್ಮ ವರ್ತನೆ ಇದೆ. ಇದನ್ನು ತಾವು ಅನ್ಯಥಾ ತಿಳಿಯಬಾರದೆಂದೇ, ನಿಮ್ಮಲ್ಲಿಗೆ ನನ್ನನ್ನು ರಾಜಕುಮಾರರು ಕಳುಹಿಸಿದುದು. ಇನ್ನಾದರೂ ರಾಜಕುಮಾರರ ಬಗ್ಗೆ ನಿಮ್ಮಲ್ಲಿ ಅಸಮಾಧಾನ ನಿವಾರಣೆಯಾದರೆ, ನನ್ನ ಪ್ರಯತ್ನ ಸಫಲಗೊಂಡಂತೆ. ಇದರಿಂದ ಮನಸ್ಸಿಗೆ ಎಷ್ಟೋ ನೆಮ್ಮದಿಯುಂಟಾಗುತ್ತದೆ" ಎಂದನು ನರಹರಿಪಾತ್ರ.

"ಹಾಗಾದರೆ ನಿನಗೆ ಈ ಕಾಷಾಯವೇಷವೇಕೆ?"

"ನಾನು ಉತ್ಕಲಕ್ಕೆ ಬಂದುಹೋದ ಸಂಗತಿಯು ಕೃಷ್ಣದೇವರಾಯನ ಕಿವಿಗೆ ಬಿದ್ದರೆ ಪ್ರಮಾದವಾಗುವುದೆಂದು—ಹೀಗೆ ಛದ್ಮವೇಷದಲ್ಲಿ ಬರಬೇಕಾಯಿತು. ಅಲ್ಲದೆ, ಈ ವೇಷದಿಂದ ನಾನು ಸಾಧಿಸಬೇಕಾಗಿದ್ದ ಮಹತ್ಕಾರ್ಯಗಳು ಅನೇಕವಿದ್ದವು. ಮೊದಲು ವಿಜಯನಗರದಲ್ಲಿ ಸೆರೆಮನೆಯಲ್ಲಿ ಇರುವರೆಂದು ಹೇಳಲಾಗಿದ್ದ ಯುವರಾಜಕುಮಾರರ ಹಾಗೂ ಮಹಾರಾಣಿಯವರ ಸಂದರ್ಶನ ತೆಗೆದುಕೊಳ್ಳುವುದು; ಅನಂತರ ಸಿಂಹಾದ್ರಿಯಲ್ಲಿ ಬೀಡುಬಿಟ್ಟ ರಾಯನ ಬಲಾಬಲಗಳನ್ನೂ, ಮುಂದಿನ ಕಾರ್ಯಾಚರಣೆಯನ್ನೂ ತಿಳಿದುಬರುವುದು. ಈ ಮಹತ್ಕಾರ್ಯಸಾಧನೆಗೆ ಈ ಸನ್ಯಾಸಿಯ ವೇಷವೇ ಸರ್ವೋತ್ತಮ. ಈ ವೇಷದಲ್ಲಿ ನೀವೇ ಗುರುತಿಸದ ಮೇಲೆ, ಇನ್ನು ಇತರರ ಪಾಡೇನು?"

ಎಂದು ನಕ್ಕು, ತನ್ನ ಮಾತನ್ನು ಮುಂದುವರೆಸಿದ.

"ಈ ವೇಷದಲ್ಲಿ ನನ್ನನ್ನು ಯಾರೂ ತಡೆಯಲಿಲ್ಲ—ನಾನು ವಿಜಯನಗರದಿಂದ ಸಿಂಹಾದ್ರಿಗೆ ಬಂದೆ. ಅಲ್ಲಿ ನನಗೆ ಬೇಕಾಗಿದ್ದ ಅನೇಕ ಉಪಯುಕ್ತ ಅಂಶಗಳು ದೊರೆತವು. ಅವುಗಳ ಜತೆಗೆ ಮನಸ್ಸಿಗೆ ತುಂಬಾ ವ್ಯಥೆ ಉಂಟುಮಾಡುವ ಒಂದು ಸಂಗತಿಯನ್ನೂ ಕೇಳಿದೆ; ನೋಡಿದೆ.....

ಎಂದು ಹೇಳಿ ತಟ್ಟನೆ ಮಾತುನಿಲ್ಲಿಸಿ ಗಜಪತಿಯ ಮುಖವನ್ನು ನೋಡಿದನು.

"ಮುಂದೆ?........" ಗಜಪತಿ ಕುತೂಹಲಗೊಂಡು ಪ್ರಶ್ನಿಸಿದನು.

"ನಾನು ಯಾವಬಾಯಲ್ಲಿ ಆ ವಾರ್ತೆಯನ್ನು ನಿವೇದಿಸಲಿ ಅಪ್ಪಾಜಿ. ಕೃಷ್ಣದೇವರಾಯನು ಮೇಲಿಂದಮೇಲೆ ದೊರೆತ ವಿಜಯಗಳಿಂದ ಇಷ್ಟು ನೀಚನಾಗಿ, ನಿರ್ಲಜ್ಜೆಯಿಂದ ವರ್ತಿಸುವನೆಂದು ನಾನು ತಿಳಿದಿರಲಿಲ್ಲ. ಅವನು ನಿಮ್ಮಮೇಲಿನ ಸೇಡನ್ನು ಜಗನ್ಮೋಹಿನಿಯಮೇಲೆ ತೀರಿಸಿಕೊಳ್ಳಲು ನಿರ್ಧರಿಸಿ, ಜಗನ್ಮೋಹಿನಿಯನ್ನು ತನ್ನ ಕುದುರೆಯ ಲಾಳ ಹೊಡೆಯುವ ಕಮ್ಮಾರನಿಗೆ ಕೊಟ್ಟು ಮದುವೆ ಮಾಡುವುದಾಗಿ ಶಪಥ ಮಾಡಿದ್ದಾನಂತೆ! ಅದನ್ನೇ ಶಿಲಾಲೇಖನವಾಗಿ ಕೊರೆಸಿ, ಸಿಂಹಾದ್ರಿಯ ನರಸಿಂಹಸ್ವಾಮಿಯ ದೇಗುಲದ ಬಳಿ ನೆಡಸಿದ್ದಾನೆ! ಇದು ರಾಯನು ಜಗನ್ಮೋಹಿನಿಗೆ ಮಾತ್ರ ಮಾಡಿದ ಅಪಮಾನವಲ್ಲ! ಉತ್ಕಲದ ಸ್ತ್ರೀ ಸಮುದಾಯಕ್ಕೆ ಮಾಡಿರುವ ಅಪಚಾರ! ಆ ಶಿಲಾಲೇಖನವನ್ನು ಓದಿ ಮೈ ಉರಿಯಿತು. ಅದನ್ನು ಅಲ್ಲಿಯೇ ಅಳಸಿಬರಬೇಕೆನಿಸಿತು. ಆದರೆ, ದುಡುಕಬಾರದೆಂದು ಸುಮ್ಮನಾದೆ. ಈಗ ನಾವು ಮಾಡಬೇಕಾಗಿರುವ ಪ್ರಪ್ರಥಮ ಕಾರ್ಯವೆಂದರೆ, ಉತ್ಕಲದ ಮಾನಸಂರಕ್ಷಣೆ. ಆ ದುರುಳ ರಾಯನು ಕೆತ್ತಿಸಿರುವ ಶಿಲಾಸ್ತಂಭವನ್ನು ಅಳಸಿ, ಉತ್ಕಲದ ವೀರರು ರಣಹೇಡಿಗಳಲ್ಲ ಎಂಬುದನ್ನು ತೋರಿಸಬೇಕು. ಇದನ್ನು ನಾವು ಮೊದಲು ಮಾಡದೇ ಹೋದರೆ ಆ ರಾಯನು ನಮ್ಮನ್ನು ಹುಲ್ಲುಕಡ್ಡಿಗೂ ಕಡೆಯಾಗಿ ಕಾಣುತ್ತಾನೆ. ಹೀಗೆ ಅಪಮಾನಿತರಾಗಿ ಬದುಕುವುದಕ್ಕಿಂತಲೂ, ಅಪಮಾನವನ್ನು ತೊಡೆದುಹಾಕುವ ಪವಿತ್ರಕಾರ್ಯದಲ್ಲಿ ಮಡಿಯುವುದು ಸಾವಿರ ಪಾಲು ಲೇಸು ಅಪ್ಪಾಜಿ. ನೀವು ನನಗೆ ಅಪ್ಪಣೆಯನ್ನು ಕೊಡಿ, ನನಗೆ ಕೆಲವೇ ಭಟರನ್ನು ಕೊಡಿ ಆ ಶಿಲಾಬರಹಕ್ಕೆ ಮಸಿ ಬಳಿದು ಬರುತ್ತೇನೆ. ಅಂತೆಯೇ ರಾಯನ ಮುಖಕ್ಕೂ ಮಸಿ ಬಳಿದು ಬರುತ್ತೇನೆ. ಉತ್ಕಲ ಪುತ್ರರ ಕ್ಷಾತ್ರ ತೇಜದ ಕಲ್ಪನೆಯಾದರೂ ರಾಯನಿಗೆ ಬರಲಿ!"

ಈ ಮಾತಿಗೆ ಗಜಪತಿಯು ತಥಾಸ್ತು ಎನ್ನದೇಯಿರಲು ಸಾಧ್ಯವಾಗಲಿಲ್ಲ. ಅವನು ಈ ಉದ್ಯಮದಲ್ಲಿ ನರಹರಿಗೆ ಜಗನ್ನಾಥನ ಪೂರ್ಣ ಯಶಸ್ಸು ದೊರಕಿಸಿಕೊಡಲೆಂದು ಪ್ರಾರ್ಥಿಸಿನು.

ಮೂವರೂ ಒಂದುಕ್ಷಣ ಮೌನವಾಗಿ ಕುಳಿತರು.

ಗಜಪತಿಯು ಥಟ್ಟನೆ ಎಚ್ಚೆತ್ತುಕೊಂಡವನಂತೆ ಹೇಳಿದ.

"ಅಮ್ಮಾ ಜಗನ್ಮೋಹಿನಿ! ಇದೇನು ಹಗಲುಹೊತ್ತಿನಲ್ಲೇ ಈ ನಿದ್ರೆ! ಹಗಲಿರುವಾಗಲೇ ನೀನು ಹೀಗೆ ಮೈಮರೆತರೆ ಹೇಗೆ ಮಗು? ಏಳಮ್ಮ ಏಳು!" ಎಂದು ಮಗಳನ್ನು ಎಚ್ಚರಿಸಿದನು—ಮೈಮರೆತು ನಿಂತಿದ್ದ ಮಗಳನ್ನು ನೋಡಿ.

"ಅಪ್ಪಾಜಿ ನಾನು ಎಚ್ಚರವಾಗಿಯೇ ಇದ್ದೇನೆ........"

"ನೀನು ಎಚ್ಚರವಾಗಿರುವೆಯೋ, ಮಲಗಿ ನಿದ್ರಿಸುತ್ತಿರುವೆಯೋ ಅದನ್ನು ಹೇಳಬೇಕಾದವಳು ನೀನಲ್ಲ, ನಾವು. ನೀನು ನಿದ್ರಿಸುತ್ತ ನಿಂತಿರುವುದಕ್ಕೆ ಇದಕ್ಕಿಂತಲೂ ಬೇರೆ ನಿದರ್ಶನ ಬೇಕೆ? ಪಾಪ ನರಹರಿ ಎಷ್ಟು ಆಯಾಸಗೊಂಡುಬಂದಿದ್ದನೋ. ಮೊದಲು ಸ್ನಾನ, ಊಟಗಳಿಗೆ ವ್ಯವಸ್ಥೆಮಾಡುವುದು ಬಿಟ್ಟು, ಹೀಗೆ ಕನಸು ಕಾಣುತ್ತಾ ನಿಂತರೆ ಹೇಗೆ ಮಗು. ಇದನ್ನೂ ನಾನು ನಿನಗೆ ಹೇಳಿಕೊಡಬೇಕೆ—ಈ ಹೆಂಗಸರ ಸೂಕ್ಷ್ಮವನ್ನು! ನೀನು ದೊಡ್ಡವಳಾಗಿದ್ದಿ ನಿಜ. ನಿನ್ನ ದೇಹ ಬೆಳೆದಿದೆಯೇ ಹೊರತು, ನಿನ್ನ ಬುದ್ಧಿ ಬೆಳೆದಿಲ್ಲ. ನೀನು ಇನ್ನೂ ಮಗುವಿನಂತೆಯೇ ಇದ್ದಿ. ನಿನ್ನ ಭಾವಿ ಗಂಡನಿಗೆ ಹೇಗೆ ಉಪಚಾರ ಮಾಡಬೇಕೆಂಬುದನ್ನು ನಾನು ಹೇಳಿಕೊಡಬೇಕೆ?" ಎಂದು ನಗೆಯಾಡಿದನು.

"ಹೋಗಿ ಅಪ್ಪಾಜಿ, ನಿಮಗೆ ಯಾವಾಗಲೂ ತಮಾಷೆ!" ಎಂದಳು ಜಗನ್ಮೋಹಿನಿ. ಗಜಪತಿಯ ಬಾಯಿಂದ ಬಂದ 'ಭಾವಿ ಗಂಡ' ನೆಂಬ ಮಾತನ್ನು ಕೇಳಿ, ಅವಳ ಮುಖ ಲಜ್ಜೆಯಿಂದ ಕೆಂಪಾಯಿತು. ಮೊದಲೇ ಕೆಂಪಾಗಿದ್ದ ಅವಳ ಮುಖ ಓಕುಳಿ ಎರಚಿದಂತೆ ಮತ್ತಷ್ಟು ಕೆಂಪಾಯಿತು. ಅವಳು ತಂದೆಯಮೇಲೆ ಹುಸಿ ಮುನಿಸುಮಾಡಿಕೊಂಡು, ಅಲ್ಲಿಂದ ಹೊರಟುಹೋದಳು.

ನರಹರಿಯೂ ಅವಳನ್ನು ಮಾತಿಲ್ಲದೆ ಹಿಂಬಾಲಿಸಿದ.

ಅವರು ಹೋಗುವುದನ್ನೇ ನೋಡುತ್ತಿದ್ದ ಗಜಪತಿ, ಅವರು ಕಣ್ಮರೆ

ಯಾದಮೇಲೆ "ದೇವರು ನನ್ನ ಅನೇಕ ಆಸೆಗಳನ್ನು ಈಡೇರಿಸದೆ ಇದ್ದರೂ ಚಿಂತೆಯಿಲ್ಲ ಇದೊಂದು ಆಸೆಯನ್ನು ಈಡೇರಿಸಿಬಿಟ್ಟರೆ ನಾನು ಧನ್ಯ" ಎಂದು ತನ್ನಲ್ಲೇ ಉದ್ಗಾರ ತೆಗೆದನು. ಉದ್ಗಾರದ ಹಿಂದೆಯೇ ಅವನ ಚಿತ್ತ ಭಿತ್ತಿಯಲ್ಲಿ ಆ ಹಿಂದಿನ—ಅಂದಿನ—ಆ ದಿನದ ನೆನಪು ಹಿಂಬಾಲಿಸಿತು.

# ೧೦

ಪ್ರತಾಪರುದ್ರ ಗಜಪತಿ ರಾಮಚಂದ್ರದೇವ ಮತ್ತು ವೀರಭದ್ರದೇವನನ್ನು ತನ್ನ ಎರಡು ಕಣ್ಣುಗಳೆಂದೂ ನರಹರಿಪಾತ್ರನನ್ನು ಮೂರನೆಯ ಕಣ್ಣೆಂದೂ ತಿಳಿದಿದ್ದನು. ನರಹರಿಪಾತ್ರನು ಗಜಪತಿಯ ಸ್ವಂತಮಗನಲ್ಲದಿದ್ದರೂ, ಯಾವರೀತಿಯಲ್ಲೂ ಅವನು ಬೇರೆ ಎಂದು ಗಜಪತಿಯು ತಿಳಿದಿರಲಿಲ್ಲ. ಬಾಲ್ಯದಲ್ಲಿಯೇ ತಂದೆ ತಾಯಿಯರನ್ನು ಕಳೆದುಕೊಂಡು ತಬ್ಬಲಿಯಾಗಿದ್ದ ಅವನಿಗೆ ಗಜಪತಿಯೇ ತಂದೆಯಾಗಿದ್ದನು. ಅವರ ಆಶ್ರಯದಲ್ಲಿಯೇ ನರಹರಿಯು ಬೆಳೆದು ದೊಡ್ಡವನಾಗಿದ್ದುದು. ತನ್ನಮಗ ವೀರಭದ್ರದೇವನ ಸಮ ವಯಸ್ಕನಾಗಿದ್ದ ನರಹರಿಪಾತ್ರನನ್ನು ಅರಮನೆಯಲ್ಲಿಯೇ ಇರಿಸಿಕೊಂಡು, ಕ್ಷತ್ರಿಯಪುತ್ರರಿಗೊಪ್ಪುವ ಎಲ್ಲ ವಿದ್ಯೆಗಳಲ್ಲಿ ಅವರನ್ನು ಪಾರಂಗತರನ್ನಾಗಿ ಮಾಡಿದ್ದನು. ಬಾಲ್ಯದಿಂದಲೂ ಒಟ್ಟಿಗೆ ಬೆಳೆದಿದ್ದ ಅವರು ಅಣ್ಣತಮ್ಮಂದಿರಂತೆ ಒಬ್ಬರನ್ನೊಬ್ಬರು ಒಂದು ನಿಮಿಷ ಕಾಲ ಬಿಟ್ಟಿರುತ್ತಿರಲಿಲ್ಲ. ಅವರ ಸೋದರವಾತ್ಸಲ್ಯವನ್ನೂ, ಆದರ್ಶ ಗೆಳೆತನವನ್ನೂ, ಕಂಡ ಗಜಪತಿಗೆ ಹೆಮ್ಮೆಯುಂಟಾಗುತ್ತಿತ್ತು. ಅಂತಲೇ ಅವರಿಬ್ಬರ ಮಾತು ಬಂದಾಗ ಗಜಪತಿಯು ಹೇಳುತ್ತಿದ್ದ. 'ಅವರಿಬ್ಬರು ಉತ್ಕಲದ ಧವಳಕೀರ್ತಿಯನ್ನು ಬೆಳಗುವ ಸೂರ್ಯಚಂದ್ರರು. ಗಜಪತಿಯ ಈ ಹೆಮ್ಮೆಗೆ ಅವರು ಎಲ್ಲಾ ರೀತಿಯಲ್ಲೂ ತಕ್ಕವರಾಗಿದ್ದರು.

ನರಹರಿಪಾತ್ರನ ತಂದೆ ಕುಮಾರ ಹೆಮ್ಮೀರ ಮಹಾಪಾತ್ರ ತೀರಿಕೊಳ್ಳುವಾಗ ನರಹರಿಗಿನ್ನೂ ಆರುವರ್ಷ ಕೂಡಾ ತುಂಬಿರಲಿಲ್ಲ. ಮಹಾ

ಪ್ರತಾಪಶಾಲಿಯಾದ ಅವನು ತನ್ನ ಸ್ವಶಕ್ತಿಸಾಮರ್ಥ್ಯಗಳಿಂದ ಮುಂದೆ ಬಂದು, ಉತ್ಕಲದ ಗಜಪತಿಗಳ ಪ್ರೀತಿವಿಶ್ವಾಸಗಳಿಗೆ ಪಾತ್ರನಾಗಿದ್ದನು. ಅವನು ಪುರುಷೋತ್ತಮ ಗಜಪತಿಯ ಬಲಗೈಯ್ಯಂತೆ ಇದ್ದನು. ಸಾಹಸಿಯೂ ವೀರನೂ ಸದ್ಗುಣಶಾಲಿಯೂ ಸುಂದರನೂ ಆಗಿದ್ದ ಅವನನ್ನು ತನ್ನ ಸಾಮಂತರಲ್ಲೆಲ್ಲಾ ಒಂದು ರತ್ನವೆಂದು ತಿಳಿದಿದ್ದನು. ತನ್ನ ಅಭಿಮಾನಕ್ಕೆ ಪಾತ್ರನಾಗಿದ್ದ ಹೆಮ್ಮೀರಪಾತ್ರನನ್ನು ಯೋಗ್ಯರೀತಿಯಲ್ಲಿ ಪುರಸ್ಕರಿಸಲು ತನ್ನ ಮಗಳಾದ ಮಹಾದೇವಿಯನ್ನು ಅವನಿಗೆ ಕೊಟ್ಟು ಮದುವೆ ಮಾಡಿದ್ದನು. ಆ ದಂಪತಿಗಳ ಹೊಟ್ಟೆಯಲ್ಲಿ ಹುಟ್ಟಿದ ಏಕಮಾತ್ರ ಪುತ್ರನೇ ನರಹರಿಪಾತ್ರ. ತನ್ನ ಮಗನನ್ನೂ ತನ್ನಂತೆಯೇ ವೀರಪುರುಷನನ್ನಾಗಿ, ಉತ್ಕಲದ ಹೆಮ್ಮೆಯ ಪುತ್ರನನ್ನಾಗಿ ಮಾಡಿ ಆ ಮೂಲಕ ತಾಯ್ನಾಡಿನ ಋಣವನ್ನು ತೀರಿಸಬೇಕೆಂದು ಕನಸುಕಾಣುತ್ತಿದ್ದ ಹೆಮ್ಮೀರ ಮಹಾಪಾತ್ರನು ತನ್ನ ಕನಸು ನನಸಾಗುವ ಮೊದಲೇ ಇಹಲೋಕವನ್ನು ತ್ಯಜಿಸಬೇಕಾಯಿತು. ಅದೂ ವಿಚಿತ್ರರೀತಿಯಲ್ಲಿ, ಅನಿರೀಕ್ಷಿತವಾಗಿ. ತನ್ನ ಮಕ್ಕಳಂತೆ ಇದ್ದ ಪ್ರಜಾಕೋಟಿಗೆ ಉಪಟಳವನ್ನು ಕೊಡುತ್ತಿದ್ದ ಒಂದು ಹೆಬ್ಬುಲಿಯನ್ನು ಬೇಟೆಯಾಡಲು ಹೋಗಿ ಆ ಮೂಲಕ ಮೃತ್ಯುವನ್ನಪ್ಪಿದ ಹುತಾತ್ಮ ಅವನು. ಅವನು ಎಂತಹ ವೀರನೆಂಬುದಕ್ಕೆ ಅವನು ಸತ್ತ ರೀತಿಯೇ ನಿದರ್ಶನ.

ಹೆಮ್ಮೀರನು ಆಳುತ್ತಿದ್ದ ಪ್ರಾಂತ್ಯದಲ್ಲಿ, ಒಂದು ಬೆಟ್ಟದ ಕಿಬ್ಬಿಯಲ್ಲಿ ಒಂದು ಹೆಬ್ಬುಲಿಯು ವಾಸಮಾಡುತ್ತಿತ್ತು. ಅದು ಆಗಾಗ್ಗೆ, ಅಕ್ಕಪಕ್ಕದ ಊರುಗಳಿಗೆ ನುಗ್ಗಿ ದನಕರುಗಳನ್ನು ಹಿಡಿದುಕೊಂಡುಹೋಗಿ ತುಂಬಾ ಉಪದ್ರವ ಕೊಡುತ್ತಿತ್ತು. ಅದನ್ನು ಬೇಟೆಯಾಡಲು ಹಳ್ಳಿಯ ಜನರು ಪಟ್ಟ ಶ್ರಮವು ನಿರರ್ಥಕವಾಗಿ, ಕಡೆಗೆ, ಹೆಮ್ಮೀರ ಮಹಾಪಾತ್ರನಲ್ಲಿ ಅವರು ತಮ್ಮ ಗೋಳನ್ನು ನಿವೇದಿಸಿಕೊಂಡರು.

ಅವರ ಗೋಳನ್ನು ಕೇಳಿ ಮನಸ್ಸು ಕರಗಿ, ಹೆಮ್ಮೀರ ಮಹಾಪಾತ್ರನು ಹುಲಿಯ ಬೇಟೆಗೆಂದು ತಾನೇ ಹೊರಟನು. ಮೊದಲಿನಿಂದಲೂ ಬೇಟೆಯಾಡುವುದರಲ್ಲಿ ಚನ್ನಾಗಿ ಪಳಗಿದ್ದ ಹೆಮ್ಮೀರ ಮಹಾಪಾತ್ರನಿಗೆ ಒಂದು ಹುಲಿಯನ್ನು ಬೇಟೆಯಾಡಿ ಕೊಲ್ಲುವುದು ದೊಡ್ಡ ಸಾಹಸವಾಗಿರಲಿಲ್ಲ.

ಆದರೆ, ಯೌವನದ ಬಿಸಿರಕ್ತದಲ್ಲಿ ನಂಬಿಕೆ ಇರಿಸಿ, ಒಬ್ಬಂಟಿಗನಾಗಿ ಹುಲಿಯನ್ನು ಕೊಲ್ಲಲು ಹೊರಟುದು ಮಾತ್ರ ಅವಿವೇಕವಾಯಿತು.

ಆ ಹುಲಿಯು ತುಂಬಾ ಬಲಶಾಲಿಯಾದ, ಚನ್ನಾಗಿ ಕೊಬ್ಬಿ ಬೆಳೆದ ಹೆಬ್ಬುಲಿ. ಅದನ್ನು ಕಂಡೇ ಎಂತಹ ಗಂಡೆದೆಯವರೂ ತಲ್ಲಣಗೊಳ್ಳಬೇಕು. ನಾಲ್ಕುಮಂದಿ ಸಶಸ್ತ್ರ ಬೇಟೆಗಾರರು ಎದುರಿಸಲು ಸಾಧ್ಯವಾಗದೆ ಇದ್ದ ಆ ಹೆಬ್ಬುಲಿಯ ಮೇಲೆ ಹೆಮ್ಮೀರ ಮಹಾಪಾತ್ರನು ಏಕಾಂಗಿಯಾಗಿ ಬಿದ್ದನು. ಆಗಷ್ಟೇ ತನ್ನ ಆಹಾರವನ್ನು ತಿಂದು ಮುಗಿಸಿ, ವಿಶ್ರಮಿಸಿಕೊಳ್ಳುತ್ತಾ ಮಲಗಿದ್ದ ಹೆಬ್ಬುಲಿಗೆ ವಿಶ್ರಾಂತಿಭಂಗವಾಗಿ, ಕೆರಳಿ ಹೆಮ್ಮೀರ ಮಹಾಪಾತ್ರನ ಮೇಲೆ ಬಿದ್ದಿತು. ಈ ಹೋರಾಟದಲ್ಲಿ ಹೆಮ್ಮೀರ ಮಹಾಪಾತ್ರನ ದೇಹದಲ್ಲಿ ಅನೇಕ ಕಡೆ ಹುಲಿಯ ಉಗುರುಗಳಿಂದ ಗಾಯವಾಯಿತು. ಅದರಿಂದ ಆಗುತ್ತಿರುವ ರಕ್ತಸ್ರಾವವನ್ನೂ ಗಮನಿಸದೆ, ಹುಲಿಯ ಮೇಲೆ ಬಿದ್ದು, ಅದನ್ನು ಕೊಂದು, ಯಮಲೋಕಕ್ಕೆ ಅಟ್ಟಿದನು. ಈ ಹೋರಾಟದಲ್ಲಿ ವ್ಯಾಘ್ರನಖದಿಂದ ಹೆಮ್ಮೀರ ಮಹಾಪಾತ್ರನಿಗೆ ಒಂದೆರಡುಕಡೆ ಬಲವಾದ ಗಾಯಗಳಾಗಿದ್ದುವು. ಅದನ್ನು ನಿರ್ಲಕ್ಷಿಸಿ, ತನ್ನ ರಾಜಧಾನಿಗೆ ಬಂದು, ಹಾಸಿಗೆ ಹಿಡಿದು ಮಲಗಿದವನು ಮತ್ತೆ ಮೇಲೇಳಲಿಲ್ಲ. ಹುಲಿಯು ಮಾಡಿದ್ದ ಗಾಯವು ನಂಜಾಗಿ ರಾಜವೈದ್ಯರು ಮಾಡಿದ ಎಲ್ಲ ಔಷಧೋಪಚಾರಗಳು ವ್ಯರ್ಥವಾಯಿತು. ತನ್ನನ್ನು ನಂಬಿದ್ದವರೆಲ್ಲರನ್ನೂ ಅನಾಥರನ್ನಾಗಿ ಮಾಡಿ, ಹಿಂದಿರುಗದ ಲೋಕಕ್ಕೆ ನಡೆದುಬಿಟ್ಟನು. ಸಾಯುವ ಮೊದಲು ತಾನು ಬದುಕುವುದಿಲ್ಲವೆಂದು ಅವನಿಗೆ ಚೆನ್ನಾಗಿ ತಿಳಿದಿದ್ದುದರಿಂದ ಪ್ರತಾಪರುದ್ರ ಗಜಪತಿಯನ್ನು ಒಳಗೆ ಬರಮಾಡಿಕೊಂಡು ಅವನ ಕೈಯ್ಯಲ್ಲಿ ಕೈಯ್ಯಿಟ್ಟು, ಗದ್ಗದ ಕಂಠದಲ್ಲಿ ಹೇಳಿದ. “ಪ್ರಭು, ಇನ್ನು ನಾನು ಈಕಾಹಿಲೆಯಿಂದ ಉಳಿಯುವುದಿಲ್ಲ, ನನಗೆ ಖಚಿತವಾಗಿದೆ. ನಾನು ಸಾಯಲು ಅಂಜುತ್ತಿಲ್ಲ. ಆದರೆ, ಈರೀತಿಯಾಗಿ ಹಾಸಿಗೆಯಲ್ಲಿ ಸಾಯುತ್ತಿರುವೆನಲ್ಲಾ ಎಂದು ವ್ಯಥೆಯಾಗುತ್ತಿದೆ. ನಾನು ತಾಯ್ನಾಡಿನ ಸೇವೆಯಲ್ಲಿ ರಣರಂಗದಲ್ಲಿ ಸತ್ತಿದ್ದರೆ; ಎಷ್ಟೋ ಸಂತೋಷವಾಗುತ್ತಿತ್ತು. ನನಗೆ ವೀರಮೃತ್ಯು ಒದಗದೆ, ಈ ಅಪಮೃತ್ಯು ಬಂದಿದೆ ಅದಕ್ಕಾಗಿ ವ್ಯಥೆ ಪಡುತ್ತಿದ್ದೇನೆ” ಎಂದು ಹೇಳಿದನು.

"ಹೆಮ್ಮೀರಮಹಾಪಾತ್ರರೇ ನೀವು ಹೀಗೆಲ್ಲ ಚಿಂತಿಸಬಾರದು. ನೀವು ಬದುಕಿದ್ದಷ್ಟುಕಾಲವೂ ತಾಯ್ನಾಡಿನ ಸೇವೆಯಲ್ಲಿ ಬೆವರಿನಂತೆ ರಕ್ತ ವನ್ನು ಸುರಿಸಿದ್ದೀರಿ. ತಮ್ಮ ಸೇವೆ ಎಷ್ಟು ಅಮೂಲ್ಯವಾಗಿತ್ತೆಂಬುದನ್ನು ಇಡೀ ಉತ್ಕಲ ನಾಡೇ ಬಲ್ಲದು. ತಮ್ಮಂತಹ ವೀರಪುರುಷರ ಸೇವೆ ನಮ್ಮ ರಾಷ್ಟ್ರಕ್ಕೆ ಇನ್ನು ಕೆಲವುಕಾಲ ಬೇಕಿತ್ತು. ತಮ್ಮ ಸೇವೆಯನ್ನು ಪಡೆಯುವ ಭಾಗ್ಯ ನಮಗೆ ಇಲ್ಲವಾಗಿದೆ. ನಮ್ಮ ಲಭ್ಯವಿದ್ದಷ್ಟು ನಮಗೆ ದೊರೆಯಿತು! ಎಲ್ಲವೂ ಜಗದೀಶ್ವರನ ಇಚ್ಛೆ. ನೀವು ಯಾವ ಕಾರ ಣಕ್ಕೂ ವ್ಯಥೆಪಡುವ ಕಾರಣವಿಲ್ಲ. ನಿಮ್ಮ ಸಾವು ಹಾಸಿಗೆಯಮೇಲೆ ಆದರೇನು? ರಣರಂಗದಲ್ಲಿ ಆದರೇನು? ನೀವು ಮಡಿಯುತ್ತಿರುವುದು ಜನತಾಸೇವೆಯಲ್ಲೇ. ನಿಮ್ಮ ಈ ಮಹತ್ಸೇವೆಯಿಂದ ಜನತಾ ಜನಾರ್ದನ ತೃಪ್ತಿಗೊಂಡಿದ್ದಾನೆ ಅಂತಲೇ ತಮಗೆ ಈ ವೀರಮರಣ. ತಾವು ಯಾವ ಬಗೆಯ ಮನೋಕ್ಲೇಶಕ್ಕೆ ಒಳಗಾಗಬಾರದು" ಎಂದು ಪ್ರತಾಪರುದ್ರ ಗಜಪತಿಯು ಸಂತೈಸಿದನು.

ಆಗ ಹೆಮ್ಮೀರಮಹಾಪಾತ್ರನ ಮೋರೆಯಮೇಲೆ ಸಮಾಧಾನದ ಕಿರುನಗೆ ಮಿಂಚಿತು. ಅವನಿಗೆ ಆಕ್ಷಣದಲ್ಲಿ ಅದೇನನಿಸಿತೋ, ಆರುವರ್ಷದ ಹಸುಳೆ ನರಹರಿಪಾತ್ರನ ಕೈಯ್ಯನ್ನು ತೆಗೆದುಕೊಂಡು ಗಜಪತಿಯ ಕೈಯ್ಯಲ್ಲಿ ಇಟ್ಟು ಹೇಳಿದ.

"ಪ್ರಭುಗಳು ನನ್ನಮೇಲೆ ಅನುಗ್ರಹಮಾಡಿದ್ದಂತೆಯೇ ಈ ಹಸುಳೆ ಯಮೇಲೂ ಮಾಡಬೇಕೆಂದು ನನ್ನ ಪ್ರಾರ್ಥನೆ. ಈ ಕಂದನನ್ನು ಇಷ್ಟು ಸಣ್ಣವಯಸ್ಸಿನಲ್ಲೇ ತಬ್ಬಲಿಯನ್ನಾಗಿ ಮಾಡಿಹೋಗುತ್ತಿದ್ದೇನೆಂಬ ನಿರಾಶೆ ಯಿತ್ತು. ಈಗ ತಮ್ಮನ್ನು ನೋಡಿದಮೇಲೆ ಆ ನಿರಾಶೆಯಿಲ್ಲ. ಈ ಮಗು ವನ್ನು ನಿಮ್ಮ ಉಡಿಯೊಳಗೆ ಹಾಕಿದ್ದೇನೆ. ಇನ್ನುಮೇಲೆ ನೀವೇ ಪ್ರಭು, ತಂದೆ, ತಾಯಿ ಬಂಧು ಬಳಗ. ಇವನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡುವ ಜವಾಬ್ದಾರಿ ನಿಮ್ಮದು. ಇವನನ್ನು ಉತ್ಕಲದ ಶ್ರೇಷ್ಠ ಸ್ವಾಮಿ ನಿಷ್ಠಸೇವಕರಲ್ಲಿ ಒಬ್ಬನನ್ನಾಗಿ ಮಾಡುವ ಮಹದಾಶೆಯಿತ್ತು. ಅದನ್ನು ತಾವು ಪೂರ್ಣಗೊಳಿಸಿಕೊಡಬೇಕು. ಇದೇ ನಿಮ್ಮಲ್ಲಿ ನನ್ನ ನಮ್ರ ಕೋರಿಕೆ"

ಎಂದು ಹೇಳಿ, ಗಜಪತಿಯಿಂದ ಭಾಷೆ ತೆಗೆದುಕೊಂಡು ಹೆಮ್ಮೀರ ಮಹಾಪಾತ್ರನು ತೀರಿಕೊಂಡನು.

ತಂದೆಯು ತೀರಿಕೊಂಡಮೇಲೆ ನರಹರಿಪಾತ್ರನಿಗೆ ತಾಯಿಯೂ ಅವನ ಭಾಗಕ್ಕೆ ಇಲ್ಲವಾದಳು.

ಮಹಾ ಸಾಧ್ವೀಶಿರೋಮಣಿಯಾದ ಮಹಾದೇವಿಯು ಪತಿಯ ಮರಣದಿಂದ ಶೋಕದಗ್ಧಳಾಗಿ, ಪತಿಯೊಂದಿಗೆ ತಾನೂ ಸಹಗಮನ ಮಾಡಲು ನಿಶ್ಚಯಿಸಿದಳು. ಅವಳ ಮನೋನಿರ್ಧಾರವನ್ನು ಬದಲಿಸಲು ಗಜಪತಿಯು ಮಾಡಿದ ಎಲ್ಲಾ ಪ್ರಯತ್ನಗಳು ವ್ಯರ್ಥವಾದವು. ಕಡೆಗೆ ನಿರ್ವಾಹವಿಲ್ಲದೆ, ಆ ಸತೀಮಣಿಗೆ, ಅಗ್ನಿಪ್ರವೇಶಕ್ಕೆ ಅನುಮತಿ ಕೊಡಲಾಯಿತು. ಆಕೆಯು ಚಿತಿ ಏರಿ ಸಾಯುವ ಮುನ್ನ ತನ್ನ ಸೋದರನಾದ ಗಜಪತಿಯ ಕೈಯ್ಯಲ್ಲಿ ನರಹರಿಪಾತ್ರನ ಕೈಯ್ಯಿಟ್ಟು ಹೀಗೆ ಹೇಳಿದಳು.

"ಅಣ್ಣಾ, ಇನ್ನು ಮುಂದೆ ಈ ಕಂದಮ್ಮನಿಗೆ ನೀನೆ ತಾಯಿತಂದೆ; ನೀನೇ ಎಲ್ಲವೂ. ಪ್ರೀತಿಯಿಂದ ನೋಡಿಕೋ—ತಂದೆತಾಯಿಗಳಿಲ್ಲದ ತಬ್ಬಲಿ—ದುರ್ದೈವಿ ಮಗುವನ್ನು. ಇವನು ಬೆಳೆದು ದೊಡ್ಡವನಾಗಿ ನಮ್ಮ ವಂಶದ ಕೀರ್ತಿಯನ್ನು ಬೆಳಗಲಿ! ತಾಯಿನಾಡಿನ ಕೀರ್ತಿಯನ್ನು ಬೆಳಗಲಿ! ಎಂದು ಹೇಳಿ, ಗಜಪತಿಯಿಂದ ಆಶ್ವಾಸನವನ್ನು ಪಡೆದುಕೊಂಡಮೇಲೆ, ಚಿತಿಯನ್ನೇರಿ ಸಹಗಮನಮಾಡಿದಳು ಆ ಆದರ್ಶರಮಣಿ, ಮಹಾದೇವಿ.

ಅಂದಿನಿಂದ ಪ್ರತಾಪರುದ್ರ ಗಜಪತಿ ನರಹರಿಪಾತ್ರನ ಪೋಷಕನಾದನು. ಅವನನ್ನು ಅರಮನೆಯಲ್ಲಿ ಇಟ್ಟುಕೊಂಡು, ತನ್ನ ಸ್ವಂತಮಗನಾದ ವೀರಭದ್ರದೇವನ ಜತೆಯಲ್ಲಿಯೇ ಅವನನ್ನು ಬೆಳಸಿ ದೊಡ್ಡವನನ್ನಾಗಿ ಮಾಡಿದನು.

ಬಾಲ್ಯದಲ್ಲಿಯೇ ನರಹರಿಪಾತ್ರನು ತಾನು ಮಹಾಪುರುಷನಾಗಲು ಹುಟ್ಟಿರುವೆನೆಂಬ ಅಂಶವನ್ನು ಪ್ರಕಟಿಸಿದನು. ಅವನು ವೀರಭದ್ರದೇವನೊಡನೆ ಗುರುಕುಲವಾಸದಲ್ಲಿ ಇದ್ದ ಅತ್ಯಲ್ಪಕಾಲದಲ್ಲಿಯೇ ರಾಜಪುತ್ರರಿಗೆ ಒಪ್ಪುವ ಎಲ್ಲ ವಿದ್ಯೆಗಳನ್ನು ಕರತಲಾಮಲಕ ಮಾಡಿಕೊಂಡನು. ಅಂತೆಯೇ ಸಾಹಿತ್ಯ, ವ್ಯಾಕರಣ, ಛಂದಸ್ಸು, ತರ್ಕಶಾಸ್ತ್ರ, ವೇದಾಂತಗಳಲ್ಲೂ, ರಾಜಕಾರಣದಲ್ಲೂ ಅತ್ಯಾಸಕ್ತಿಯನ್ನು ತೋರಿಸಿದ್ದನು. ಅವನಿಗೆ

ಯುದ್ಧವಿದ್ಯೆಗಳಾದ ಧನುರ್ವಿದ್ಯೆಯಲ್ಲೂ, ಖಡ್ಗವಿದ್ಯೆ, ಕುದುರೆ ಸವಾರಿಗಳಲ್ಲೂ ನೈಪುಣ್ಯವನ್ನು ಪಡೆದಿದ್ದನು. ತನ್ನ ಶಿಷ್ಯನ ಗ್ರಹಣಶಕ್ತಿಯನ್ನು ಕಂಡು ಗುರುಗಳೇ ಬೆರಗಾಗಿದ್ದರು.

ಗುರುಕುಲ ಶಿಕ್ಷಣ ಮುಗಿದಮೇಲೆ ಕುಮಾರರಿಬ್ಬರಿಗೂ, ರಾಜ್ಯಾಡಳಿತದಲ್ಲಿ ಅನುಭವ ಬರಲೆಂದು ಅವರನ್ನು ಮಂತ್ರಿಗಳ ವಶಕ್ಕೆ ಕೊಡಲಾಯಿತು. ಮಂತ್ರಿಗಳೊಡನೆ, ಇತರ ಅಧಿಕಾರಿಗಳೊಡನೆ ಸಾಮಾನ್ಯರಂತೆ ಕೆಲಸಮಾಡಿ, ರಾಜ್ಯಾಡಳಿತದ ಅನೇಕ ಮರ್ಮಗಳನ್ನೂ, ಸೂಕ್ಷ್ಮಗಳನ್ನೂ ತಿಳಿದುಕೊಂಡರು.

ಪ್ರವರ್ಧಮಾನಕ್ಕೆ ಬರುತ್ತಿದ್ದ ಅವರಿಗೆ ಹೊಣೆಗಾರಿಕೆಯ ಕಷ್ಟಸುಖಗಳು ತಿಳಿದಿರಲೆಂದು ಅವರನ್ನು ಅನೇಕ ಗಿರಿ ದುರ್ಗಗಳ ರಕ್ಷಣೆಗೆ ನೇಮಿಸಿದ್ದನು. ಈ ಪರೀಕ್ಷೆಯಲ್ಲಿ ಅವರು ಯಶಸ್ವಿಯಾಗಿ ತೇರ್ಗಡೆ ಹೊಂದಿದಮೇಲೆ ಅವರ ಲೋಕಶಿಕ್ಷಣಕ್ಕೆ ಕೊನೆ ಬಂದಂತಾಯಿತು. ಅನಂತರ ಗಜಪತಿಯು ವೀರಭದ್ರದೇವನನ್ನು ಕೊಂಡವೀಡಿನ ದುರ್ಗಾಧಿಪತಿಯನ್ನಾಗಿ ನೇಮಿಸಿದನು. ನರಹರಿಪಾತ್ರನನ್ನು ಅವನ ತಂದೆಯು ಆಳುತ್ತಿದ್ದ ಪ್ರಾಂತ್ಯಕ್ಕೆ ಮಾಂಡಲೀಕನನ್ನಾಗಿ ಮಾಡಿ ಗೌರವಿಸಿದನು.

ಇಂತು ನರಹರಿಪಾತ್ರನ ಬಗ್ಗೆ ಗಜಪತಿಯು ಕಟ್ಟಿದ್ದ ಅನೇಕ ಕನಸು ಕಾರ್ಯಗತವಾಗಿದ್ದವು. ಇನ್ನು ಈಡೇರಬೇಕಾಗಿದ್ದ ಗಜಪತಿಯ ಒಂದೇ ಒಂದು ಕನಸೆಂದರೆ, ನರಹರಿಪಾತ್ರನೊಂದಿಗೆ ಜಗನ್ಮೋಹಿನಿಯ ವಿವಾಹ. ಅವನ ಬಹುದಿನಗಳ ಈ ಕನಸು ಮಾತ್ರ ಅನೇಕ ಕಾರಣಗಳಿಂದ ಈಡೇರಿರಲಿಲ್ಲ ನರಹರಿಪಾತ್ರ ಹಾಗೂ ಜಗನ್ಮೋಹಿನಿಯರು ಪರಸ್ಪರ ಒಲಿದು, ತಮ್ಮ ವಿವಾಹಕ್ಕೆ ಗಜಪತಿಯ ಸಮ್ಮತಿಯನ್ನು ದೊರಕಿಸಿಕೊಂಡಿದ್ದರೂ ಅವರ ವಿವಾಹಮಾತ್ರ ನಡೆದಿರಲಿಲ್ಲ. ಇದು ನಡೆಯಲು ಅನೇಕ ಅಡ್ಡಿ, ಆತಂಕಗಳು ಇದ್ದವು.

ಬಾಲ್ಯದಿಂದಲೂ ಜಗನ್ಮೋಹಿನಿ, ನರಹರಿಪಾತ್ರರು ಕೂಡಿ ಬೆಳೆದಿದ್ದರು. ಜಗನ್ಮೋಹಿನಿಗೆ ಮೊದಲಿನಿಂದಲೂ ನರಹರಿಪಾತ್ರನನ್ನು ಕಂಡರೆ ಒಂದುಬಗೆಯ ಅಕ್ಕರೆಯಿತ್ತು. ಅವನು ಬಾಲ್ಯದಲ್ಲಿಯೇ ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾಗಿರುವನೆಂಬ ಸಂಗತಿ ಅವಳ ಪುಟ್ಟ

ಹೃದಯದಲ್ಲೂ ಅನುಕಂಪವನ್ನುಂಟುಮಾಡಿತ್ತು. ಅಲ್ಲದೆ ಬಾಲ್ಯದಲ್ಲಿಯೇ ತನ್ನ ಧೈರ್ಯ ಸಾಹಸಗಳಿಂದಲೂ, ನಯವಿನಯ ಗುಣಗಳಿಂದಲೂ ಗಜಪತಿಯ ಅಭಿಮಾನಕ್ಕೆ ಪಾತ್ರನಾಗಿದ್ದ ನರಹರಿಪಾತ್ರನ ಸದ್ಗುಣಗಳು ಅವಳ ಮನಸ್ಸನ್ನು ಸೂರೆಗೊಂಡಿದ್ದವು. ನರಹರಿಯ ಸರಳವಾದ ನಡೆನುಡಿ ಅವಳ ಹೃದಯದಲ್ಲಿ ಪ್ರೀತಿಯ ಕಾರಂಜಿಯನ್ನು ಪುಟ್ಟಿಸುತ್ತಿತ್ತು ಅಂತಲೇ ಅವಳು ನರಹರಿಯನ್ನು ತನ್ನ ಆರಾಧ್ಯ ದೇವತೆಯನ್ನಾಗಿ ಮಾಡಿಕೊಂಡುದರಲ್ಲಿ ಅಚ್ಚರಿಯಲ್ಲ. ಗುಪ್ತವಾಗಿ ನಡೆದಿದ್ದ ಈ ಮಾನಸಪೂಜೆ ಹೊರಗೆ ಪ್ರಕಟವಾಗಲು ಹೆಚ್ಚುಕಾಲ ಬೇಕಾಗಲಿಲ್ಲ.

ಒಮ್ಮೆ ಜಗನ್ಮೋಹಿನಿ, ಅರಮನೆಯ ಉದ್ಯಾನವನದಲ್ಲಿ ಅರಳಿದ ಹೂಗಳನ್ನು ಕೊಯ್ದುತಂದು, ಒಂದು ಸುಂದರ ಮಾಲೆಯನ್ನು ಮಾಡಿ, ನರಹರಿಯ ಕೊರಳಿಗೆ ಹಾಕಿದ್ದಳು—ನರಹರಿಯು ಕೇವಲ ಹದಿನೆಂಟು ವರ್ಷದ ಹುಡುಗನಾದರೂ, ಒಬ್ಬನೇ ನಿಂತು ಒಂದು ಕಣೇಹಂದಿಯನ್ನು ಬೇಟೆಯಾಡಿ ಯಮಲೋಕಕ್ಕೆ ಅಟ್ಟದನೆಂಬ ವಾರ್ತೆಯನ್ನು ವೀರಭದ್ರದೇವನು ತಂದೆಗೆ ವರದಿಮಾಡಿದಾಗ, ಅಗ ಜಗನ್ಮೋಹಿನಿಯ ಈ ವರ್ತನೆ ವೀರನಿಗೆ ಮಾಡಿದ ಸನ್ಮಾನವೆಂದು ಅವನು ತಿಳಿದರೂ, ಮುಂದೆ ದಿನಗಳೆದಂತೆ, ಜಗನ್ಮೋಹಿನಿಯ ಯೌವನದ ಕುಸುಮ ಅರಳಿದಂತೆಲ್ಲಾ ಅವನ ಮನಸ್ಸನ್ನೂ, ಹೃದಯವನ್ನೂ ಜಗನ್ಮೋಹಿನಿ ತುಂಬಿಕೊಳ್ಳತೊಡಗಿದ್ದಳು. ಜಗನ್ಮೋಹಿನಿ ಬೆಳೆದು ದೊಡ್ಡವಳಾಗಿ, ವಿವಾಹವಯಸ್ಕಳಾಗುವವೇಳೆಗೆ ತಾನು ಜಗನ್ಮೋಹಿನಿಯನ್ನು ತ್ರಿಕರಣಪೂರ್ವಕವಾಗಿ ಪ್ರೀತಿಸುತ್ತಿರುವ ಸಂಗತಿ ನರಹರಿಪಾತ್ರನಿಗೆ ಅರಿವಾಯಿತು. ಅವನು ತನ್ನ ಅಂತಸ್ತು ಪದವಿಗಳನ್ನು ಜಗನ್ಮೋಹಿನಿಯ ಅಂತಸ್ತು ಪದವಿಗಳೊಂದಿಗೆ ಹೋಲಿಸಿಕೊಂಡು, ಆ ಕನ್ಯಾರತ್ನವನ್ನು ಪಡೆಯುವ ಪುಣ್ಯ ತನಗಿದೆಯೇ? ಆ ಅನಘ್ರಾಣಿತ ಸುಂದರ ಪುಷ್ಪವನ್ನು ಮುಡಿಯುವ ಭಾಗ್ಯ ತನಗಿದೆಯೇ? ಎಂದು ಬಾರಿಬಾರಿಗೆ ಪ್ರಶ್ನಿಸಿಕೊಳ್ಳುತ್ತಿದ್ದ. ಆಗ ಅವನಿಗೆ ಆಸೆಗಿಂತಲೂ ನಿರಾಸೆಯೇ ಹೆಚ್ಚಾಗುತ್ತಿತ್ತು. ಅವನು ತನ್ನಲ್ಲೇ ಪರಿತಪಿಸುತ್ತಿದ್ದ.

ಅತ್ತ ಜಗನ್ಮೋಹಿನಿಯ ಹೃದಯದಲ್ಲಿಯೂ ಇಂತಹದೇ ಮೂಕ ವಿರಹವ್ಯಥೆ ತುಂಬಿಕೊಂಡಿತ್ತು. ಈಗ ನರಹರಿಯೊಂದಿಗೆ ಅವಳು ಹೆಚ್ಚು

ಕಾಲ ಇರಲು ಸಾಧ್ಯವಾಗುತ್ತಿರಲಿಲ್ಲ. ನರಹರಿಯೊಂದಿಗೆ ಮೊದಲಿನಂತೆ ಸಲಿಗೆಯಿಂದ ಇರಲು ಲಜ್ಜೆ, ನಾಚಿಕೆಗಳು ಅಡ್ಡಿಬರುತ್ತಿದ್ದುವು. ಅವನು ದೂರದಲ್ಲಿದ್ದಾಗ ಅವನ ರೂಪನ್ನು, ಧ್ವನಿಯನ್ನು ಕಂಡು, ಹೇಳಲು ಆಸೆಯಾಗುತಿತ್ತು. ಅವನನ್ನು ತನ್ನ ಹೃದಯದಲ್ಲಿ ಬಚ್ಚಿಟ್ಟುಕೊಳ್ಳುವ ಆಸೆಯಾಗುತ್ತಿತ್ತು. ಆದರೆ ಅವನು ಜಗನ್ಮೋಹಿನಿಯನ್ನು ತಲೆಯೆತ್ತಿ ನೋಡಿಬಿಟ್ಟರೆ ಸಾಕು, ಹತ್ತಿರ ಬಂದು ನಿಂತರೆ ಸಾಕು—ಎಲ್ಲೋ ಇದ್ದ ನಾಚಿಕೆ, ಸಂಕೋಚಗಳು ಆವರಿಸಿಬಿಡುತ್ತಿತ್ತು. ನರಹರಿಪಾತ್ರನನ್ನು ಕಣ್ಣೆತ್ತಿ ನೋಡುವ ಧೈರ್ಯ ಬರುತ್ತಿರಲಿಲ್ಲ ಅವನು ಮಾತನಾಡಿಸಿದರೆ ಮೈ ಬೆವರುತ್ತಿತ್ತು! ಅಕಸ್ಮಾತ್ ಮೈಗೆ ಮೈ ಸೋಂಕಿದಾಗ, ಅವಳು ರೋಮಾಂಚನಗೊಳ್ಳುತ್ತಿದ್ದಳು. ಇಷ್ಟೆಲ್ಲ ಭಾವೋದ್ವಿಗ್ನತೆ ಅವಳಿಗೆ ಪ್ರಿಯವಾದರೂ, ತಾನು ನರಹರಿಪಾತ್ರನೊಂದಿಗೆ ಇರುವುದನ್ನು ಬೇರೆ ಯಾರಾದರೂ, ನೋಡುವರೆಂಬ ಭಯದಿಂದ ಅಲ್ಲಿಂದ ಜಾರಿಕೊಳ್ಳುತ್ತಿದ್ದಳು. ಇದೇ ಬಗೆಯ ಮನೋಲ್ಲಾಸ, ತನ್ನ ಹಾಗೂ ನರಹರಿಪಾತ್ರನ ವಿವಾಹದ ಮಾತನ್ನು ಯಾರಾದರೂ ಆಡಿಕೊಳ್ಳುವುದನ್ನು ಕೇಳಿದರೆ ಉಂಟಾಗುತ್ತಿತ್ತು. ಒಮ್ಮೊಮ್ಮೆ ಗಜಪತಿಯು ಅವರಿಬ್ಬರ ವಿವಾಹದ ಕನಸನ್ನು ಕಾಣುತ್ತಿದ್ದವನು ಆ ಬಗ್ಗೆ ಮಾತನಾಡುತ್ತಿದ್ದನು. ಗಜಪತಿಯ ಮೇಲೆ ಜಗನ್ಮೋಹಿನಿ ಹುಸಿ ಮುನಿಸುಮಾಡುತ್ತಿದ್ದರೂ, ಗಜಪತಿಯ ಮಾತು ತುಂಬಾ ಆಪ್ಯಾಯಮಾನವಾಗಿರುತ್ತಿತ್ತು. ತನ್ನ ತಂದೆಯ ಕನಸು ನನಸಾಗಬಾರದೇ ಎಂದು ತನ್ನ ದೇವರಲ್ಲಿ ಮೊರೆಯಿಡುತ್ತಿದ್ದಳು.

ಗಜಪತಿಗೆ ಜಗನ್ಮೋಹಿನಿ ಹಾಗೂ ನರಹರಿಪಾತ್ರರ ಭಾವನೆಗಳೇನೆಂಬುದು ಸೂಕ್ಷ್ಮವಾಗಿ ತಿಳಿದಿತ್ತು. ಆ ಭಾವನೆಗಳು ಬೆಳೆಯಲು ಗಜಪತಿಯು ಒಂದುರೀತಿಯಲ್ಲಿ ಅಪರೋಕ್ಷವಾಗಿ ನೆರವಾಗಿದ್ದನೆಂದರೂ ಸರಿ. ಅವನಿಗೆ ಮೊದಲಿನಿಂದಲೂ, ಜಗನ್ಮೋಹಿನಿ ಆಡುವ ಹುಡುಗಿಯಾಗಿದ್ದಾಗಿನಿಂದಲೂ ಅವಳನ್ನು ನರಹರಿಪಾತ್ರನಿಗೆ ಕೊಟ್ಟು ಮದುವೆಮಾಡಬೇಕೆನ್ನುವ ದೂರದ ಆಸೆ. ತಂದೆತಾಯಿಗಳಿಲ್ಲದ ತಬ್ಬಲಿ ನರಹರಿಪಾತ್ರನಿಗೆ ತಾನಲ್ಲದೆ ಅನ್ಯರು ದಿಕ್ಕಿಲ್ಲ. ಅಲ್ಲದೆ, ನರಹರಿಪಾತ್ರ ಗಜಪತಿಯ ತಂಗಿಯ ಮಗ-ಮಹಾದೇವಿಯನ್ನು ಕಂಡರೆ ಗಜಪತಿಗೆ ತುಂಬಾ ಪ್ರೀತಿ ವಿಶ್ವಾಸಗಳಿದ್ದವು.

ಗಜಪತಿಗೆ ಒಂದು ಹೆಣ್ಣುಮಗುವಾದರೆ, ಅವಳನ್ನು ತನ್ನ ಮಗನಿಗೇ ಕೊಡಬೇಕೆಂದು, ನರಹರಿ ಹುಟ್ಟಿದಾಗಲೇ ಈ ಮಾತು ನಡೆದಿತ್ತು. ಜಗನ್ಮೋಹಿನಿ ಹುಟ್ಟಿದಕೂಡಲೇ ಅವಳನ್ನು ತನ್ನ ಮಗನಿಗೆ ತಂದುಕೊಳ್ಳುವಬಗ್ಗೆ ಅಣ್ಣ ತಂಗಿಯರಲ್ಲಿ ಮಾತಾಗಿತ್ತು. ಮುಂದೆ ಮಹಾದೇವಿ ಪತಿಯೊಡನೆ ಸಹಗಮನವಗಾಡುವಮೊದಲು ಗಜಪತಿಯ ಉಡಿಯಲ್ಲಿ ನರಹರಿಪಾತ್ರನನ್ನು ಹಾಕಿ, ಅವನ ರಕ್ಷಣೆಯ ಭಾರವನ್ನು ಗಜಪತಿಗೇ ವಹಿಸಿದಳು. ಆಗಲೂ, ಇನ್ನೊಂದುಗಳಿಗೆಗೆ ಚಿತಾಭಸ್ಮವಾಗುವವಳೆನ್ನುವಾಗಲೂ, ಅವಳು ಗಜಪತಿಗೆ ಕೊಟ್ಟಿದ್ದ ಆಶ್ವಾಸನವನ್ನು ನೆನಪಿಗೆ ತಂದು, ನಗುನಗುತ್ತಲೇ ಚಿತಿ ಏರಿದ್ದಳು. ಹೀಗೆ ಮೊದಲಿನಿಂದಲೂ ಜಗನ್ಮೋಹಿನಿಯನ್ನು ನರಹರಿಪಾತ್ರನಿಗೆ ಕೊಡಬೇಕೆಂಬ ಸಂಗತಿ ಗಜಪತಿಯ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿತ್ತು ಅಂತಲೇ, ಬಾಲ್ಯದಿಂದಲೂ ಅವರಲ್ಲಿ ಸಲಿಗೆ ಬೆಳೆದು, ಪರಸ್ಪರ ಪ್ರೀತಿ, ವಿಶ್ವಾಸಗಳು ಉಂಟಾಗಲಿ ಎಂದು ಅವರನ್ನು ಜತೆಯಲ್ಲಿಯೇ ಬೆಳೆಸಿದ್ದನು. ಅವರ ಪ್ರೀತಿಯ ಸಸಿ, ಗಜಪತಿ ಎರೆದ ನೀರುಂಡು, ಈಗ ಮಹಾವೃಕ್ಷವಾಗಿ ಬೆಳೆದಿತ್ತು. ಆ ವೃಕ್ಷ ಇನ್ನೇನು ಹೂ ಬಿಟ್ಟು, ಕಾಯೊಡೆದು ಹಣ್ಣಾಗಿ, ಪರಿಪಕ್ವವಾದ ಸುಮಧುರ ಫಲಗಳನ್ನು ಬಿಡಬೇಕೆನ್ನುವುದರೊಳಗಾಗಿ, ಅದಕ್ಕೆ ಒಬ್ಬರು ತಾನರಿಯದಂತೆಯೇ ಕೊಡಲಿ ಪೆಟ್ಟನ್ನು ಹಾಕಿದ್ದರು.

ಅವರ ಪ್ರೇಮವೃಕ್ಷಕ್ಕೆ ಕೊಡಲಿ ಪೆಟ್ಟು ಹಾಕಿದವರು ಯಾರು? ಅವರು ಬೇರಾರೂ ಅಲ್ಲ. ಜಗನ್ಮೋಹಿನಿಯ ತಾಯಿಯೂ, ಮಹಾರಾಣಿಯೂ ಆದ ಲಕ್ಷ್ಮೀಬಾಯಿ ಈ ವಿವಾಹಕ್ಕೆ ತನ್ನ ವಿರೋಧವನ್ನು ವ್ಯಕ್ತಪಡಿಸಿದ್ದಳು.

ಲಕ್ಷ್ಮೀದೇವಿಗೆ ಅವರಿಬ್ಬರ ವಿವಾಹ ಹಲವಾರು ಕಾರಣಗಳಿಂದಲೂ ಒಪ್ಪಿಗೆ ಇರಲಿಲ್ಲ. ಹೀಗೆಂದಮಾತ್ರಕ್ಕೆ ಮಹಾರಾಣಿ ಲಕ್ಷ್ಮೀದೇವಿ ನರಹರಿಯನ್ನು ದ್ವೇಷಿಸುತ್ತಿದ್ದಳೆಂದಲ್ಲ. ಆದರೆ ತನ್ನ ಪುತ್ರೀರತ್ನ ಜಗನ್ಮೋಹಿನಿಯನ್ನು ಅವನು ವಿವಾಹವಾಗುವುದು ಮಾತ್ರ ಇಷ್ಟವಿರಲಿಲ್ಲ. ಅತಿಶಯ ರೂಪಲಾವಣ್ಯಗಳಿಂದ ಕೂಡಿ, ಜಗನ್ಮೋಹಿನಿ ಎನ್ನುವ ಅನ್ವರ್ಥನಾಮಕ್ಕೆ ಪಾತ್ರಳಾಗಿದ್ದ ತನ್ನ ಮಗಳನ್ನು, ತಂದೆತಾಯಿಗಳಿಲ್ಲದ, ಅಧಿಕಾರ

ಅಂತಸ್ತುಗಳಿಲ್ಲದ—ತಬ್ಬಲಿಯಾದ ನರಹರಿಪಾತ್ರನು ಮದುವೆಯಾಗುವುದು ಕೊಂಚವೂ ಇಷ್ಟವಿರಲಿಲ್ಲ. ಜಗನ್ಮೋಹಿನಿಯನ್ನು ನರಹರಿಪಾತ್ರನಿಗೆ ಕೊಡುವುದೆಂದರೆ, ಮಂಗನ ಕೈಗೆ ಮಾಣಿಕ್ಯ ಕೊಟ್ಟಂತೆ ಎಂದು ಅವಳ ಭಾವನೆ. ಜಗನ್ಮೋಹಿನಿ ಎಂದಿದ್ದರೂ ಚಕ್ರೇಶ್ವರನ ಮಡದಿಯಾಗಲು ತಕ್ಕವಳು—ಸಾಮ್ರಾಟರ ಹೃದಯಸಿಂಹಾಸನದಲ್ಲಿ ಸಾಮ್ರಾಜ್ಞಿಯಾಗ ಬೇಕಾದ ವ್ಯಕ್ತಿತ್ವ, ರೂಪ, ಗುಣ, ಯೌವನಗಳಿಂದ ಶೋಭಿಸುತ್ತಿರುವ ಸ್ತ್ರೀರತ್ನವಾಗಿರುವ ಅವಳು ಸಾಮಾನ್ಯ ಯುವಕನಾದ ನರಹರಿಪಾತ್ರನನ್ನು ವಿವಾಹವಾಗಬೇಕೆ ? ಕೇವಲ ಸೋದರಳಿಯನೆಂಬ ಒಂದು ಕಾರಣದಿಂದ ಅವನ ಕೊರಳಿಗೆ ಈ ಅಪೂರ್ವ ಮಾಣಿಕ್ಯವನ್ನು ಕಟ್ಟಬೇಕೆ ? ಅದನ್ನು ಕೊರಳಲ್ಲಿ ಧರಿಸುವ ಯೋಗ್ಯತೆಯಾದರೂ ಇದೆಯೇ ಅವನಿಗೆ ! ಎಂದು ಈ ವಿವಾಹಕ್ಕೆ ತನ್ನ ಸಮ್ಮತಿಯನ್ನು ಕೊಟ್ಟಿರಲಿಲ್ಲ.

ಅವಳ ಸಮ್ಮತಿ ದೊರಕಿಸಿಕೊಳ್ಳಲು ಹೋದ ಗಜಪತಿ ಒಮ್ಮೆ ನಿರಾಶೆಯಿಂದ ಹಿಂದಿರುಗಬೇಕಾಯಿತು.

ಆಗಿನ್ನೂ ಕೃಷ್ಣದೇವರಾಯನು ಉತ್ಕಲದಮೇಲೆ ಧಾಳಿ ಇಟ್ಟಿರಲಿಲ್ಲ. ಇನ್ನೂ ಯುದ್ಧಸನ್ನಾಹದಲ್ಲಿಯೇ ಇದ್ದನು. ಅವನು ಉತ್ಕಲದಮೇಲೆ ದಂಡೆತ್ತಿ ಬರುವ ಮೊದಲೇ ಈ ವಿವಾಹವನ್ನು ನೆರವೇರಿಸಿ, ಮುಂದಿನ ಕಾರ್ಯಗಳಿಗೆ ಮನಸ್ಸುಕೊಡಬೇಕೆಂದು ನಿಶ್ಚಯಿಸಿ, ಈ ವಿವಾಹದ ಬಗ್ಗೆ ಮಹಾರಾಣಿ ಲಕ್ಷ್ಮೀದೇವಿಯ ಖಚಿತವಾದ ಅಭಿಪ್ರಾಯ ತಿಳಿದುಬರಲು, ಅವಳ ಅಂತಃಪುರಕ್ಕೆ ಬಂದನು. ಈ ಮೊದಲೇ ನರಹರಿಪಾತ್ರನ ಬಗ್ಗೆ ಒಂದು ಬಗೆಯ ಅನಾದರ ತೋರುತ್ತಿದ್ದ ಮಹಾರಾಣಿಯ ಮನಸ್ಸಿನಲ್ಲಿ ಈ ವಿವಾಹಕ್ಕೆ ಅಸಮ್ಮತಿ ಇದೆ ಎಂದು ಪರೋಕ್ಷವಾಗಿ ತಿಳಿದಿತ್ತಾದರೂ—ಯಾವುದನ್ನೂ ನಿರ್ಧರಿಸಿ, ಮುಂದಡಿಯಿಡಬೇಕಾಗಿತ್ತು. ಈಗ ಈ ಒಂದು ಮಂಗಳಕಾರ್ಯ ನೆರವೇರಿಬಿಟ್ಟರೆ, ಯುದ್ಧಸಿದ್ಧತೆಗಳಿಗೆ ನಿರಾಳವಾಗಿ ಮನಸ್ಸುಹಾಕಬಹುದೆಂದು, ಪತ್ನಿಯೊಡನೆ ಈ ಮದುವೆಯ ಪ್ರಸ್ತಾಪ ತೆಗೆದನು.

ಗಜಪತಿಯು ಲಕ್ಷ್ಮೀಬಾಯಿಯೊಂದಿಗೆ ತನ್ನ ಮನದ ಆಸೆ, ಆಕಾಂಕ್ಷೆಗಳನ್ನು ತೋಡಿಕೊಂಡು, ನರಹರಿಯು ಜಗನ್ಮೋಹಿನಿಗೆ ಅನುರೂಪ

ನಾದ ವರನೆಂದೂ, ಪರಸ್ಪರ ಪ್ರೀತಿಸುತ್ತಿರುವ ಅವರಿಬ್ಬರು ವಿವಾಹವಾದರೆ, ಮುಂದೆ ಅವರು ಆದರ್ಶದಂಪತಿಗಳಾಗಿ, ಸುಖ ಸಂತೋಷಗಳಿಂದ ಬಾಳುವರೆಂದೂ, ಅವರ ವಿವಾಹವನ್ನು ಆದಷ್ಟು ಶೀಘ್ರವಾಗಿ ನೆರವೇರಿಸಲು ತಾನು ಮನಸ್ಸುಮಾಡಿರುವುದಾಗಿಯೂ ತಿಳಿಸಿದನು. ಗಜಪತಿಯ ಮಾತಿಗೆ ಮಹಾರಾಣಿ ಹೆಚ್ಚು ಉತ್ಸಾಹ ತೋರಿಸಲಿಲ್ಲ. ಅವಳು ಮೌನ ವಾಗಿ ಗಜಪತಿಯ ಮಾತುಗಳನ್ನು ಕೇಳುತ್ತಾ ಕುಳಿತಿದ್ದಳೇ ಹೊರತು, ತುಟಿ ಎರಡುಮಾಡಲಿಲ್ಲ, ಕಡೆಗೆ ಪತ್ನಿಯ ಅನಾಸಕ್ತಿಯಿಂದ ಬೇಸತ್ತು— ಈ ಮದುವೆಯ ಬಗ್ಗೆ ಅವಳ ನಿಜವಾದ ಅಭಿಪ್ರಾಯವೇನೆಂದು ಕೇಳಿದನು. ಈ ಪ್ರಶ್ನೆಗೆ ಲಕ್ಷ್ಮೀಬಾಯಿಯಿಂದ ಸಿಡಿಲಿನಂತಹ ಉತ್ತರ ಬಂದಿತು.

"ಈ ವಿಷಯವನ್ನು ನನ್ನನ್ನೇನು ಕೇಳುತ್ತೀರಿ. ನೀವುಂಟು, ನಿಮ್ಮ ಪ್ರೀತಿಯ ಮಗಳುಂಟು. ನಿಮಗೆ ಯಾರಿಗೆ ಕೊಡಬೇಕೆಂದು ಇಷ್ಟವೋ ಅವರಿಗೇ ಅವಳನ್ನು ಮದುವೆಮಾಡಿಕೊಡಿ ನಾನು ಬೇಡವೆನ್ನುವುದಿಲ್ಲ. ನರಹರಿಗಲ್ಲದಿದ್ದರೆ, ಬೀದಿಯಲ್ಲಿ ಹೋಗುವ ಭಿಕಾರಿಗಾದರೂ ಕನ್ಯಾದಾನ ಮಾಡಿ ನಾನು ಬೇಡವೆನ್ನುವುದಿಲ್ಲ. ಅಷ್ಟಕ್ಕೂ ಬೇಡವೆನ್ನಲು ನಾನು ಯಾರು? ನನಗೂ ಈ ವಿವಾಹಕ್ಕೂ ಏನುಸಂಬಂಧ?" ಎಂದು ಮುಖ ವನ್ನು ಗಂಟಿಕ್ಕಿ ವ್ಯಂಗ್ಯವಾಗಿ ಹೇಳಿದಳು.

"ಚೆನ್ನಾಯಿತು ನಿನ್ನಮಾತು. ಹೆತ್ತ ತಾಯಿಯ ಬಾಯಲ್ಲಿ ಬರುವ ಮಾತೇ ಇದು? ಮಗಳ ಮದುವೆಯ ಬಗ್ಗೆ ನನಗಿರುವಷ್ಟೇ ಶ್ರದ್ಧಾಸಕ್ತಿ ಗಳು ಇರಬೇಕಾದ್ದು ಲೋಕ ಧರ್ಮ. ಅದುಬಿಟ್ಟು ನೀನು ಒಳ್ಳೇ ಮಲ ತಾಯಿಯ ಪ್ರೀತಿ ತೋರಿಸುತ್ತೀಯಲ್ಲ—ಜಗನ್ಮೋಹಿನಿಗೆ!"

ಎಂದ ವ್ಯಂಗ್ಯವಾಗಿ, ಗಜಪತಿ ಟೀಕಿಸುವ ಧ್ವನಿಯಲ್ಲಿ.

"ನಾನು ಜಗನ್ಮೋಹಿನಿಗೆ ಮಲತಾಯಿಯೂ ಅಲ್ಲ—ಸಾಕುತಾಯಿ ಯೂ ಅಲ್ಲ. ಅವಳನ್ನು ಹೆತ್ತ ತಪ್ಪಿಗೆ ಅವಳು ನನ್ನ ಮಗಳೆಂದು ತಿಳಿಯ ಬೇಕು. ಇದು ವಿನಃ ಅವಳಿಗೂ ನನಗೂ ಬೇರೆ ಯಾವ ಸಂಬಂಧವಿಲ್ಲ. ಅಲ್ಲಾ, ಅವಳನ್ನು ಹೆತ್ತು ಹೊತ್ತು ಪೋಷಿಸಲು ನಾನು ಬೇಕಾಯಿತು, ಈಗ ಅವಳ ಮದುವೆಯ ಬಗ್ಗೆ ನನ್ನನ್ನು ಒಂದುಮಾತು ಕೇಳುವುದಕ್ಕೆ

ನಾನು ಬೇಡವಾಯಿತು. ನೀವು ಏನಾದರೂ ಮಾಡಿಕೊಳ್ಳಿ ! ನನಗೊಂದೂ ಹೇಳಬೇಡಿ !" ಹುಸಿ ಮುನಿಸುಮಾಡಿದಳು ಮಹಾರಾಣಿ.

"ಚಿನ್ನಾ, ಅದೆಷ್ಟು ಸಿಟ್ಟು ನಿನಗೆ........ಅಬ್ಬಾ ಮಾತನಾಡುವ ಮೊದಲೇ ಬುಸುಗುಟ್ಟುತ್ತೀಯಲ್ಲ ! ಈಗ ಇಲ್ಲಿಗೆ ನಾನು ಬಂದುದಾದರೂ ಯಾತಕ್ಕೆಂದು ತಿಳಿದಿದ್ದಿ ? ನರಹರಿಯೊಂದಿಗೆ ಜಗನ್ಮೋಹಿನಿಯ ವಿವಾಹ ಮಾಡಿದರೆ ಹೇಗೆ? ನಿನ್ನ ಅಭಿಪ್ರಾಯವೇನು ?—ಅದನ್ನು ತಿಳಿಯುವು ದಕ್ಕೆ ಇಲ್ಲಿಗೆ ಬಂದುದು. ವಿಷಯವೇನೆಂದು ಹೇಳುವುದರೊಳಗೆ ನೀನು ಅದೆಷ್ಟು ಹಾರಾಡುತ್ತಿ ?"

"ಹೌದು. ನಾನು ಮಾತನಾಡಿದರೆ, ಹಾವಿನಂತೆ ಬುಸುಗುಟ್ಟು ತ್ತೇನೆ, ನೀವು ಮಾಡುವುದೆಲ್ಲ ಸರಿ........ನನ್ನದೇ ತಪ್ಪು ! ಅಲ್ಲಾ, ಮದುವೆಯ ವಿಷಯದಲ್ಲಿ ಮಾತನಾಡಲು ಬಂದಿದ್ದರಂತೆ ! ಮಾತನಾಡಲು ? ಮಾತನಾಡುವ ವಿಷಯವನ್ನೆಲ್ಲ ಮಾತನಾಡಿ ತೀರ್ಮಾನಿಸಿಕೊಂಡಮೇಲೆ ನನ್ನ ಅಭಿಪ್ರಾಯ ಕೇಳಲು ಬರುತ್ತಿದ್ದಾರೆ. ನೀವು ಬಹು ದೊಡ್ಡ ಮನು ಷ್ಯರು ! ಅಲ್ಲವೆ? ನನಗೇಕೆ ಅವೆಲ್ಲ? ನಿಮಗೆ ಹೇಗೆಬೇಕೋ ಹಾಗೆ ಮಾಡಿ ! ನಿಮ್ಮ ಮಾತಿಗೆ ತಕ್ಕಂತೆ ಕುಣಿಯುವ, ಬುದ್ಧಿಯಿಲ್ಲದ ಆ ಸೊಗ ಸಿನ ಗೊಂಬೆ ಬೇರೆ ! ಈ ಮದುವೆಗೆ ನಾನೇಕೆ ಬೇಡವೆನ್ನಲಿ ! ನಿಮ್ಮ ಇಷ್ಟದಂತೆ ನಡೆಸಿರಿ........ಆದರೂ ನಿಮ್ಮ ಹೆಂಡತಿಯಾದ ತಪ್ಪಿಗೆ........ ಜಗನ್ಮೋಹಿನಿಯ ತಾಯಿಯಾದ ತಪ್ಪಿಗೆ ಮದುವೆ ನಿಶ್ಚಯಿಸುವ ಮುನ್ನ ನನ್ನನ್ನೂ ಒಂದು ಮಾತು ಕೇಳಿದ್ದರೆ ಚೆನ್ನಾಗಿತ್ತು. ಆದರೆ ನಾನು ಆಗ ಬೇಕಿರಲಿಲ್ಲ, ಈಗ ಬೇಕಾಗಿದ್ದೇನೆ. ನೀವು ಮಾಡಿ ಮುಗಿಸಿರುವ ನಿರ್ಧಾ ರಕ್ಕೆ ನನ್ನ ಅಂಗೀಕಾರ ಸೂಚಿಸಲು ! ಆ ಮೂಲಕ ಬರಬಹುದಾದ ಜನಾ ಪವಾದದಿಂದ ತಪ್ಪಿಸಿಕೊಳ್ಳಲು ಈ ಸಂಚು ! ನನಗೆಲ್ಲ ತಿಳಿದಿದೆ ! ನೀವು ಆ ಮದುವೆ ವಿಷಯವೊಂದನ್ನು ನನ್ನೊಡನೆ ಎತ್ತಲೇಬೇಡಿ !"

"ಚಿನ್ನ ನೀನು ಯಾವುದೋ ತಪ್ಪು ಕಲ್ಪನೆಗಳನ್ನು ತಲೆಯಲ್ಲಿ ತುಂಬಿ ಕೊಂಡು, ಪೂರ್ವಾಗ್ರಹದಿಂದ ಹೀಗೆ ಹೇಳುತ್ತಿದ್ದಿ. ನಿನ್ನನ್ನು ಕೇಳದೆ ಮದುವೆ ನಿರ್ಧರಿಸುವಷ್ಟು ನಾನು ದಡ್ಡನೆ ? ನಿನ್ನನ್ನು ಕೇಳದೆ ನಾನು ಜಗನ್ಮೋಹಿನಿಯ ಮದುವೆಮಾಡಲು ಸಾಧ್ಯವೆ ? ಸುಮ್ಮನೆ ಆಗದೇ

ಹೋಗದ ಮಾತು ಹೇಳುತ್ತಿದ್ದಿ—ನನ್ನ ಮಾತನ್ನು ಪೂರ್ತಿಯಾಗಿ ಕೇಳದೆ. ನಾನು ಇನ್ನೂ ಈ ವಿವಾಹದ ಬಗ್ಗೆ ನರಹರಿಗೆ ನನ್ನ ಅಭಿಪ್ರಾಯ ಕೇಳ ಲಿಲ್ಲ. ಜಗನ್ಮೋಹಿನಿಯನ್ನೂ ಈ ಬಗ್ಗೆ ಮಾತನಾಡಿಸಿಲ್ಲ ತಿಳಿಯಿತೇ? ಈ ವರಸಾಮ್ಯ ಚನ್ನಾಗಿದೆ. ಈ ವಿವಾಹವಾದರೆ ಹೇಗೆ ಎಂದು ನಿನ್ನ ಅಭಿಪ್ರಾಯ ತಿಳಿಯಲು ಬಂದೆ. ನೀನು ವೃಥಾ ನನ್ನನ್ನು ದೂಷಿಸುತ್ತಿದ್ದಿ ಅಷ್ಟೇ."

"ಓಹೋ! ಹಾಗೋ, ನಾನು ಏನೋ ತಿಳಿದೆ. ನೀವು ಬಂದು ಹೇಳಿದ ರೀತಿ, ನಿಮ್ಮ ಉತ್ಸಾಹಗಳನ್ನು ನೋಡಿ, ನೀವು ಎಲ್ಲವನ್ನೂ ನಿರ್ಧರಿಸಿಕೊಂಡೇ ಬಂದಿರಬೇಕೆಂದು ಬಗೆದೆ. ಸಧ್ಯ ನೀವು ಹಾಗೆ ದುಡುಕಿ, ನರಹರಿಗೆ ಮಾತುಕೊಡಲಿಲ್ಲವಲ್ಲ—ಅದು ಜಗನ್ಮೋಹಿನಿಯ ಪುಣ್ಯವೇ ಸರಿ!"

ಎಂದು ಸಮಾಧಾನದ ನಿಟ್ಟುಸುರುಬಿಟ್ಟಳು ಮಹಾರಾಣಿ.

"ಏಕೆ? ನರಹರಿಯನ್ನು ಜಗನ್ಮೋಹಿನಿ ಮದುವೆಯಾಗುವುದು ನಿನಗೆ ಇಷ್ಟವಿಲ್ಲವೆ? ಅವನು ಎಲ್ಲ ರೀತಿಯಿಂದಲೂ ಜಗನ್ಮೋಹಿನಿಗೆ ಅನುರೂಪನಾಗಿದ್ದಾನೆ. ಅವನಿಗೆ ವಿದ್ಯೆ ಇದೆ, ಗುಣವಿದೆ, ರೂಪ, ಯೌವನ ಗಳಿವೆ. ಇದಕ್ಕಿಂತಲೂ ಹೆಚ್ಚಾಗಿ, ಅವನು ಬೇರೆಯವನಲ್ಲ—ಕುಲಗೋತ್ರ ನೋಡಲು. ಅವನು ಜಗನ್ಮೋಹಿನಿಯೊಂದಿಗೆ ಬೆಳೆದಿದ್ದಾನೆ. ಅವರಿಬ್ಬರೂ ಕಡೆಯತನಕ ಸುಖವಾಗಿರುತ್ತಾರೆ!"

"ಹೌದು ಹೌದು! ನರಹರಿಯ ಕೈಹಿಡಿದರೆ ಜಗನ್ಮೋಹಿನಿ ತುಂಬಾ ಸುಖಪಡುತ್ತಾಳೆ? ಅವನೇ ಅವಳಿಗೆ ಅನುರೂಪ ವರ! ಎಂದು ನೀವೊಬ್ಬರೇ ಹೇಳಬೇಕು! ಆ ಹುಡುಗಿ ಒಂದು ಪೆದ್ದು—ಅವನನ್ನೇ ಮದುವೆ ಯಾಗಲು ಇಷ್ಟಪಟ್ಟರೆ! ಕೇವಲ ಸಂಬಂಧವೆಂದುಕೊಂಡು, ಚಿನ್ನದ ಕತ್ತಿ ಎಂದು ಕುತ್ತಿಗೆ ಕತ್ತರಿಸಿಕೊಳ್ಳಲಾಗುತ್ತದೆಯೇ? ನಿಮ್ಮ ಮಾತು ಹಾಗೇ ಆಯಿತು. ನಿಮ್ಮ ಮಾತನ್ನು ಕೇಳಿದರೆ, ಬೇರೆಯವರು ನಕ್ಕಾರು. ದಯ ವಿಟ್ಟು ಜಗನ್ಮೋಹಿನಿಯ, ನರಹರಿಯ ಮದುವೆಯ ಸಂಗತಿಯನ್ನು ಬೇರೆ ಯಾರಮುಂದೆಯೂ ಹೇಳಬೇಡಿ. ನಿಮಗೆ ಅರುಳು ಮರುಳೆಂದು ನಕ್ಕಾರು

—ಎಂದು ನಗೆಯಾಡಿದಳು.

"ಯಾರು ಏನು ಹೇಳಿದರೇನು? ನನ್ನ ದೃಷ್ಟಿಯಲ್ಲಿ ನರಹರಿಯೇ ಅವಳಿಗೆ ಅನುರೂಪ ವರ!"

"ನರಹರಿಯು ಎಂದಿಗೂ ಜಗನ್ಮೋಹಿನಿಗೆ ಅನುರೂಪ ವರನಾಗಲು ಸಾಧ್ಯವೇ ಇಲ್ಲ."

"ಏಕೆ?"

"ಆ ತಬ್ಬಲಿ ನರಹರಿ, ದಿಕ್ಕಿಲ್ಲದ ಆ ನಿರ್ಭಾಗ್ಯ ನಿಮ್ಮ ಜಗನ್ಮೋಹಿನಿಯ ಅನುರೂಪ ವರನಾಗಲು ಎಂದಾದರೂ ಸಾಧ್ಯವೇ? ನೀವೇ ಹೇಳಿ. ಜಗನ್ಮೋಹಿನಿ, ಹೇಳಿ ಕೇಳಿ, ಸಾಮ್ರಾಟನ ಮಡದಿಯಾಗತಕ್ಕವಳು. ಅವಳ ರೂಪ, ಗುಣ, ನಡವಳಿಕೆಗಳಿಂದ ನೋಡಿದರೆ—ಅವಳು ಚಕ್ರೇಶ್ವರನ ಮಡದಿಯಾಗಲು ಅರ್ಹಳು! ಅಂತಹ ಕನ್ಯಾರತ್ನವನ್ನು ಮದುವೆಯಾಗಲು ಒಂದು ಅಧಿಕಾರ, ಅಂತಸ್ತು, ಸ್ಥಾನಮಾನಗಳು ಬೇಡವೆ? ನರಹರಿಗೆ ಏನಿದೆ ಎಂದು ಅವನಿಗೆ ಜಗನ್ಮೋಹಿನಿಯನ್ನು ಮದುವೆ ಮಾಡಿಕೊಡಬೇಕು. ತನ್ನದೆನ್ನುವ ರಾಜ್ಯಕೋಶಗಳಿಲ್ಲ! ತನ್ನವರೆನ್ನುವ ಬಂಧು ಬಳಗವಿಲ್ಲ! ನಾವು ಕೊಟ್ಟರೆ ಉಂಟು, ಇಲ್ಲದಿದ್ದರೆ ಇಲ್ಲ. ನಾವು ರಾಜ್ಯ ಕೊಡಬಹುದು, ಕೋಶ ಕೊಡಬಹುದು ಕನಿಕರದಿಂದ. ಆದರೆ, ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನು, ಅವಳ ಶ್ರೇಯೋಭಿವೃದ್ಧಿ ನೋಡದೆ, ಅಂತಹವನಿಗೆ ಮದುವೆ ಮಾಡಿಕೊಡುವುದೆ? ನಾನು ಈ ವಿವಾಹಕ್ಕೆ ಎಂದಿಗೂ ಸಮ್ಮತಿಸಲಾರೆ! ಇದು ಖಂಡಿತ!" ಎಂದಳು ಆವೇಶಗೊಂಡು.

ಮಹಾರಾಣಿ ಲಕ್ಷ್ಮೀಬಾಯಿಯ ಮಾತುಕೇಳಿ ದಂಗುಬಡೆದು ಕುಳಿತ ಗಜಪತಿ. ಈ ದಿಕ್ಕಿನಿಂದ ಅವಳನ್ನು ಒಪ್ಪಿಸುವುದು ಕಠಿಣವೆಂದು ಅರಿತ ಗಜಪತಿ, ಬೇರೆ ಮಾರ್ಗ ಹುಡುಕಿದ,

"ಚಿನ್ನಾ, ನೀನು ಹೇಳುವಂತೆಯೇ ಆಗಲಿ. ಆದರೆ ಈ ಒಂದು ವಿಷಯವನ್ನು ನೀನು ಮರೆತಂತೆ ಕಾಣುತ್ತದೆ. ಈಗ ನಾವು ಜಗನ್ಮೋಹಿನಿಗೆ ಮದುವೆಮಾಡುವ ಉದ್ದಿಶ್ಯವೇನು? ಅವಳು ನಮ್ಮ ಹೊಟ್ಟೆಯಲ್ಲಿ ಹುಟ್ಟಿದುದಕ್ಕೆ ಎಲ್ಲಾದರೂ ಸುಖವಾಗಿರಲೆಂದು ಹರಸುವುದು. ಮುಖ್ಯ ನಮಗೆ ಬೇಕಿರುವುದು ಅವಳ ಸುಖವೇ ಹೊರತು—ಅವಳ ಅಧಿಕಾರ, ಸಂಪತ್ತು

ಗಳಲ್ಲ. ಅವಳು ನರಹರಿಯನ್ನು ಮದುವೆಯಾದರೆ ಹೆಚ್ಚು ಸುಖವಾಗಿರು ವಳೆಂದು ನಾವು ತಿಳಿದಮೇಲೆ ಏಕೆ ಈ ಮದುವೆ ಮಾಡಬಾರದು ?''

''ಸಾಮ್ರಾಟರು, ಚಕ್ರೇಶ್ವರರು ಕೊಡಲಾರದ ಸುಖ ನಿಮ್ಮ ನರಹರಿ ಯಿಂದ ಜಗನ್ಮೋಹಿನಿಗೆ ದೊರೆಯುವುದೆಂದು, ಹೇಗೆ ಗೊತ್ತು ?

"ನನಗೆ ಚನ್ನಾಗಿ ಗೊತ್ತು !"

"ಹೇಗೆ ?''

''ನರಹರಿ, ಜಗನ್ಮೋಹಿನಿಯರು ಬಾಲ್ಯದಿಂದಲೂ ಪರಸ್ಪರ ಪ್ರೀತಿ ಸುತ್ತಿದ್ದಾರೆ. ಬೇರೆ ಯಾವ ಸಾಮ್ರಾಟನೂ, ಚಕ್ರವರ್ತಿಯೂ ಕೊಡ ಲಾಗದ ಪ್ರೀತಿಯನ್ನು ನರಹರಿ ಜಗನ್ಮೋಹಿನಿಗೆ ಕೊಟ್ಟಿದ್ದಾನೆ. ಅವನ ಪ್ರೀತಿಯ ರಕ್ಷಕವಚದಲ್ಲಿ ಜಗನ್ಮೋಹಿನಿಗೆ ಸದಾ ಸುಖ !''

"ಏನು ಜಗನ್ಮೋಹಿನಿ ಆ ನರಹರಿಯನ್ನು ಪ್ರೀತಿಸುತ್ತಿದ್ದಾಳೆಯೆ ?

"ಹೂಂ"

"ಇಂತಹ ಹುಚ್ಚಾಟವನ್ನು ನೀವು ನೋಡಿಕೊಂಡು ಇದುವರೆಗೆ ಹೇಗಿದ್ದಿರಿ ?"

"ನಾನೇನುಮಾಡಬೇಕಾಗಿತ್ತು ?''

"ಜಗನ್ಮೋಹಿನಿಯನ್ನು ಕರೆಸಿಕೊಂಡು ಬುದ್ಧಿಹೇಳಬೇಕಾಗಿತ್ತು. ಅದು ಬಿಟ್ಟು ಅವಳು ಹೋದದಾರಿಯಲ್ಲಿ ಅವಳನ್ನು ಬಿಟ್ಟು, ಅವಳನ್ನು ಹಾಳುಮಾಡಿದಿರಿ ?''

" ಅವಳೇನು ಎಳೆಯ ಮಗುವಲ್ಲ. ತನ್ನ ಜವಾಬ್ದಾರಿಯೇನೆಂದು ಅವಳಿಗೆ ತಿಳಿದಿದೆ, ಹದಿನೆಂಟು ತುಂಬಿದ ಅವಳು ಇನ್ನೂ ಎಳೆಯಮಗು ಅಲ್ಲ ! "

" ಅವಳ ದೇಹ ಬೆಳೆದಿದೆಯೇ ಹೊರತು ಅವಳ ಮನಸ್ಸು ಬೆಳೆದಿಲ್ಲ ವೆನ್ನಲು ಈ ಸಂಗತಿಯೇ ನಿದರ್ಶನ! ಅವಳಿನ್ನೂ ಮಗು, ಅವಳಿಗೆ ಪ್ರೀತಿ, ಪ್ರೇಮಗಳ ಬಗ್ಗೆ ಏನುಗೊತ್ತಿದೆ ? ಸಾಮ್ರಾಟರ ಹೃದಯ ಸಿಂಹಾ ಸನವನ್ನು ಏರಬೇಕಾದ ಅವಳು ನರಹರಿಯನ್ನು ಪ್ರೀತಿಸುತ್ತಿದ್ದಳೆಂದರೆ ಇದಕ್ಕಿಂತ ಬೇರೆ ಅವಿವೇಕವಿಲ್ಲ. ಅವಳಿಗೆ ಸರಿಯಾದ ಬುದ್ಧಿ ಹೇಳುವ ವರು ಯಾರೂ ಇಲ್ಲದೆ, ಹೀಗೆ ಸ್ವೇಚ್ಛೆಯಾಗಿ ಬೆಳೆದಿದ್ದಾಳೆ ! ನಿಮ್ಮನ್ನು

ಹೆಚ್ಚಾಗಿ ಹಚ್ಚಿಕೊಂಡುದಕ್ಕೆ ಆದ ಶಿಕ್ಷೆ ಇದು! ಈಗಲೂ ಕಾರ್ಯ ಮಿಂಚಿಲ್ಲ. ಅವಳಿಗೆ ಸರಿಯಾದ ರೀತಿಯಲ್ಲಿ ಹೇಳಿದರೆ. ತಾನಾಗಿ ತಿಳಿಯುತ್ತದೆ—ತಾನು ನರಹರಿಯನ್ನು ವಿವಾಹವಾಗಲು ಆಸೆಪಟ್ಟಿದ್ದು ಎಂತಹ ಮೂರ್ಖತನವೆಂದು ಅವಳನ್ನು ತಿದ್ದಿ ಬುದ್ಧಿ ಹೇಳುವ ಜವಾಬ್ದಾರಿ ನನಗೆ ಇರಲಿ. ಆದರೆ ಒಂದು ಸಂಗತಿ, ಇನ್ನುಮೇಲೆ ಜಗನ್ಮೋಹಿನಿ ಮತ್ತು ನರಹರಿಯರು ಒಬ್ಬರನ್ನೊಬ್ಬರು ನೋಡಬಾರದು, ಮಾತನಾಡಬಾರದು! ನರಹರಿಯನ್ನು ಆದಷ್ಟು ದೂರ ಇರಿಸದಿದ್ದರೆ, ಜಗನ್ಮೋಹಿನಿಯ ಮನಸ್ಸನ್ನು ಕೆಡಿಸಿಬಿಡುತ್ತಾನೆ ಎಂತಲೇ ಇನ್ನು ನೀವು ಈ ಬಗ್ಗೆ ಕೊಂಚ ಎಚ್ಚರ ವಹಿಸಬೇಕು" ಎಂದು ತನಗೆ ಉಪದೇಶ ಹೇಳಲು ಬಂದ ಗಜಪತಿಗೇ ಉಪದೇಶ ನೀಡಿದಳು ಮಹಾರಾಣಿ ಲಕ್ಷ್ಮೀಬಾಯಿ.

ಈಗ ಅಂತಃಪುರದಿಂದ ಹೊರಬಿದ್ದಮೇಲೆ ಗಜಪತಿಗೆ ಮದುವೆಯ ವಿಷಯದಲ್ಲಿ ಮೊದಲಿನ ಉತ್ಸಾಹ ಇರಲಿಲ್ಲ. ಕೆಲಕಾಲ ಏನುಮಾಡುವುದೆಂದು ತೋಚದೆ, ಸುಮ್ಮನೆ ಯೋಚಿಸುತ್ತಾ ಕುಳಿತನು.

ಈ ಸುದ್ದಿ ಅಲ್ಲಿಬಿದ್ದು ಇಲ್ಲಿಬಿದ್ದು ಹೇಗೋ ನರಹರಿಪಾತ್ರನ ಕಿವಿಗೂ ಬಿದ್ದಿತು. ಇದರಿಂದ ಅವನಿಗಾದ ನಿರಾಶೆ ಅಷ್ಟಿಷ್ಟಲ್ಲ. ಅವನ ನಿರಾಶೆಯಲ್ಲಿ ಒಂದು ಆರೆಯ ಕುಡಿ ಬೆಳಕು ಕಾಣಿಸಿತು. ಮಹಾರಾಣಿ ಲಕ್ಷ್ಮೀಬಾಯಿ ತಾನು ನಿರ್ಗತಿಕ, ಅಧಿಕಾರ ಸಂಪತ್ತುಗಳು ಇಲ್ಲವೆಂಬ ಕಾರಣದಿಂದ ತನಗೆ ಜಗನ್ಮೋಹಿನಿಯನ್ನು ವಿವಾಹ ಮಾಡಿಕೊಡಲು ಅಸಮ್ಮತಿಸಿದ್ದರೆ, ಇದೊಂದು ದೊಡ್ಡ ಆತಂಕವಲ್ಲ! ಮುಂದೆ ಸಂಭವಿಸಬಹುದಾದ ಕೃಷ್ಣದೇವರಾಯನ ಮೇಲಣ ಯುದ್ಧದಲ್ಲಿ ತಾನೆಂತಹ ವೀರನೆಂಬುದನ್ನು ಮಹಾರಾಣಿಗೆ ತೋರಿಸಿಕೊಡಬೇಕು. ತನ್ನ ಧೈರ್ಯಸಾಹಸಗಳ ಮುಂದೆ, ಅಧಿಕಾರ ಆಂತಸ್ತುಗಳು ತೃಣವೆಂದು ಮಹಾರಾಣಿ ಪರಿಗಣಿಸಿ, ತಾನಾಗಿ, ಜಗನ್ಮೋಹಿನಿಯನ್ನು ನನಗೆ ಧಾರೆಯೆರೆದುಕೊಡಲು ಮುಂದೆ ಬರುವಂತೆ ಮಾಡಬೇಕು! ಎಂದು ಆಲೋಚಿಸಿದನು. ಅದಾಗುವತನಕ—ತನ್ನ ಬಗ್ಗೆ ಮಹಾರಾಣಿಯವರಿಗೆ ಇರುವ ತಪ್ಪು ಕಲ್ಪನೆ ಕಳಚಿಬೀಳುವತನಕ, ತಾನು ಜಗನ್ಮೋಹಿನಿಯನ್ನು ವಿವಾಹವಾಗಬಾರದು! ಮಹಾರಾಣಿಯ ಅನು

ಮತಿಯನ್ನು ದೊರಕಿಸಿಕೊಂಡೇ, ಅವರ ಆಶೀರ್ವಾದ ಪಡೆದುಕೊಂಡೇ ಜಗನ್ಮೋಹಿನಿಯ ಕೈಹಿಡಿಯಬೇಕೆಂದು ಅವನು ಶಪಥಮಾಡಿದ.

ಅವನ ಆಶಯದಂತೆ ಕೃಷ್ಣದೇವರಾಯನು ವಿಜಯನಗರದಮೇಲೆ ದಂಡೆತ್ತಿ ಬಂದಿದ್ದನು. ತನ್ನ ಧೈರ್ಯ, ಸಾಹಸಗಳನ್ನು ಪ್ರದರ್ಶಿಸಲು ನರಹರಿ ಪಾತ್ರನಿಗೆ ಯೋಗ್ಯ ಸುಸಂಧಿಯೇ ದೊರತಿತ್ತು. ಅಂತಲೇ ಅವನು ಯಾರೂ ಮಾಡದೇಯಿರುವ ಸಾಹಸಕ್ಕೆ—ಶತ್ರುವಿನ ಸೇವೆಯಲ್ಲಿದ್ದುಕೊಂಡೇ ಅವನ ಮೇಲೆ ಸೇಡುತೀರಿಸಿಕೊಳ್ಳುವ ಸಾಹಸಕ್ಕೆ ಕೈಹಾಕಿದ್ದ. ನರಹರಿಪಾತ್ರನು ಮಾಡಿರುವ ಸಾಹಸಕ್ಕೆ ಎಂತಹವರಾವರೂ ತಲೆದೂಗಬೇಕು! ಇನ್ನು ಗಜಪತಿಯು ಮೆಚ್ಚಿಕೊಂಡು ಶ್ಲಾಘಿಸಿದುದರಲ್ಲಿ ಏನಚ್ಚರಿ!

೧೧

ಜಗನ್ಮೋಹಿನಿ-ನರಹರಿಯರ ವಿವಾಹದ ಪ್ರಶ್ನೆ ಹಿಂದೆಂದೂ ಇಷ್ಟು ಬೃಹದ್ರೂಪ ತೆಗೆದುಕೊಂಡಿರಲಿಲ್ಲ. ಏಕೆಂದರೆ, ನರಹರಿ-ಜಗನ್ಮೋಹಿನಿಯರು ವಿವಾಹವಾಗದೇ ಇದ್ದರೂ, ಒಂದು ದೃಷ್ಟಿಯಲ್ಲಿ ಅವರ ವಿವಾಹ ಆಗಿದ್ದಂತೆಯೇ ಸರಿ. ಪರಸ್ಪರ ಪ್ರೀತಿಸುತ್ತಿದ್ದ ಅವರು ಇಂದಲ್ಲ ನಾಳೆ ಮದುವೆಯ ಪವಿತ್ರಬಂಧನದಲ್ಲಿ ಸತಿಪತಿಗಳಾಗುವ ಧೈರ್ಯ ಎಲ್ಲರಿಗು ಇತ್ತು. ಈಗ ಕೃಷ್ಣದೇವರಾಯನು ಸಿಂಹಾದ್ರಿಯಲ್ಲಿ ಬರೆಸಿದ್ದ ಶಿಲಾಲೇಖನ ವಾರ್ತೆಯನ್ನು ಕೇಳಿದಮೇಲೆ ಯಾರಿಗೂ ಈ ಧೈರ್ಯ ಉಳಿಯಲಿಲ್ಲ. ಎಲ್ಲರಿಗಿಂತಲೂ ಈ ಬಗ್ಗೆ ಹೆಚ್ಚು ಅಧೈರ್ಯ ತಾಳಿದವನೆಂದರೆ ಪ್ರತಾಪರುದ್ರ ಗಜಪತಿ. ಅವನಿಗೆ ಕೃಷ್ಣದೇವರಾಯನ ಮಾತು ಎಂದರೆ ಅಷ್ಟು ಹೆದರಿಕೆ ಇತ್ತು. ನುಡಿದಂತೆ ನಡೆಯುವ ಕೃಷ್ಣದೇವರಾಯನು, ಜಗನ್ಮೋಹಿನಿಯನ್ನು ಸೆರೆಹಿಡಿದು, ತನ್ನ ಕುದುರೆಯ ಲಾಳ ಹೊಡೆಯುವ ಕಮ್ಮಾರನಿಗೆ ಕೊಟ್ಟು ಮದುವೆಮಾಡುವ ಪ್ರತಿಜ್ಞೆಮಾಡಿದಮೇಲೆ ಕೃಷ್ಣದೇವರಾಯನು ತನ್ನ ಪ್ರತಿಜ್ಞಾಪೂರ್ಣಕ್ಕಾಗಿ ಯಾವ ಸಾಹಸವನ್ನೂ ಮಾಡಲು ಹೇಸುವುದಿಲ್ಲ. ಅಂದಮೇಲೆ ರಾಯನು ಪೊಟ್ಟನೂರಿನಮೇಲೆ ಧಾಳಿ ಇಡುವುದೂ ದಿಟ. ಜಗನ್ಮೋಹಿನಿಯನ್ನು ಸೆರೆಹಿಡಿಯುವುದೂ ದಿಟ. ತಾನು ಈಗ ಕಾರ್ಯೋನ್ಮುಖನಾಗದೇ ಇದ್ದರೆ ರಾಯನು ಜಗನ್ಮೋಹಿನಿಯನ್ನು ಸೆರೆಹಿಡಿದು ತನ್ನ ಪ್ರತಿಜ್ಞೆಯಂತೆ ಕಮ್ಮಾರನಿಗೆ ಮದುವೆಮಾಡುವವನೇ. ಕೃಷ್ಣದೇವರಾಯನ ಕೈಗೆ ಜಗನ್ಮೋಹಿನಿಯು ಅವಿವಾಹಿತ ಕನ್ಯೆಯಾಗಿ

ದೊರೆಯುವ ಮೊದಲೇ ಅವಳನ್ನು ನರಹರಿಪಾತ್ರನಿಗೆ ವಿವಾಹಮಾಡಿ ಕೊಟ್ಟರೆ, ಅನಂತರ ಅವಳಮೇಲೆ ರಾಯನು ಕೈಮಾಡಲು ಧೈರ್ಯವಿರುವುದಿಲ್ಲ. ಅಲ್ಲದೆ ಜಗನ್ಮೋಹಿನಿಯ ರಕ್ಷಣೆಯ ಜವಾಬ್ದಾರಿಯನ್ನು ನರಹರಿಪಾತ್ರನಿಗೆ ವಹಿಸಿದಂತೆ ಆಗುವುದು. ಅವಳನ್ನು ಶತ್ರುಗಳ ಕೈಯ್ಯಿಂದ ಪಾರುಮಾಡಬಲ್ಲ ಏಕೈಕ ವ್ಯಕ್ತಿ ಎಂದರೆ ಅವನೇ. ಅಂತಲೇ ಅವನು ನರಹರಿಯೊಂದಿಗೆ ಆದಷ್ಟು ಬೇಗ ಜಗನ್ಮೋಹಿನಿಯ ವಿವಾಹವನ್ನು ಮಾಡಿ ಮುಗಿಸುವ ಆತುರ ಗಜಪತಿಗೆ.

ಸಿಂಹಾದ್ರಿಯಲ್ಲಿ ರಾಯನು ನಡೆಸಿದ್ದ ಶಿಲಾಲೇಖನದ ವಾರ್ತೆಯನ್ನು ಕೇಳಿದಲಾಗಾಯಿತು, ಗಜಪತಿಗೆ ಜಗನ್ಮೋಹಿನಿಯ ರಕ್ಷಣೆ ಒಂದು ಸಮಸ್ಯೆಯಾಗಿತ್ತು. ಅವಳನ್ನು ಹೇಗೆ ಕೃಷ್ಣದೇವರಾಯನ ಕೈಯ್ಯಿಂದ ರಕ್ಷಿಸಬೇಕೆಂಬುದು ತಿಳಿಯದಾಗಿತ್ತು. ಅವಳನ್ನು ನರಹರಿಪಾತ್ರನಿಗೆ ಮದುವೆ ಮಾಡಿಕೊಟ್ಟಿದ್ದರೆ—ಈ ಸಮಸ್ಯೆ ಏಳುತ್ತಿರಲಿಲ್ಲ. ಆದರೆ, ನರಹರಿಪಾತ್ರನು ಈ ಸಮಯದಲ್ಲಿ ಮಲೆಬೆನ್ನೂರಿನಲ್ಲಿ ಇದ್ದನು. ಅಲ್ಲದೆ ರಾಯನ ಸೇವೆಯಲ್ಲಿ ಇದ್ದ ಅವನಬಗ್ಗೆ ಗಜಪತಿಗೆ ತುಂಬಾ ಸಿಟ್ಟು, ಅಸಮಾಧಾನಗಳು ಉಂಟಾಗಿದ್ದವು. ಅವನನ್ನು ತನ್ನ ನೆನಸಿನ ಸೀಮೆಯಿಂದ ಹೊರಗಟ್ಟಲು ಪ್ರಯತ್ನಿಸುತ್ತಿದ್ದನು. ಉತ್ಕಲದ ಸೂರ್ಯ, ಚಂದ್ರರಂತಿದ್ದ ವೀರಭದ್ರದೇವ ಹಾಗೂ ನರಹರಿಪಾತ್ರರು ಶತ್ರುಪಕ್ಷಕ್ಕೆ ಸೇರಿದಮೇಲೆ ಯುವರಾಜಕುಮಾರ ರಾಮಚಂದ್ರದೇವನು ಶತ್ರುವಿನ ಸೆರೆಮನೆಯಲ್ಲಿ ಕೊಳೆಯುತ್ತಿರುವಾಗ, ತನ್ನ ಸಾಮಂತರಲ್ಲಿ ಪ್ರಮುಖರಾದ ಶಿರಶ್ಚಂದ್ರಮಹಾಪಾತ್ರ, ಬಾಟಚಂದ್ರಮಹಾಪಾತ್ರರೇ ಮೊದಲಾದ ಸೇನಾನಿಗಳು ಶತ್ರುವಿನ ಸೆರೆಮನೆಯಲ್ಲಿ ಇರುವಾಗ, ಉತ್ಕಲ ಅನಾಥವಾದಂತೆ ಗಜಪತಿಗೆ ಅನಿಸಿತ್ತು. ಈ ದಾರುಣವಾದ ಸಮಯದಲ್ಲಿ ಉತ್ಕಲದ ರಾಜ್ಯಲಕ್ಷ್ಮಿಯಂತಿದ್ದ ಜಗನ್ಮೋಹಿನಿಯನ್ನು ಕೃಷ್ಣದೇವರಾಯನ ಕೈಯ್ಯಿಂದ ಪಾರುಮಾಡುವವನು ಯಾರು ಎಂದು ಗಜಪತಿಯು ವಿಹ್ವಲಗೊಂಡು ಪರಿತಪಿಸುತ್ತಿದ್ದನು. ಅಂತಹ ವೇಳೆಯಲ್ಲಿ ನರಹರಿಪಾತ್ರನು ಗಜಪತಿಗೆ ಸಂದರ್ಶನಕೊಟ್ಟಿದ್ದನು. ಅವನ ಸಂದರ್ಶನದೊಂದಿಗೆ, ಉತ್ಕಲಾಧಿಪತಿಯ ಅನೇಕ ಭಯಭೀತಿಗಳು ದೂರವಾದವು.

ಈ ಗಜಪತಿಗೆ ಮಲೆಬೆನ್ನೂರಿನಲ್ಲಿದ್ದ ತನ್ನ ಮಗ ವೀರಭದ್ರದೇವ ಹಾಗೂ ನರಹರಿಪಾತ್ರರ ಮೂಲ ಉದ್ದೇಶ್ಯವೇನೆಂದು ತಿಳಿದಮೇಲೆ ಅವರ ಬಗ್ಗೆ ಇದ್ದ ಎಲ್ಲಾ ದುರಾಗ್ರಹವು ಮಾಯವಾಗಿತ್ತು. ನರಹರಿಪಾತ್ರನು ಮೊದಲಿಗಿಂತಲೂ ಹೆಚ್ಚಿಗೆ ಪ್ರಿಯವ್ಯಕ್ತಿಯಾದನು. ಅವನೊಂದಿಗೆ ಜಗನ್ಮೋಹಿನಿಯ ವಿವಾಹವನ್ನು ಕೂಡಲೇ ನೆರವೇರಿಸಿ, ಆ ಮೂಲಕ ಜಗನ್ಮೋಹಿನಿಯ ಸಂರಕ್ಷಣೆಯ ಹೊರೆಯಿಂದ ಬಿಡುಗಡೆಯಾಗಲು ಆಶಿಸಿ, ನರಹರಿಯನ್ನು ಅಂತರಂಗಕ್ಕೆ ಕರೆಸಿಕೊಂಡು ಆ ಪ್ರಸ್ತಾಪ ತೆಗೆದನು.

"ಮಗು, ನರಹರಿ, ನಿನ್ನೊಂದಿಗೆ ಒಂದು ಆಪ್ತವಿಷಯವನ್ನು ಮಾತನಾಡಲು ಬಹಳ ದಿನಗಳಿಂದ ಈ ಸಮಯಕ್ಕಾಗಿ ಕಾದಿದ್ದೇನೆ. ಶ್ರೀ ಜಗನ್ನಾಥನು ಇದೊಂದು ಕೋರಿಕೆಯನ್ನು ಈಡೇರಿಸಿಕೊಟ್ಟರೆ ನಾನು ಧನ್ಯ."

ಎಂದು ಹೇಳಿ ಕೆಲಕಾಲ ಮೌನವಾಗಿ ಕುಳಿತನು. ಅನಂತರ ಹೇಳಿದನು.

"ಒಂದೇ ಒಂದು ಕೋರಿಕೆ, ಇದು ಈಡೇರಿಬಿಟ್ಟರೆ ನನ್ನಂಥ ಭಾಗ್ಯಶಾಲಿಯಿಲ್ಲ. ನಾನು ಬಹಳದಿನಗಳಿಂದ ಕಟ್ಟುತ್ತಾ ಬಂದಿರುವ ಹೊಂಗನಸು ಇದು. ದೈವೇಚ್ಛೆಯಿಂದ ಇದು ನನಸಾಗಬೇಕು."

ಎಂದು ಹೇಳಿ, ಕಣ್ಣುಮುಚ್ಚಿ ಅಂತರ್ಮುಖಿಯಾಗಿ ಕುಳಿತನು.

"ನರಹರಿ, ನಿನ್ನಲ್ಲಿ ನನ್ನದೊಂದು ಕೋರಿಕೆ ಇದೆ, ನೀನು ಅದನ್ನು ನಡೆಸಿಕೊಡಬೇಕು" ಮತ್ತೆ ಬಡಬಡಿಸಿದನು.

"ಅಪ್ಪಾಜಿ, ಅದನ್ನು ನೀವು ಕೋರಿಕೆ ಎನ್ನಬಾರದು, ಅಪ್ಪಣೆ ಎನ್ನಬೇಕು. ಅದೇನೆಂದು ತಿಳಿಸಿದರೆ, ಅದನ್ನು ಶಿರದಲ್ಲಿಟ್ಟು ನಡೆಯುತ್ತೇನೆ."

"ಬೇರೆ ವಿಷಯಗಳಲ್ಲಿ ನೀನು ಹೀಗೆ ನುಡಿದಿದ್ದರೆ, ನೀನು ನುಡಿದಂತೆ ನಡೆಯುವವನೆಂದು ನಾನು ಸಂದೇಹಪಡುತ್ತಿರಲಿಲ್ಲ. ಆದರೆ ಈ ವಿಷಯ ತುಂಬಾ ಗಹನವೂ, ಸೂಕ್ಷ್ಮವೂ ಆದ ಸಂಗತಿ. ಇದರಲ್ಲಿ ನಿನ್ನ ಆದರ್ಶಗಳ ಬಲಿದಾನದ ಪ್ರಶ್ನೆ ಇದೆ!"

"ನನ್ನ ಸರ್ವಸ್ವವೂ ತಮ್ಮದೇ ಆಗಿರುವಾಗ ಬೇರೆ ಬಲಿದಾನ ಯಾವುದು ಅಪ್ಪಾಜಿ? ನಾನು ನೀವು ರೂಪಿಸಿದ ವಿಗ್ರಹ. ಇದರಲ್ಲಿ ತುಂಬಿರುವುದು ತಮ್ಮ ಜೀವದುಸಿರು. ಇದನ್ನು ತಾವು ಇಷ್ಟದಂತೆ ಉಪಯೋಗಿಸಿಕೊಳ್ಳಬೇಕೇ ಹೊರತು, ನನ್ನನ್ನು ತಾವು ಕೇಳಬಾರದು!"

"ಮಗು ನರಹರಿ, ನೀನು ನಿನ್ನ ಯೋಗ್ಯತೆಗೆ ತಕ್ಕ ರೀತಿಯಲ್ಲಿ ನುಡಿಯುತ್ತಿದ್ದಿ. ನನ್ನ ವಿಷಯದಲ್ಲಿ ನಿನಗಿರುವ ಪ್ರೀತಿ ವಿಶ್ವಾಸಗಳಿಗೂ, ಅಭಿಮಾನ ಗೌರವಗಳಿಗೂ ನಾನು ತುಂಬಾ ಋಣಿಯಾಗಿದ್ದೇನೆ. ಆದರೂ ನಾನು ಹೇಳಲಿರುವ ವಿಷಯ ನಿನ್ನ 'ಸ್ವಯಿಚ್ಛೆ'ಯನ್ನು ಕುರಿತದ್ದು. ನಿನ್ನ ಮನಸ್ಸಿಗೆ ಅಹಿತವಾಗುವ ಯಾವ ಕೃತ್ಯವನ್ನೂ ನಾನು ನಿನ್ನಿಂದ ಮಾಡಿಸಲು ನನಗೆ ಇಷ್ಟವಿಲ್ಲವೆಂತಲೇ ಇಷ್ಟೆಲ್ಲಾ ಮಾತು ಹೇಳಬೇಕಾಗಿದೆ."

"ಅಪ್ಪಾಜಿ, ನೀವು ಬೆಳೆಸಿ ದೊಡ್ಡವನನ್ನಾಗಿ ಮಾಡಿದ ಮಗು ನಾನು. ನನ್ನೊಂದಿಗೆ ನಿಮಗೆ ಯಾವ ಸಂಕೋಚ, ಶಂಕೆ ಬೇಡ. ಅದೇನು ಸಂಗತಿ ಎಂದು ಅಪ್ಪಣೆ ಕೊಡಿಸಬೇಕು. ತಮ್ಮ ಅಭೀಷ್ಟ ಸಾಧನೆಗೆ ನಾನು ಯಾವ ಸಾಹಸಮಾಡಲೂ ಸಿದ್ಧನಿದ್ದೇನೆ"

"ನೀನು ಬೇರಾವ ಸಾಹಸಕ್ಕೂ ಕೈಯ್ಯಿಕ್ಕುವ ಕಾರಣವಿಲ್ಲ ನರಹರಿ. ನಾನು ನಿನ್ನ ಕಲ್ಯಾಣದ ದೃಷ್ಟಿಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಈ ಪ್ರಸ್ತಾಪ ಮಾಡುತ್ತಿದ್ದೇನೆ. ನನ್ನ ಬಗ್ಗೆ ನಿನಗಿರುವ ಎಲ್ಲ ಪ್ರೀತಿ, ವಿಶ್ವಾಸಗಳ ಸಂಕೇತ ಈ ನನ್ನ ಆಶಯ. ಅದನ್ನು ಚಿರಬಾಂಧವ್ಯದ ಭದ್ರವಾದ ಬುನಾದಿಯಮೇಲೆ ನಿಲ್ಲಿಸಬೇಕೆಂದೇ ನನ್ನ ಆಶಯ. ನಿನ್ನೊಡನೆ ಯಾವ ಮುಚ್ಚುಮರೆ ಬೇಡ. ನನ್ನ ಮನಸ್ಸಿನಲ್ಲಿ ಇರುವುದನ್ನು ತಿಳಿಸುತ್ತಿದ್ದೇನೆ. ಆ ದುರುಳ ಕೃಷ್ಣದೇವರಾಯನು ಉತ್ಕಲಕ್ಕೆ ಶನಿಗ್ರಹದಂತೆ ಬಂದು ಪೀಡಿಸುತ್ತಿದ್ದಾನೆ. ಜಗನ್ಮೋಹಿನಿಯಲ್ಲಿ ಮೋಹಗೊಂಡರುವ ಆ ಮೋಹಾಂಧ ರಾಯನು ಜಗನ್ಮೋಹಿನಿಯನ್ನು ಮದುವೆಯಾಗುವ ದುರುದ್ದೇಶದಿಂದ ಉತ್ಕಲದಮೇಲೆ ದಂಡೆತ್ತಿಬಂದು, ಈಗ ನನ್ನಿಂದ ಅಪಮಾನಿತನಾದಮೇಲೆ, ಅವಳಮೇಲೆ ಸೇಡು ತೀರಿಸಿಗೂಳ್ಳಲು ನಿರ್ಧರಿಸಿದ್ದಾನೆ. ಅಂದರೆ ಜಗನ್ಮೋಹಿನಿಯನ್ನು ಸೆರೆ ಹಿಡಿದು ಅವಳನ್ನು ತನ್ನ ಕುದುರೆಯಕಾಲಿಗೆ ಲಾಳ ಹೊಡೆಯುವ ಕಮ್ಮಾರನಿಗೆ ಮದುವೆಮಾಡಿಕೊಟ್ಟು ಆ ಮೂಲಕ ನನ್ನ

ವಂಶಕ್ಕೆ ಶಾಶ್ವತವಾದ ಕಲಂಕ ಹಚ್ಚಲು ನಿಶ್ಚಯಿಸಿದ್ದಾನೆ. ತನ್ನ ಮಾತನ್ನೂ, ಪ್ರತಿಜ್ಞೆಯನ್ನೂ ಜನ ನಕ್ಕು ಪರಿಹಾಸ್ಯಮಾಡಲೆಂದು ಸಿಂಹಾದ್ರಿಯಮೇಲೆ ಶಿಲಾರೂಪದಲ್ಲಿ ಬರೆಸಿರುವ ಸಂಗತಿಯನ್ನು ನೀನೇ ಬಲ್ಲೆ. ಆ ಧೂರ್ತ ರಾಯನು ಉತ್ಕಲಕ್ಕೆ ಮಾಡಿರುವ ಈ ಅಪಮಾನ ವನ್ನು ನೋಡಿ ನಾಡಿನ ಜನತೆ ಕ್ಷುಬ್ಧವಾಗಿದೆ ಏಕೆಂದರೆ. ಕೃಷ್ಣದೇವ ರಾಯನು ಮಾಡಿದ ಪ್ರತಿಜ್ಞೆಯಂತೆ ನಡೆಯುವ ಸಾಮ್ರಾಟ. ಈಗ ಅವನ ಕೈಯಿಂದ ಜಗನ್ಮೋಹಿನಿಯನ್ನು ರಕ್ಷಿಸಬೇಕಾಗಿದೆ. ಇದು ತುಂಬಾ ಪ್ರಯಾಸದ ಕೆಲಸ........ಜಗನ್ಮೋಹಿನಿಯು ತನ್ನ ಕೈಯ್ಯಿಂದ ತಪ್ಪಿಸಿಕೊಂಡು ಹೋಗದಂತೆ, ನನ್ನ ಸಾಮ್ರಾಜ್ಯದ ಮೂಲೆಮೂಲೆಗಳಲ್ಲಿ ಚಾರರನ್ನು ನೇಮಿಸಿದ್ದಾನಂತೆ. ಪೊಟ್ಟನೂರಿನಲ್ಲೂ ಅನೇಕಜನ ರಾಯನ ಗುಪ್ತ ಚಾರರು ವೇಷಾಂತರಗಳಲ್ಲಿ ಇದ್ದು—ನಮ್ಮ ಚಲನವಲನಗಳನ್ನು ತಮ್ಮ ರಾಯನಿಗೆ ವರದಿಮಾಡುತ್ತಿದ್ದಾರೆಂದೂ ಕೇಳಿದೆ. ಪ್ರಸಂಗ ಹೀಗಿದ್ದರೆ—ಉತ್ಕಲಕ್ಕೆ ಗಂಡಾಂತರವೊದಗಿದಂತೆಯೇ ಸರಿ. ರಾಯನು ಇನ್ನು ಕೆಲವೇ ದಿನಗಳಲ್ಲಿ ಉತ್ಕಲದಮೇಲೆ ಧಾಳಿಯಿಡಲು ತನ್ನ ಸೈನ್ಯದೊಂದಿಗೆ ಬರಲಿರುವುದಾಗಿ ಈಗಷ್ಟೇ ದೂತರ ಮುಖೇನ ಕೇಳಿದೆ. ರಾಯನು ದಂಡೆತ್ತಿ ಬಂದರೆ ಅವನ ಕೈಯಿಂದ ಜಗನ್ಮೋಹಿನಿಯನ್ನು ರಕ್ಷಿಸುವುದು ಕಷ್ಟದಕೆಲಸ. ಈ ಕಾರ್ಯವನ್ನು ನಿನಗೆ ವಹಿಸುವ ಆಲೋಚನೆ ನನ್ನದು........"

"ನಾನು ತಮ್ಮ ಬಳಿಯಲ್ಲಿ ಇರುವತನಕ ತಮಗೆ ಯಾರ ಭೀತಿಯೂ ಬೇಡ ಅಪ್ಪಾಜಿ, ಜಗನ್ಮೋಹಿನಿಯ ರಕ್ಷಣೆಯ ಭಾರವನ್ನು ನನಗೆ ವಹಿಸಿ ತಾವು ನಿಶ್ಚಿಂತೆಯಿಂದ ಇರಿ!"

"ನನ್ನ ಅಭೀಷ್ಟವೂ ಅದೇ ಆಗಿದೆ ಮಗು, ಜಗನ್ಮೋಹಿನಿಯ ರಕ್ಷಣೆಯ ಭಾರವನ್ನು ನಿನಗೆ ವಹಿಸಿಕೊಟ್ಟರೆ ನನಗೆ ಎಷ್ಟೋ ಧೈರ್ಯ. ನಾನೂ ನಿನಗಾಗಿ ಇಷ್ಟುದಿನ ಎದುರುನೋಡುತ್ತಿದ್ದೆ. ನೀನು ದೇವದೂತನಂತೆ ಇಲ್ಲಿಗೆ ಬಂದಿರುವಿ?" ಎಂದು ನಿಟ್ಟುಸಿರುಬಿಟ್ಟನು—ಒಂದು ನಿಮಿಷ ತಡೆದು ಮತ್ತೆ ಹೇಳಿದನು.

"ಈಗ ನಿನ್ನಿಂದ ಒಂದು ಕೆಲಸವಾಗಬೇಕಾಗಿದೆ. ನೀನು ಮೊದಲು ಜಗನ್ಮೋಹಿನಿಯನ್ನು ವಿವಾಹವಾಗಿ, ಅವಳ ಕನ್ಯಾಸೆರೆಯನ್ನು ಬಿಡಿಸು. ಅವಳು ಕನ್ಯೆಯಾಗಿ ಉಳಿಯುವತನಕ ಅವಳಮೇಲೆ ರಾಯನ ಕಣ್ಣು ತಪ್ಪಿದ್ದಲ್ಲ. ಅವಳನ್ನು ನೀನು ವಿವಾಹವಾದ ವಾರ್ತೆಯನ್ನು ಕೃಷ್ಣದೇವರಾಯನು ಕೇಳಿದರೆ, ಅವಳನ್ನು ಕುದುರೆಗೆ ಲಾಳ ಹೊಡೆಯುವ ಕಮ್ಮಾರನಿಗೆ ಕೊಟ್ಟು ಮದುವೆ ಮಾಡುವ ರಾಯನ ಪ್ರತಿಜ್ಞೆಯು ಸುಳ್ಳಾಗುತ್ತದೆ. ರಾಯನ ಪ್ರತಿಜ್ಞಾಭಂಗವಾದರೆ, ಅವನು ಉತ್ಕಲಕ್ಕೆ ಮಾಡಿರುವ ಅಪಮಾನಕ್ಕೆ ತಕ್ಕ ಸೇಡುತೀರಿಸಿಕೊಂಡಂತೆ ಆಗುತ್ತದೆ. ಇದು ರಾಯನಿಗೆ ಆಗುವ ಒಂದು ಪರಾಭವವೇ ಸರಿ!"

ಈ ಮಾತು ಕೇಳಿ ನರಹರಿಯು ದಂಗುಬಡಿದು ಕುಳಿತನು. ಗಜಪತಿ ಬಾಯಲ್ಲಿ ಈ ವಿವಾಹದ ಮಾತು, ಹೀಗೆ ಬಂದೀತೆಂದು ಅವನು ಕನಸು ಮನಸಿನಲ್ಲೂ ಎಣಿಸಿರಲಿಲ್ಲ,

ಹಿಂದೆ ಈ ಮಾತು ಬಂದಿದ್ದರೆ, ಆಗ ನರಹರಿ ತನಗಿಂತ ಬೇರೆ ಭಾಗ್ಯಶಾಲಿ ಇಲ್ಲವೆಂದು ತಿಳಿಯುತ್ತಿದ್ದನೋ ಏನೋ! ಆಗ ನರಹರಿ ಪಾತ್ರನು ಜಗನ್ಮೋಹಿನಿಯನ್ನು ವಿವಾಹವಾಗಲು ಹಾತೊರೆಯುತ್ತಿದ್ದನು. ಆದರೆ ಈಗ? ಪರಿಸ್ಥಿತಿ ಬದಲಾಗಿತ್ತು. ಅವನು ಜಗನ್ಮೋಹಿನಿಯ ಕೈಗೆ ಎಟುಕುವ ವ್ಯಕ್ತಿಯಾಗಿದ್ದರೂ, ಈ ವಿವಾಹಕ್ಕೆ ಆತಂಕವಾಗಿದ್ದ ಮಹಾರಾಣಿ ಲಕ್ಷ್ಮೀಬಾಯಿ ವಿಜಯನಗರದ ಸೆರೆಮನೆಯಲ್ಲಿ ಕೊಳೆಯುತ್ತಿದ್ದರೂ ನರಹರಿಪಾತ್ರನು ಮಾತ್ರ ಜಗನ್ಮೋಹಿನಿಯನ್ನು ವಿವಾಹವಾಗಲು ಸಿದ್ಧನಾಗಿರಲಿಲ್ಲ. ಗಜಪತಿಯ ಕೋರಿಕೆಯನ್ನು ಈಡೇರಿಸಿ ಸುವ್ಯವಸ್ಥಿತಿಯಲ್ಲಿ ಇರಲಿಲ್ಲ. ಇದಲ್ಲವೇ ವಿಸ್ಮಯ, ವೈಚಿತ್ರ. ಬೇಕೂ ಎಂದಾಗ ದೊರೆಯದೇ ಹೋಗುವ ವಸ್ತು, ಬೇಡವೆಂದರೆ ತಿರಸ್ಕರಿಸಿದಾಗ, ಮೇಲೆಬಿದ್ದು ಬರುವುದಂತೆ! ನರಹರಿಪಾತ್ರನ ವಿಷಯದಲ್ಲಿ ಜಗನ್ಮೋಹಿನಿಯ ವಿವಾಹದ ಪ್ರಶ್ನೆ ಹೀಗೆಯೇ ಆಯಿತು. ಅವನು ಇಚ್ಛಿಸಿದಾಗ, ನೆರವೇರಲಿಲ್ಲ. ಈಗ ಬೇಡವೆನಿಸುವಾಗ ಕಾದುಕುಳಿತಿತ್ತು!

ನರಹರಿ ವಿಚಾರಮಗ್ನನಾಗಿ ಕುಳಿತುದನ್ನು ನೋಡಿ, ಗಜಪತಿಗೆ ಅದೇನೆನಿಸಿತೋ, ಅವನೇ ಮಾತು ತೆಗೆದನು.

"ಏಕೆ ನರಹರಿ, ಹಾಗೆ ಯೋಚಿಸುತ್ತಾ ಕುಳಿತೆ? ಬಹುಶಃ ನಿನಗೆ ನನ್ನ ಮಾತು ಅಪ್ರಿಯವಾಯಿತೆಂದು ತೋರುತ್ತದೆ. ನಿನ್ನ ಮನಸ್ಸಿನಲ್ಲಿ ಇರುವುದನ್ನು ನನಗೆ ಖಚಿತವಾಗಿ ತಿಳಿಸಿಬಿಡು—ನಿನಗೆ ಜಗನ್ಮೋಹಿನಿ ಯನ್ನು ವಿವಾಹವಾಗಲು ಇಷ್ಟವಿಲ್ಲವೆ?"

ಗಜಪತಿಯ ಧ್ವನಿಯಲ್ಲಿ ಆತಂಕವಿತ್ತು.

"ಜಗನ್ಮೋಹಿನಿಯಂತ ರತ್ನವನ್ನು ನನ್ನದಾಗಿ ಮಾಡಿಕೊಳ್ಳುವ ಪುಣ್ಯ ನನಗಿದೆಯೇ ಅಪ್ಪಾಜಿ! ಅವಳನ್ನು ಮದುವೆಯಾಗಲು ನನಗೆ ಇಷ್ಟವಿಲ್ಲವೆ? ಯಾರು ಅನುಪಮ ಸೌಂದರ್ಯ ಲಾವಣ್ಯಗಳಿಗೆ ಬೆರಗಾಗಿ, ಕೃಷ್ಣದೇವರಾಯನು ಉತ್ಕಲದಮೇಲೆ ದಂಡೆತ್ತಿ ಬಂದಿರುವನೋ ಆ ಕನ್ಯಾ ರತ್ನವು ನನ್ನದಾಗುವುದಾದರೆ—ನನಗಿಂತ ಬೇರೆ ಭಾಗ್ಯಶಾಲಿ ಈ ಜಗತ್ತಿನಲ್ಲಿ ಉಂಟೇ ಅಪ್ಪಾಜಿ!

"ಹಾಗಾದರೆ ಏಕೆ ಸಮ್ಮತಿಸಲು ಯೋಚನೆ?"

"ಬೇರೆ ಪ್ರಸಂಗದಲ್ಲಿ ಆಗಿದ್ದರೆ ನೀವು ನನ್ನ ಸಮ್ಮತಿಗಾಗಿ ಕಾಯಲೇಬೇಕಾಗಿರಲಿಲ್ಲ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ನಾನು ಆ ಮಾತನ್ನು ಹೇಳಲಾರದ ಸ್ಥಿತಿಯಲ್ಲಿ ಇದ್ದೇನೆ!"

"ಏಕೆ?"

"ನಾನು ಸದ್ಯದ ಪರಿಸ್ಥಿತಿಯಲ್ಲಿ ಜಗನ್ಮೋಹಿನಿಯನ್ನು ವಿವಾಹವಾಗುವಂತೆ ಇಲ್ಲ!"

"ಅಂದರೆ?"

"ಈಗ ನಮ್ಮ ತಾಯ್ನಾಡಿಗೆ ಬಂದಿರುವ ಗಂಡಾಂತರ ನಿವಾರಣೆಯಾಗದಹೊರತು ನನ್ನ ಎಲ್ಲ ಸುಖಭೋಗಗಳಿಗೆ ತಿಲಾಂಜಲಿಯನ್ನು ಇತ್ತಿದ್ದೇನೆ. ಉತ್ಕಲದಿಂದ ಶತ್ರುಗಳನ್ನು ಹಿಮ್ಮೆಟ್ಟಿಸಿದ ಹೊರತು—ನಾನು ಸುಪ್ಪತ್ತಿಗೆಯಮೇಲೆ ಮಲಗುವುದಿಲ್ಲ. ರಾಜೋಚಿತವಾದ ಆಹಾರವನ್ನು ಸೇವಿಸುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದೇನೆ ಅಪ್ಪಾಜಿ! ಈಗ ನಮ್ಮ ತಾಯಿನಾಡಿಗೆಅತ್ಯಂತ ಕಷ್ಟದ ಸಮಯ ಪ್ರಾಪ್ತವಾಗಿದೆ. ಉತ್ಕಲಪ್ರಾಂತ್ಯದ ಬಹುಭಾಗ ಶತ್ರುಗಳ ವಶವಾಗಿ, ಉತ್ಕಲದ ಅಸ್ಥಿತ್ವಕ್ಕೇ ಧಕ್ಕೆಯುಂಟಾಗಿದೆ. ಸಹಸ್ರಸಂಖ್ಯೆಯಲ್ಲಿ ಉತ್ಕಲದ ಯೋಧರು ನಾಡಿನರಕ್ಷಣೆಗಾಗಿ ತಮ್ಮಸರ್ವಸ್ವ

ತ್ಯಾಗಮಾಡುತ್ತಿದ್ದಾರೆ. ಎಲ್ಲೆಲ್ಲಿ ನೋಡಿದರೂ ಪ್ರಜೆಗಳ ಆರ್ತನಾದ. ಯುದ್ಧದಲ್ಲಿ ತಂದೆಗಳನ್ನು ಕಳೆದುಕೊಂಡ ಮಕ್ಕಳೂ, ಗಂಡಂದಿರನ್ನು ಕಳೆದುಕೊಂಡ ಪತ್ನಿಯರೂ, ಅಣ್ಣತಮ್ಮಂದಿರನ್ನು ಕಳೆದುಕೊಂಡ ಅಕ್ಕತಂಗಿಯರೂ, ಮಕ್ಕಳನ್ನು ಕಳೆದುಕೊಂಡ ತಾಯಿತಂದೆಯರೂ—ಮಾಡುವ ಆರ್ತನಾದಕ್ಕೆ ಕಲ್ಲೂ ಕಣ್ಣೀರಿಡುತ್ತದೆ. ಎಲ್ಲೆಲ್ಲಿ ನೋಡಿದರೂ ಹಾಹಾಕಾರ! ಅಶಾಂತಿ! ಇಂತಹ ಪರಿಸ್ಥಿತಿ ಇರುವಾಗ ಉತ್ಕಲದಿಂದ ಶತ್ರುಗಳನ್ನು ಹೊರದೂಡುವ ಪ್ರತಿಯೊಬ್ಬ ದೇಶಪ್ರೇಮಿಯ ಕರ್ತವ್ಯ! ಇಂತಹ ದಾರುಣಪರಿಸ್ಥಿತಿಯಲ್ಲಿ ಜಗನ್ಮೋಹಿನಿಯನ್ನು ಹೇಗೆ ವರಿಸಲಿ ಅಪ್ಪಾಜಿ!"

—ಎಂದು ಕಳಕಳಿಯಿಂದ ಹೇಳಿದ.

"ಹೌದು ಮಗು, ನಿನ್ನ ಮಾತು ನಿಜ. ಈಗ ದೇಶಕ್ಕೆ ಒಂದು ದೊಡ್ಡ ಗಂಡಾಂತರ ಒದಗಿದೆ. ಸುಖಸಂತೃಪ್ತಿಗಳ ಆಗರವಾಗಿ, ವೈಭವದಿಂದಿದ್ದ ರಾಷ್ಟ್ರ ಇಂದು ಶತ್ರುಗಳಿಗೆ ಸಿಕ್ಕಿ ಜರ್ಜರಿಸಿ, ಶ್ಮಶಾನ ಸಾದೃಶ್ಯವಾಗಿದೆ. ಜನತೆ ಯುದ್ಧದ ಬೆಂಕಿಯಲ್ಲಿ ಬೆಂದುಹೋಗಿದೆ. ಎಲ್ಲೆಲ್ಲೂ ಹಾಹಾಕಾರ! ದುಃಖ! ಅಶಾಂತಿ ಅತೃಪ್ತಿಗಳು ಹೆಡೆ ಎತ್ತಿವೆ. ಪರಕೀಯರ ಧಾಳಿಯಿಂದ! ಇಂತಹ ವಿಷಮಪರಿಸ್ಥಿತಿಯಲ್ಲಿ ಜಗನ್ಮೋಹಿನಿಯ ವಿವಾಹ ಮಾಡಬೇಕಾದೀತೆಂದು ನಾನು ನೆನೆದಿರಲಿಲ್ಲ! ಮಂಗಳಕಾರ್ಯವಾದ ಈ ವಿವಾಹ, ಪ್ರಜಾಕೋಟಿಯ ಆನಂದದಾಯಕ ಉತ್ಸವವಾಗಬೇಕಾದ ಈ ಕಾರ್ಯ, ಇಂದು ದೇಶದ ಪ್ರಕ್ಷುಬ್ಧವಾತಾವರಣದಲ್ಲಿ ನಡೆಯಬೇಕಾಗಿ ಬಂದಿದೆ! ನಿಜವಾಗಿ ಹೇಳುವುದಾದರೆ, ಈಗ ವಿವಾಹ ಮಾಡಲು ನನಗೂ ಇಷ್ಟವಿಲ್ಲ. ಆದರೆ ನಿರ್ವಾಹವಿಲ್ಲವಾಗಿದೆ !!

"ಅಪ್ಪಾಜಿ, ನಾನು ನಿಮ್ಮೊಂದಿಗೆ ಖಚಿತವಾಗಿ ಮಾತನಾಡುತ್ತೇನೆಂದು ಅನ್ಯಥಾ ತಿಳಿಯಬಾರದು. ನನ್ನ ಮನಸ್ಸಿನಲ್ಲಿ ಇರುವುದೆಲ್ಲವನ್ನು ತಮ್ಮ ಮುಂದೆ ಸ್ಪಷ್ಟವಾಗಿ ಇಡುತ್ತಿದ್ದೇನೆ. ಎರಡು ಮೂರು ದೃಷ್ಟಿಗಳಲ್ಲಿ ಈ ವಿವಾಹ ಸದ್ಯದ ಪರಿಸ್ಥಿತಿಯಲ್ಲಿ ಅಸಂಭವವಾಗಿದೆ. ಏಕೆಂದರೆ ನಾನು ಜಗನ್ಮೋಹಿನಿಯನ್ನು ವಿವಾಹವಾಗುವುದಾದರೆ, ಮಹಾರಾಣಿಯವರ ಸಮ್ಮತಿಯನ್ನು ಅವರ ಆಶೀರ್ವಾದವನ್ನು ಪಡೆದುಕೊಂಡೇ ವಿವಾಹವಾಗಬೇಕೆಂದು ನಾನು ಸಂಕಲ್ಪಮಾಡಿದ್ದೇನೆ. ನಾನು ಈಗ ನನ್ನ ಸಂಕಲ್ಪ

ವನ್ನು ಮುರಿದು ಈ ವಿವಾಹವಾದರೆ ನನ್ನ ಮನಸ್ಸಿಗೆ ನಿಜವಾದ ಶಾಂತಿ, ನೆಮ್ಮದಿಗಳು ಉಂಟಾಗದೆ ಹೋಗಬಹುದು. ಮತ್ತೊಂದು ಕಾರಣವೇ ನೆಂದರೆ ಶತ್ರುವಿನ ಧಾಳಿಯಿಂದ ನಮ್ಮ ನಾಡು ಮುಕ್ತಿಯಿಲ್ಲದೆ ತತ್ತರಿಸು ತ್ತಿರುವ ಸದ್ಯದ ವಿಷಮಪರಿಸ್ಥಿತಿಯಲ್ಲಿ ಜಗನ್ಮೋಹಿನಿಯನ್ನು ಮದುವೆ ಯಾಗಲು ನಾನು ಸಿದ್ಧನಾಗಿಲ್ಲ. ಏಕೆಂದರೆ, ಯಾರೂ ಮನೆಯಲ್ಲಿ ಸತ್ತ ಶವವನ್ನು ಇಟ್ಟುಕೊಂಡು, ಮದುವೆಯಂತಹ ಮಂಗಳಕಾರ್ಯವನ್ನು ಆಚರಿಸುವುದಿಲ್ಲ. ಈಗ ಉತ್ಕಲದ ಸ್ಥಿತಿ ಸಾವು ನೋವುಗಳಿಂದ ತುಂಬಿದ ಮನೆಯಾಗಿದೆ. ಇಂತಹ ಪರಿಸ್ಥಿತಿಯಲ್ಲಿ ವಿವಾಹದಂತಹ ಮಂಗಳಕಾರ್ಯ ನಡೆದರೆ, ಅದು ಎಂದಿಗೂ ಶುಭವಾಗದು. ಅಲ್ಲದೆ ಸದಾ ಶತ್ರುಭೀತಿ ಯಿಂದ ಕಂಗೆಡುತ್ತಿರುವ ಜನತೆಗೆ ಇದೊಂದು ವಿಡಂಬನೆಯಾಗಿ ತೋರದೆ? ಮತ್ತೊಂದು ದೃಷ್ಟಿಯಲ್ಲೂ ನಾನು ಆಲೋಚಿಸಿದ್ದೇನೆ. ಈಗ ನಡೆಯು ತ್ತಿರುವ ಮಾರಣಹೋಮದಲ್ಲಿ ಯಾರಗತಿ ಏನಾಗುವುದೆಂದು ಹೇಳಲು ಬರುವಂತೆ ಇಲ್ಲ. ಹೀಗಿರುವಲ್ಲಿ ನನ್ನನ್ನು ವಿವಾಹವಾಗಿ, ಮುಂದೆ ಜಗನ್ಮೋಹಿನಿ ಆಜೀವಪರ್ಯಂತ ಪಶ್ಚಾತ್ತಾಪಪಡುವಂತಹ ಪ್ರಸಂಗ ಬರಬಾರದೆಂದು—ನಾನು ಸದ್ಯದ ಪರಿಸ್ಥಿತಿಯಲ್ಲಿ ವಿವಾಹಕ್ಕೆ ಸಮ್ಮತಿಸು ತ್ತಿಲ್ಲ. ಇಷ್ಟರಮೇಲೆ ನಿಮ್ಮ ಚಿತ್ತ. ನೀವು ಅಪ್ಪಣೆಮಾಡಿದರೆ, ನಾನು ನರಕಕ್ಕೆ ಹೋಗಲು ಸಿದ್ಧನೇ ಹೊರತು ತಮ್ಮ ಅಪ್ಪಣೆಯನ್ನು ಮೀರಿ ನಡೆಯುವುದಿಲ್ಲ."

ಎಂದು ಸ್ಪಷ್ಟವಾಗಿ ಹೇಳಿದನು, ನರಹರಿಪಾತ್ರ.

ಈ ಮಾತಿನಿಂದ ಗಜಪತಿಯಮೇಲೆ ಅನಿರೀಕ್ಷಿತ ಪರಿಣಾಮ ಉಂಟಾಯಿತು. ಗಜಪತಿಯೂ ನರಹರಿ ಹೇಳಿದ್ದ ಎಲ್ಲ ಮಾತನ್ನು ಸಮಾಧಾನಚಿತ್ತದಲ್ಲಿ ಆಲೋಚಿಸಿದನು. ಈಗ ಗಜಪತಿಗೆ ಧರ್ಮಸಂಕಟ ಮೊದಗಿತ್ತು. ಅತ್ತ ಜಗನ್ಮೋಹಿನಿಯ ಹಿತರಕ್ಷಣೆ! ಇತ್ತ ನರಹರಿಪಾತ್ರನ ವಚನಪರಿಪಾಲನೆ. ಜಗನ್ಮೋಹಿನಿಯನ್ನು ವಿವಾಹವಾದರೆ ನರಹರಿ ಪಾತ್ರನ ಪ್ರತಿಜ್ಞಾಭಂಗವಾಗುತ್ತದೆ. ಜಗನ್ಮೋಹಿನಿಯ ವಿವಾಹ ನಿಂತು ಹೋದರೆ, ಕೃಷ್ಣದೇವರಾಯನ ಪ್ರತಿಜ್ಞೆ ಈಡೇರಿಸಲು ಅವಕಾಶ ಕೊಟ್ಟಂ ತಾಗುತ್ತದೆ. ಗಜಪತಿಗೆ, ಒಬ್ಬರ ಸಲುವಾಗಿ ಮತ್ತೊಬ್ಬರ ಬಲಿದಾನ

ಇಷ್ಟವಿರಲಿಲ್ಲ. ಅವನಿಗೆ ಇಬ್ಬರೂ ಪ್ರಿಯರೇ. ಇಬ್ಬರ ಸುಖಸಂತೋಷ ಗಳೂ ಅಮೂಲ್ಯವಾದವೇ. ಅತ್ತ ಪ್ರೀತಿಯ ಪುತ್ರಿ! ಇತ್ತ ಪ್ರೀತಿಯ ಪುತ್ರ—ಇಬ್ಬರೂ ಸುಖವಾಗಿ ಇರಬೇಕೆಂಬುದೇ ಗಜಪತಿಯ ಆಶಯ! ಅಂತಲೇ ಈ ವಿವಾಹದ ಯೋಜನೆ. ಆದರೆ ವಿಧಿ ಅವನ ನಿರೀಕ್ಷೆಗೆ ಮೀರಿದ ರೀತಿಯಲ್ಲಿ ಅದನ್ನು ವಿಫಲಗೊಳಿಸಿದ್ದ.

ಕಡೆಗೂ ಗಜಪತಿಯ ಪುತ್ರವಾತ್ಸಲ್ಯ ಪುತ್ರಿವಾತ್ಸಲ್ಯಕ್ಕಿಂತ ಮೇಲ್ಗೈ ಯಾಯಿತು. ನರಹರಿಯನ್ನು ಅವನ ಇಷ್ಟದ ವಿರುದ್ಧ ಬಲಾತ್ಕರಿಸಿ, ಅವನ ಸಮ್ಮತಿಯನ್ನು ದೊರಕಿಸಿಕೊಂಡು ಮಾಡುವ ವಿವಾಹಕ್ಕಿಂತ, ಇನ್ನು ಕೆಲವುಕಾಲ ಜಗನ್ಮೋಹಿನಿಯ ವಿವಾಹವನ್ನು ಮುಂದಕ್ಕೆ ಹಾಕು ವುದು ಸೂಕ್ತವೆನಿಸಿತು. ಸಂತೋಷಪ್ರದನಾದ ಈ ಮಂಗಳಕಾರ್ಯದಿಂದ ಯಾರಿಗೂ ಯಾವ ಬಗೆಯ ಅಸಂತೋಷ ಉಂಟಾಗಬಾರದೆಂದು ಗಜಪತಿ ಇಚ್ಛಿಸಿದನು. ಬಲಾತ್ಕಾರದಿಂದ ಮಾಡುವ ವಿವಾಹ ಎಂದಿಗೂ ಶ್ರೇಯಸ್ಕರ ವಲ್ಲ ಎಂಬುದು ಗಜಪತಿಗೆ ಚನ್ನಾಗಿ ತಿಳಿದಿತ್ತು. ಅಂತಲೇ ಅವನು ನರಹರಿ ಪಾತ್ರನನ್ನು ಈ ವಿವಾಹಕ್ಕೆ ಬಲಾತ್ಕಾರಪಡಿಸಲಿಲ್ಲ.

"ಮಗೂ ನರಹರಿ, ನಿನ್ನನ್ನು ಹೆತ್ತ ತಾಯಿತಂದೆಗಳು ನಿಜವಾಗಿಯೂ ಪುಣ್ಯವಂತರು. ನಿನ್ನಿಂದ ಅವರ ಕೀರ್ತಿ ಬೆಳೆಯಲಿ. ನಿನ್ನಂಥ ವೀರ ಪುತ್ರನನ್ನು ಪಡೆದ ಉತ್ಕಲ ಮಾತೆ ಧನ್ಯಳು! ನೀನು ನಿನ್ನಂತಹ ವೀರರಿಗೊಪ್ಪುವ ಮಾತನ್ನಾಡಿದ್ದೀಯೆ. ನಿನ್ನ ಮಾತು, ಅದರ ಹಿಂದೆ ಅಡಗಿರುವ ಪ್ರೀತಿ ವಿಶ್ವಾಸಗಳನ್ನು ಬಲ್ಲ ನಾನು, ನಿನ್ನ ಮನಸ್ಸಿನ ವಿರುದ್ಧ ನಿನಗೆ ಅಪ್ರಿಯವಾದ ಈ ಕಾರ್ಯಕ್ಕೆ ಹೇಗೆ ಬಲವಂತಪಡಿಸಲಿ?

ಜಗನ್ಮೋಹಿನಿಯ ರಕ್ಷಣೆಯ ಬಗ್ಗೆ ಇದ್ದ ಕಳವಳ ನಿನಗೆ ಅಪ್ರಿಯ ವಾದ ಕಾರ್ಯವನ್ನು ಅರುಹಿತು. ಆದರೆ, ನಿನಗೆ ಇಷ್ಟವಾಗದ ಕಾರ್ಯ ವನ್ನು ಮಾಡಿಸಲು ನಾನು ಎಂದಿಗೂ ಸಿದ್ಧನಿಲ್ಲ. ಜಗನ್ಮೋಹಿನಿ ಎಂದಿ ದ್ದರೂ ನಿನ್ನ ವಧು! ಅವಳನ್ನು ನೀನು ಎಂದುಬೇಕಾದರೂ ವಿವಾಹವಾಗ ಬಹುದು. ಅವಳ ರಕ್ಷಣೆಯ ಭಾರ ನಿನ್ನದು. ಎಲ್ಲವನ್ನು ತಿಳಿದ ನಿನಗೆ ಹೆಚ್ಚಿಗೆ ಹೇಳಲು ಸಮರ್ಥನಲ್ಲ. ಆದರೂ ಈ ಒಂದುಮಾತು ನೆನಪಿ ನಲ್ಲಿಡು, ನೀವಿಬ್ಬರು ವಿವಾಹ ವೇದಿಕೆಯಮೇಲೆ ಮಂಗಳಸೂತ್ರದಿಂದ

ಒಂದಾಗಿಲ್ಲದೆ ಇದ್ದರೆ ಏನಂತೆ? ಈ ಗಳಿಗೆಯಿಂದಲೇ ನೀವಿಬ್ಬರು ಸತಿಪತಿ ಗಳೆಂದು ನಾನು ತಿಳಿದಿದ್ದೇನೆ" ಎಂದು ಹೇಳಿ, ನಮಸ್ಕರಿಸಲು ಬಗ್ಗಿದ ನರಹರಿಯನ್ನು ಪ್ರೀತಿಯಿಂದ ನೇವರಿಸಿದ. ಆ ಗಳಿಗೆಯಲ್ಲಿ ಗಜಪತಿಯ ಕಣ್ಣು ತುಂಬಾ ಆನಂದಭಾಷ್ಪ! ಅವರ ಬಹುಕಾಲದ ಆಶಯ ಇಂದು ಮಾತಿನ ರೂಪದಲ್ಲಿ ಪ್ರಕಟವಾಗಿತ್ತು. ಅವರ ಬಹುಕಾಲದ ಹೊರೆ ಇಂದು ಕೆಳಕ್ಕಿಳಿಸಿದಂತೆಯಾಗಿ, ಮನಸ್ಸಿಗೆ ಎಷ್ಟೋ ಹಗುರವಾಯಿತು! ಅವರು ಏನನ್ನೋ ಕನಸುಕಾಣುತ್ತಾ ಬಹಳಹೊತ್ತು ಹಾಗೇ ಕುಳಿತಿದ್ದರು. ಅಲ್ಲಿಂದ ನರಹರಿಯು ಯಾವಾಗ ಹೊರಗೆಹೋದನೋ ಅವನಿಗೆ ತಿಳಿಯ ಲಿಲ್ಲ. ಅವನು ಕಣ್ಣುಬಿಟ್ಟು ನೋಡಿದಾಗ ಅಲ್ಲಿ ನರಹರಿಯು ಇರಲಿಲ್ಲ.

ಈಗ ಮಾಡಲೇಬೇಕಾದ ಅನೇಕ ಕರ್ತವ್ಯಗಳಲ್ಲಿ ಕೃಷ್ಣದೇವ ರಾಯನು ಉತ್ಕಲದ ಪಾತ್ರತೇಜಕ್ಕೆ ಮಸಿ ಬಳಿಯಲು ಸಿಂಹಾದ್ರಿಯಲ್ಲಿ ನಿಲ್ಲಿಸಿದ್ದ ಶಿಲಾಲೇಖನವನ್ನು ಅಳಿಸಿ, ಆಮೂಲಕ ಉತ್ಕಲದ ಮರ್ಯಾದೆ ಯನ್ನು ಕಾಪಾಡುವುದು ಪ್ರಪ್ರಥಮ ಕರ್ತವ್ಯವಾಗಿತ್ತು. ಅಂತೆಯೇ ಉತ್ಕಲದ ರಾಜ್ಯಲಕ್ಷ್ಮಿಯಂತೆ ಇದ್ದ ಜಗನ್ಮೋಹಿನಿಗೆ ಮಾಡಿರುವ ಅಪ ಮಾನವನ್ನು ತಕ್ಕರೀತಿಯಲ್ಲಿ ತೊಡೆದುಹಾಕುವುದು ಅನಿವಾರ್ಯವಾಗಿತ್ತು. ಆತ್ಮಗೌರವವುಳ್ಳ, ದೇಶಪ್ರೇಮಿಯಾದ ಯಾವ ವ್ಯಕ್ತಿಯು ತನ್ನ ಕಷ್ಟಕ್ಕಾದ ತನ್ನ ರಾಷ್ಟ್ರದ ನಾರೀಮಣಿಗಾದ ಅಪಮಾನವನ್ನು ಎಂದಿಗೂ ಸಹಿಸನು ಎಂಬ ಮಾತನ್ನು ಕೃಷ್ಣದೇವರಾಯನಿಗೆ ಚೆನ್ನಾಗಿ ಮಂದಟ್ಟುಮಾಡಿಕೊಡ ಬೇಕಾಗಿತ್ತು. ಅಂತೆಯೇ, ನರಹರಿಪಾತ್ರ ಹಾಗೂ ಗಜಪತಿ ಕುಳಿತು ದೀರ್ಘವಾಗಿ ಯೋಚಿಸಿ, ಒಂದು ಯೋಜನೆಯನ್ನು ಸಿದ್ಧಪಡಿಸಿದರು. ಅದನ್ನು ಕಾರ್ಯರೂಪಕ್ಕೆ ತರುವ ಜವಾಬ್ದಾರಿಯನ್ನು ನರಹರಿಪಾತ್ರನೇ ವಹಿಸಿಕೊಂಡನು.

ಸಿಂಹಾದ್ರಿಯಲ್ಲಿ ಬೀಡುಬಿಟ್ಟಿದ್ದ ಕೃಷ್ಣದೇವರಾಯನ ಯುದ್ಧಸಿದ್ಧತೆ ಗಳೆಲ್ಲಾ ಪೂರೈಸುತ್ತಾ ಬಂದಿತ್ತು ಇನ್ನು ಕೆಲವೇ ದಿನಗಳಲ್ಲಿ ರಾಯನು ಪೊಟ್ಟನೂರಿನಮೇಲೆ ದಂಡೆತ್ತಿ ಹೋಗುವವನಿದ್ದನು. ಈಗಿನಿಂದಲೇ ಶಿಬಿರದಲ್ಲಿ ಸಮರೋತ್ಸಾಹಕ್ಕೆ ಆರಂಭವಾಗಿತ್ತು. ಸೈನಿಕರು ಮುಂದೆ ಬರುವ ಧಾಳಿಗೆ ಈಗಿನಿಂದಲೇ ಶಸ್ತ್ರಾಸ್ತ್ರಗಳನ್ನು ಸಿದ್ಧಗೊಳಿಸಿಕೊಂಡರು

ದೀರ್ಘಕಾಲದ ವಿಶ್ರಾಂತಿ ಅವರಲ್ಲಿ ನವಚೈತನ್ಯವನ್ನು ತುಂಬಿತ್ತು. ಎಲ್ಲರೂ ಬರಲಿರುವ ಯುದ್ಧಕ್ಕಾಗಿ, ಹಾತೊರೆಯುತ್ತಿದ್ದರು. ಇಂತಿರುವಲ್ಲಿ, ಸಿಂಹಾದ್ರಿಯಮೇಲೆ ರಾಯನ ಪ್ರತಾಪದ ಸಂಕೇತವಾಗಿ ನಿಂತಿದ್ದ ಶಿಲಾ ಲೇಖನದ ಕಂಭವನ್ನು ಯಾರೋ ಭಿನ್ನಗೊಳಿಸಿ, ಶಿಲಾಲೇಖನವನ್ನು ಮಸಿಯಿಂದ ಸಂಪೂರ್ಣವಾಗಿ ಅಳಿಸಿಹೋಗಿದ್ದರು! ಇಷ್ಟೆಲ್ಲ ಕಾರ್ಯ ಕೃಷ್ಣ ದೇವರಾಯನ ಸೈನಿಕರ ಕಣ್ಣೆದುರಿನಲ್ಲಿಯೇ ನಡೆದಿತ್ತು! ಅದೇ ಆಶ್ಚರ್ಯ. ಸೈನಿಕರಿಂದ ಸದಾ ಸರ್ಪಕಾವಲು ಕಾಯಲ್ಪಡುತ್ತಿದ್ದ ಬೆಟ್ಟದಮೇಲೆ ಈ ಕಾರ್‍ಯವನ್ನು ಯಾರು ಮಾಡಿದರು, ಹೇಗೆ ಮಾಡಿದರು ಎಂಬುದು ರಾಯನಿಗೆ ವಿಸ್ಮಯವನ್ನುಂಟುಮಾಡಿತು. ಅವನು ಈ ಬಗ್ಗೆ ಸೂಕ್ಷ್ಮವಿಚಾರಣೆ ಕೈಗೊಂಡನು.

ಸಿಂಹಾದ್ರಿಯ ನರಸಿಂಹಸ್ವಾಮಿಯ ಕೀರ್ತಿ ಕೇಳದವರು ಆ ನಾಡಿನಲ್ಲಿ ವಿರಳ. ಅದು ಆ ಪ್ರಾಂತ್ಯದ ಜನಕ್ಕೆಲ್ಲ ಯಾತ್ರಾಸ್ಥಳ. ಅಲ್ಲಿಗೆ ಅನೇಕ ಭಕ್ತಾದಿಗಳು ವರ್ಷದ ಎಲ್ಲಾ ಕಾಲದಲ್ಲಿ ಬರುತ್ತಿದ್ದರು. ಸ್ವಾಮಿಗೆ ಹರಕೆ ಒಪ್ಪಿಸಲು, ಮದುವೆಮುಂಜಿಗಳನ್ನು ಮಾಡಲು ದೂರದೇಶಗಳಿಂದ ಯಾತ್ರಿಕರು ಬರುತ್ತಿದ್ದರು. ಮದುವೆಯ ಕಾಲದಲ್ಲಿ ಅಂತೂ ಸಿಂಹಾದ್ರಿಯಲ್ಲಿ ಯಾತ್ರಿಕರು ಅಧಿಕಸಂಖ್ಯೆಯಲ್ಲಿ ನೆರೆಯುತ್ತಿದ್ದರು. ಸಿಂಹಾದ್ರಿಯ ಬೆಟ್ಟದಕಿಬ್ಬಿಯಲ್ಲೇ ಬೀಡುಬಿಟ್ಟಿದ್ದ ಸೈನಿಕ ಶಿಬಿರದ ಮೂಲಕವೇ ಪ್ರತಿಯೊಬ್ಬ ಯಾತ್ರಿಕನೂ ಬರಬೇಕಾಗಿತ್ತು. ಯಾತ್ರಿಕವೇಷದಲ್ಲಿ ಗುಪ್ತ ಚಾರರು ಬಂದು, ತಮ್ಮ ಸೈನ್ಯದ ಗುಟ್ಟನ್ನು ತಿಳಿದುಕೊಳ್ಳುವ ಸಂಭವವಿದ್ದುದರಿಂದ ಅಲ್ಲಿಗೆ ಬರುತ್ತಿದ್ದ ಪ್ರತಿಯೊಬ್ಬ ಯಾತ್ರಿಕನನ್ನೂ ಚೆನ್ನಾಗಿ ಪರಿಶೀಲಿಸಿ, ಅನಂತರವೇ ಬೆಟ್ಟವನ್ನು ಹತ್ತಲು ಬಿಡುತ್ತಿದ್ದುದು. ಈ ಕಾರ್‍ಯಕ್ಕೆಂದೇ ಕೆಲವು ಅಧಿಕಾರಿಗಳು ನೇಮಿತರಾಗಿದ್ದರು. ಅವರ ಅನುಮತಿ ದೊರಕಿಸಿಕೊಳ್ಳದೆ ಯಾರೂ ಬೆಟ್ಟವನ್ನು ಹತ್ತುವಂತೆ ಇರಲಿಲ್ಲ.

ಸಿಂಹಾದ್ರಿ ನರಸಿಂಹಸ್ವಾಮಿಯನ್ನು ಸೇವಿಸಲು ಬಂದಿದ್ದ ಒಂದು ಮದುವೆಯ ತಂಡ ಸೈನಿಕರ ಗಮನ ಸೆಳೆದಿತ್ತು. ಆ ಗುಂಪಿನಲ್ಲಿ ಸುಮಾರು ಐವತ್ತುಮಂದಿ ಇದ್ದರು. ಅವರೆಲ್ಲರೂ ಬಹುಮಟ್ಟಿಗೆ—ಹರೆಯದ ಆಳುಗಳೇ. ಅವರ ಯಜಮಾನ ಸುಮಾರು ಎಂಭತ್ತು ವರ್ಷದ ಮುದುಕ.

ಅವನು ತನ್ನ ಮಕ್ಕಳು ಮೊಮ್ಮಕ್ಕಳೊಂದಿಗೆ, ತನ್ನ ಮೊಮ್ಮಗನ ಲಗ್ನಕ್ಕಾಗಿ ಬೆಟ್ಟಕ್ಕೆ ಬಂದಿದ್ದ. ಅದು ಅವನ ಬಹಳ ದಿನಗಳ ಹರಕೆಯಾಗಿತ್ತು. ಅದನ್ನು ತೀರಿಸಕೊಳ್ಳುವ ಸಲುವಾಗಿ, ಇಂದು ತನ್ನ ಸಂಸಾರಸಮೇತ, ಗಾಡಿಗಳಲ್ಲಿ ಸ್ವಾಮಿಯ ದರ್ಶನಕ್ಕೆ ಬಂದಿದ್ದ.

ಅವರು ಶಿಬಿರದ ಬಳಿಗೆ ಬರುತ್ತಲೇ ಅವರನ್ನು ತಪಾಸಣೆಮಾಡಲು ಸೈನಿಕ ಅಧಿಕಾರಿಯ ಮುಂದೆ ಕರೆದೊಯ್ಯಲಾಯಿತು.

"ನೀವು ನಿಜವಾಗಿಯೂ ಮದುವೆಗೆಂದು ಬಂದ ಯಾತ್ರಿಕರೊ? ನಿಮ್ಮಲ್ಲಿ ಯಾರಾದರೂ ಗೂಢಚಾರರು ಛದ್ಮ ವೇಷದಲ್ಲಿ ಬಂದಿದ್ದೀರೋ?

—ಎಂದು ಪರಿಹಾಸ್ಯಮಾಡುತ್ತ ಆ ಅಧಿಕಾರಿ, ತಂಡದ ಯಜಮಾನನನ್ನು ಕೇಳಿದನು.

"ಅಯ್ಯೋ ದೇವರೇ, ನಾವು ಮದುವೆಗೆಂದು ಬಂದರೂ ಇನ್ನೂ ವಿಘ್ನವೇ?" ಎಂದು ಉದ್ಗಾರ ತೆಗೆದು ಹೇಳಿದ, ಆ ಮುದುಕ.

"ನೋಡಿ ಸ್ವಾಮಿ, ನಮಗೂ ರಾಜಕೀಯಕ್ಕೂ ಯಾವ ಸಂಬಂಧವೂ ಇಲ್ಲ. ನಾವು ಏನೂ ತಿಳಿಯದ ಹಳ್ಳಿಯ ಮಕ್ಕಳು. ರಾಜಕೀಯ ನಮಗೇಕೆ? ಯಾವ ರಾಯನಿಗೆ ರಾಜ್ಯ ಬಂದರೂ ನಾವು ರಾಗಿ ಬೀಸುವುದು ತಪ್ಪುತ್ತದೆಯೆ? ಉತ್ತು, ಬಿತ್ತು, ಬೆಳೆ ತೆಗೆಯುವುದಕ್ಕೆ ನಮಗೆ ವಿರಾಮವಿಲ್ಲ. ಇನ್ನು ರಾಜಕೀಯಕ್ಕೆಲ್ಲಿಂದ ತಂದೇವು ಹೊತ್ತು? ಯಾರು ಗೆದ್ದರೆ ನಮಗೇನು! ನಾವು ಮಾಡಬೇಕಾದ ಕಷ್ಟ ನಮಗೆ ತಪ್ಪಿಲ್ಲ. ಹೀಗಿರುವಾಗ ನಮಗೆ ನೀವೂ ಒಂದೆ, ಅವರೂ ಒಂದೇ!"

—ಎಂದು ನಕ್ಕ.

"ಏ! ಮುದುಕ ಬಾಯಿಗೆ ಬಂದದ್ದೆಲ್ಲ ಹರಟಬೇಡ. ಕೇಳಿದ್ದಕ್ಕೆ ಉತ್ತರ ಕೊಡು. ನೀನು ಯಾರು? ನಿನ್ನ ಹೆಸರೇನು? ಇಲ್ಲಿಗೆ ಇಷ್ಟು ಜನರನ್ನು ಕಟ್ಟಿಕೊಂಡು ಏಕೆ ಬಂದಿದ್ದಿ?"

"ಯಾಕೆ ದೇವ್ರು! ನನ್ನ ಹಂಗ್ ಗದರ್ತೀರಿ! ನಾನೇನಂದೆ ಬುದ್ಧಿ ಅನ್ನಬಾರ್ದ ಮಾತು. ನನ್ನಮೇಲೆ ಯಾಕೆ ಅಂಗೆ ಸಿಟ್ಟುಮಾಡ್ತೀರಿ! ನನ್ನ ಹೆಸರು ಚೂಟಿಪಾಳ್ಯಂ ರಾಮಲಿಂಗರೆಡ್ಡಿ ಅಂತ. ಇಲ್ಲಿಗೆ ನಮ್ಮೂರು ಇಪ್ಪತ್ತೈದು ಮೈಲಿ ಆಗುತ್ತೆ. ನಮ್ಮ ಕೆಲಸ ಜಿರಾಯಿತಿ. ಅಂದರೆ

ಆರಂಬ. ನಾನೇ ಮನೆಗೆ ಯಜಮಾನ. ಇವರೆಲ್ಲ ನನ್ನ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು. ನಾವು ಬಂದಿರೋದು ಹರಕೆ ಒಪ್ಪಿಸೋಕೆ. ನನ್ನ ಮೊಮ್ಮಗನಿಗೆ, ಮೊಮ್ಮಗಳ ಮಗಳನ್ನು ಕೊಟ್ಟು ಮದುವೆ ನಿಶ್ಚಯ ಮಾಡಿದ್ದೀವಿ. ಅದನ್ನ ಸ್ವಾಮಿ ಸನ್ನಿಧೀಲಿ ಮಾಡ್ತೀವಿ ಅಂತ ಹರಕೆ ಇತ್ತು. ಈಗ ತೀರಿಸೋಕೆ ಬಂದಿದ್ದೀವಿ. ಇವರಿಲ್ಲಿ ಯಾರೂ ಹೊರಗಿನೋರು ಇಲ್ಲ. ಎಲ್ಲಾ ನಮ್ಮ ಮನೆಯೋರೇ!" ಎಂದ.

"ಅಲ್ಲಯ್ಯ, ನಿಂದು ದೊಡ್ಡ ಸಂಸಾರನಾದ್ರೂ ನಲವತ್ತು ಐವತ್ತು ಮಂದಿ ಗಂಡಸ್ರು ಇರೋ ಸಂಸಾರ ಅಂತ ಅಂದ್ರೆ, ನಮಗೆ ಯಾಕೋ ಅನುಮಾನ ಆಗ್ತಿದೆ. ಎಲ್ಲರೂ ವಯಸ್ಸಿಗೆ ಬಂದಿರೋರೇ ಇದ್ದಾಗಿದೆ! ಆಗಲಿ, ನೀನು ಇಲ್ಲೇ ಇರು. ನಾವು ಗಾಡಿಗಳನ್ನು ಶೋಧಿಸುತ್ತೇವೆ!"

ಎಂದು ಹೇಳಿ ಆ ಮುದುಕನನ್ನು ಅಲ್ಲೇ ಇರಿಸಿಕೊಂಡು ಗಾಡಿಗಳನ್ನು ಶೋಧಿಸಿದರು. ಗಾಡಿಗಳಲ್ಲಿ ಯಾವ ಆಕ್ಷೇಪಕರವಾದ ಸಾಮಾನುಗಳಾಗಲೀ, ಆಯುಧಗಳಾಗಲೀ ದೊರೆಯಲಿಲ್ಲ. ಹೀಗಾಗಿ ಅವರನ್ನು ನಿರ್ವಾಹವಿಲ್ಲದೆ ಬಿಡಬೇಕಾಯಿತು.

ಅವರು ಬೆಟ್ಟದ ತಪ್ಪಲಲ್ಲಿ ಗಾಡಿಗಳನ್ನು ಬಿಟ್ಟು ಬೆಟ್ಟವನ್ನೇರಿ ಅಲ್ಲಿದ್ದ ಛತ್ರದಲ್ಲಿ ಆ ರಾತ್ರಿಯನ್ನು ಕಳೆದು ಮಾರನೆಯ ದಿನ ಲಗ್ನ, ದೇವರ ಪೂಜೆ ಇತ್ಯಾದಿಗಳನ್ನು ಮುಗಿಸಿಕೊಂಡು ಬೆಟ್ಟವಿಳಿದು, ಅದೇದಿನ ರಾತ್ರಿ ಗಾಡಿ ಕಟ್ಟಿ ತಮ್ಮ ಊರಿನ ಅಭಿಮುಖವಾಗಿ ಹೊರಟರು.

ಅವರು ಹೊರಟುಹೋದ ಮಾರನೆಯ ದಿನವೇ ಬೆಟ್ಟದಮೇಲಿದ್ದ ಶಿಲಾಲೇಖನದ ಕಂಬ ಭಿನ್ನಗೊಳಿಸಲ್ಪಟ್ಟ ಸಂಗತಿ ವರದಿಯಾದುದು. ಅದಕ್ಕೂ ಈ ವಿವಾಹದ ತಂಡಕ್ಕೂ ಯಾವುದೋ ಸಂಬಂಧವಿರಬೇಕೆಂದು ತರ್ಕಿಸಿ, ಅವರನ್ನು ಹಿಡಿಯಲು ಪ್ರಯತ್ನಿಸಿ, ವಿಫಲರಾದರು.

ನಡೆದಿದ್ದ ಸಂಗತಿ ಏನೆಂದರೆ, ನರಹರಿಪಾತ್ರನು ತನ್ನ ಕೆಲವು ಸಂಗಡಿಗರೊಂದಿಗೆ, ಮದುವೆಯ ಗುಂಪಿನವರಂತೆ ವೇಷಾಂತರದಲ್ಲಿ ಬಂದು, ಪ್ರವೇಶ ದೊರಕಿಸಿಕೊಂಡನು. ವಿವಾಹವೆಲ್ಲ ಮುಗಿದು ಎಲ್ಲರೂ ಬೆಟ್ಟವಿಳಿದಂತೆ ತೋರಿದರೂ, ಅಲ್ಲಿನ ಛತ್ರದಲ್ಲಿ ಕೆಲವರು ಅಡಗಿದ್ದು ರಾತ್ರಿ ಸಮಯ ಸಾಧಿಸಿ, ಶಿಲಾಲೇಖನವನ್ನು ಕಾಯುತ್ತಿದ್ದ ಸೈನಿಕರ ಮೇಲೆ

ಬಿದ್ದು ಅವರನ್ನು ಕಟ್ಟಿಹಾಕಿ, ತಾವು ಬಂದ ಕೆಲಸವನ್ನು ಪೂರ್ತಿಮಾಡಿ ಹೋಗಿದ್ದರು. ಅವರು ಆ ರಾತ್ರಿಯೆಲ್ಲಾ ಕಲ್ಲು ಗುಂಡುಗಳ ಮರೆಯಲ್ಲಿ ಅಡಗಿದ್ದು ಬೆಳಗಾದಮೇಲೆ ಕಡಿದಾದ ಇನ್ನೊಂದು ದಾರಿಯಲ್ಲಿ ಇಳಿದು, ತಮ್ಮ ಗುಂಪನ್ನು ಸಕಾಲದಲ್ಲಿ ಸೇರಿಕೊಂಡಿದ್ದರು.

ಮಾರನೆಯ ದಿನ ಬೆಳಿಗ್ಗೆ ಸೈನಿಕರ ಪಹರೆ ಬದಲಾಯಿಸಲು ಬೇರೆ ನಾಲ್ವರು ಸೈನಿಕರು ಬಂದಾಗಲೇ ನಡೆದಿದ್ದ ಸಂಗತಿ ಅರಿವಾದುದು. ಅಲ್ಲಿ ಕಂಬ ಭಗ್ನವಾಗಿ ನೆಲಕ್ಕೆ ಬಿದ್ದಿತ್ತು. ಅದರ ಬರಹವೆಲ್ಲಾ ಕಪ್ಪುಮಸಿ ಯಿಂದ ಅಳಸಿಹೋಗಿತ್ತು. ಪಹರೆ ಕಾಯುತ್ತಿದ್ದ ಸೈನಿಕರು ಬಾಯಿಗೆ ಬಟ್ಟೆ ತುರುಕಲ್ಪಟ್ಟು, ಕೈಕಾಲುಗಳಿಗೆ ಹಗ್ಗ ಬಿಗಿಯಲ್ಪಟ್ಟು ನರಳುತ್ತಾ ಅಲ್ಲಿ ಬಿದ್ದಿದ್ದರು. ಅವರ ಕಟ್ಟುಗಳನ್ನು ಬಿಚ್ಚಿ ಅವರಿಂದ ನಡೆದ ಸಂಗತಿ ಯನ್ನು ಕೇಳಿ, ಕೂಡಲೇ ಅವರನ್ನು ತಿಮ್ಮರಸನ ಬಳಿಗೆ ಕರೆದುಕೊಂಡು ಹೋದರು. ಅವರಲ್ಲಿ ಒಬ್ಬನ ಬಳಿ, ಕೃಷ್ಣದೇವನಿಗೆ ಬರೆದಿದ್ದ ಒಂದು ಪತ್ರ ದೊರೆತು, ಅದು ಯಾರ ಕೃತ್ಯವೆಂದು ವಿಶದಪಡಿಸಿತು.

"ಸ್ವಸ್ತಿ ಶ್ರೀಮನ್ಮಹಾರಾಜಾಧಿರಾಜ ಇತ್ಯಾದಿ ಬಿರುದಾಂಕಿತ ಶ್ರೀ ಕೃಷ್ಣದೇವರಾಯರಲ್ಲಿ ಗಜಪತಿಯು ಬರೆಯುವುದೇನೆಂದರೆ:—ತಮ್ಮ ಕೋರಿಕೆಯಂತೆ ಈ ಶಿಲಾಲೇಖನವನ್ನೇ ಅಳಿಸಲಾಗಿದೆ. ಇನ್ನಾದರೂ ತಿಳಿಯಿರಿ. ಉತ್ಕಲಪುತ್ರರು ರಣಹೇಡಿಗಳಲ್ಲ. ಅವರು ಗಂಡುಗಲಿಗಳು ! ತಮ್ಮ ತಾಯ್ನಾಡಿಗಾದ ಅಪಮಾನವನ್ನು ಅವರೆಂದಿಗೂ ಸಹಿಸರು ಎಂಬು ದನ್ನು ಚೆನ್ನಾಗಿ ನೆನಪಿನಲ್ಲಿಡಿ !

ನಿಮಗೆ ಪ್ರಾಣದಮೇಲೆ ಆಸೆಯಿದ್ದರೆ, ಜಗನ್ಮೋಹಿನಿಯ ತಂಟೆಗೆ ಬರದೆ ಕೂಡಲೇ ಉತ್ಕಲದಿಂದ ಹಿಂದಿರುಗುವುದು ಒಳ್ಳೆಯದು. ಇಲ್ಲದಿದ್ದರೆ ಜಗನ್ಮೋಹಿನಿಯೇ ನಿನ್ನ ಭಾಗದ ಮಾರಿ ಎಂದು ತಿಳಿ.

ಇಂತು ನಿನ್ನ ಪರಮಶತ್ರು,
ಪ್ರತಾಪರುದ್ರ ಗಜಪತಿ.

ಈ ಪತ್ರವನ್ನು ಓದಿಕೊಂಡು ಕೃಷ್ಣದೇವರಾಯನ ಮುಖ ಅಸಮಾ ಧಾನದಿಂದ ಕೆಂಪಾಯಿತು.

# ೧೨

ಕೃಷ್ಣದೇವರಾಯನು ಗಜಪತಿಯ ಓಲೆಗೆ ಉತ್ತರರೂಪವಾಗಿ ತನ್ನ ಸೈನ್ಯಸಮೇತ ಹೋಟು ಮಾರ್ಗಮಧ್ಯದಲ್ಲಿ ಎದುರಾದ ಅನೇಕ ದುರ್ಗ ಗಳನ್ನು ವಶಪಡಿಸಿಕೊಂಡು ಪೊಟ್ಟನೂರಿಗೆ ಸಮಿಾಪದಲ್ಲಿ ಬಂದು ಬೀಡು ಬಿಟ್ಟನು. ಪೊಟ್ಟನೂರು ಉತ್ಕಲದ ರಾಜಧಾನಿಯಾದ ಕಟಕಪುರಿಯನ್ನು ಬಿಟ್ಟರೆ ಅದೇ ಅತಿ ದೊಡ್ಡ ಪಟ್ಟಣ. ಅದು ಲಾಂಗುಲ್ಯ ನದಿಯ ಪಡುವಣ ಸೀಮೆಗೆ ಮುಖ್ಯಪಟ್ಟಣವಾಗಿತ್ತು. ಪೊಟ್ಟನೂರು ಜನಭರಿತವಾಗಿದ್ದು ಎಲ್ಲೆಲ್ಲು ನೋಡಿದರೂ ಶ್ರೀಮಂತರ ನಿವಾಸಗೃಹಗಳೇ ಕಾಣುತ್ತಿದ್ದವು. ಅದು ಉತ್ಕಲದ ಹೊಸ ರಾಜಧಾನಿಯಾಗಿದ್ದುದರಿಂದ ಅಲ್ಲಿ ರಾಜ ನಿವಾಸಕ್ಕೆ ತಕ್ಕ ಭವ್ಯಭವನಗಳೂ, ಅನೇಕ ಉಪವನಗಳೂ ಇದ್ದವು. ಪೊಟ್ಟನೂರು ದೊಡ್ಡ ವ್ಯಾಪಾರ ಕೇಂದ್ರವಾಗಿತ್ತು. ದೂರದೇಶಗಳಿಂದ ಬಂದ ವರ್ತಕರು ತಮ್ಮ ಮಳಿಗೆಗಳನ್ನು ತೆರೆದಿದ್ದರು. ಜನಭರಿತವಾದ ಸಂಪದ್ಯುಕ್ತವಾದ ಈ ನಗರಕ್ಕೆ ರಕ್ಷಣೆಗಾಗಿ ಎರಡು ಕೋಟೆಗಳು ಇದ್ದವು. ಹೊರಕೋಟೆಯು ತುಂಬಾ ಬಲವಾಗಿತ್ತು. ಅದರ ಒಳಗೆ ಇದ್ದ ವಿಶಾಲ ವಾದ ಪ್ರದೇಶದಲ್ಲಿ ಉತ್ಕಲಸೇನೆ ಪೊಟ್ಟನೂರಿನ ರಕ್ಷಣೆಗಾಗಿ ಸಿದ್ಧವಾಗಿ ಕಾಯುತ್ತಿತ್ತು.

ಪ್ರತಾಪರುದ್ರ ಗಜಪತಿಯು ಕೊಂಡವೀಡಿನಲ್ಲಿ ಕೃಷ್ಣದೇವರಾಯನಿಗೆ ಸೋತು ಹಿಮ್ಮೆಟ್ಟಿದವನು ಮತ್ತೆ ರಾಯನಿಗೆ ಯುದ್ಧ ಕೊಟ್ಟಿರಲಿಲ್ಲ. ಕೊಂಡವೀಡಿನ ಯುದ್ಧದಲ್ಲಿ ಗಜಪತಿಗೆ ಅಪಾರವಾದ ನಷ್ಟ ಉಂಟಾಗಿತ್ತು. ಆ ನಷ್ಟವನ್ನು ತುಂಬಿಕೊಳ್ಳಲು ಹೊಸದೊಂದು ಸೈನ್ಯವನ್ನೇ ಕೂಡಿಸುವ

ಪ್ರಯತ್ನದಲ್ಲಿ ಗಜಪತಿಯು ತೊಡಗಿದ್ದನು ಇಷ್ಟುಕಾಲದವರೆಗೂ. ಈಗ ಪೊಟ್ಟನೂರಿನಲ್ಲಿ ಸಾಕಷ್ಟು ಸೇನೆ ಸೇರಿತ್ತು. ಉತ್ಕಲಕ್ಕೆ ಒದಗಿದ್ದ ಗಂಡಾಂತರವನ್ನು ನೆನೆದು ಅಬಾಲವೃದ್ಧರಾದಿಯಾಗಿ ಎಲ್ಲರೂ ಕತ್ತಿ ಹಿರಿದು ಪೊಟ್ಟನೂರಿಗೆ ಬಂದಿದ್ದರು—ಮಾತೃಭೂಮಿಯ ರಕ್ಷಣೆಗಾಗಿ. ಹೀಗಾಗಿ ಪೊಟ್ಟನೂರಿನಲ್ಲಿ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಉತ್ಕಲದ ವೀರ ಪುತ್ರರು ತಾವಾಗಿ ಬಂದು ಸೇರಿದ್ದರು. ಪೊಟ್ಟನೂರಿನ ಯುದ್ಧದಲ್ಲಿ ಉತ್ಕಲದ ಭವಿಷ್ಯ ನಿರ್ಣಯವಾಗುವುದಿತ್ತು. ಅಂತಲೇ ಉತ್ಕಲದ ಸಾಮಂತರೂ, ಮಾಂಡಲೀಕರೂ ತಮ್ಮ ತಮ್ಮ ಸೈನ್ಯಗಳೊಂದಿಗೆ ಬಂದಿದ್ದರು. ಉತ್ಕಲ ಸಾಮ್ರಾಜ್ಯಕ್ಕೆ ಆಧಾರ ಸ್ತಂಭಗಳಂತೆ ಇದ್ದ ಮಹಾಪಾತ್ರರು ಮಾತ್ರ ಅಲ್ಲಿ ಇರಲಿಲ್ಲ. ಅವರಪೈಕಿ ಶಿರಶ್ಚಂದ್ರಮಹಾಪಾತ್ರ, ಬೋದಜಣ್ಣಮಹಾಪಾತ್ರ, ಕೇಶವಪಾತ್ರ, ಬಾಲಚಂದ್ರಮಹಾಪಾತ್ರ, ರಾಚಿರಾಜು, ಮೊದಲಾದ ವೀರರು ಕೊಂಡವೀಡು, ಕೊಂಡಪಲ್ಲಿಗಳಲ್ಲಿ ಕೃಷ್ಣದೇವರಾಯನ ಸೆರೆಮನೆಯಲ್ಲಿ ಇದ್ದರು. ಇನ್ನೇನು ಕೆಲವೇ ದಿನಗಳಲ್ಲಿ ಪೊಟ್ಟನೂರಿನ ಯುದ್ಧ ಸಂಭವಿಸುವುದೆನ್ನುವಾಗ, ಗಜಪತಿಯ ಅದೃಷ್ಟದಿಂದಲೆಂಬಂತೆ, ಕೊಂಡಪಲ್ಲಿಯಲ್ಲಿ ಸೆರೆಯಲ್ಲಿದ್ದ ಶಿರಶ್ಚಂದ್ರಮಹಾತ್ರ ಮತ್ತು ಬೋದಜಣ್ಣಮಹಾಪಾತ್ರರು ರಾಯನ ಸೆರೆಯಿಂದ ತಪ್ಪಿಸಿಕೊಂಡು ಪೊಟ್ಟನೂರಿಗೆ ಬಂದು, ಗಜಪತಿಯನ್ನು ಕೂಡಿಕೊಂಡಿದ್ದರು—ಅವರು ಹೇಗೆ ರಾಯನ ಸೆರೆಯಿಂದ ತಪ್ಪಿಸಿಕೊಂಡು ಬಂದರೆಂಬುದು ಯಾರಿಗೂ ಖಚಿತವಾಗಿ ತಿಳಿದಿರಲಿಲ್ಲ.

ಶಿರಶ್ಚಂದ್ರಮಹಾಪಾತ್ರ, ಬೋದಜಣ್ಣಮಹಾಪಾತ್ರ ಇವರಿಗಿಂತ ಮೊದಲೇ ಪೊಟ್ಟನೂರಿಗೆ ಬಂದು ಸೇರಿದ್ದ ಮಹಾಪಾತ್ರರಿಗೆ ಅವರ ಆಗಮನದಿಂದ ಹೆಚ್ಚು ಸಂತೋಷವಾಗಲಿಲ್ಲ. ಅವರು ಶತ್ರುಗಳ ವಶದಲ್ಲಿ ಬಹಳ ಕಾಲದಿಂದ ಇದ್ದ ಅವರಿಬ್ಬರನ್ನೂ, ಶತ್ರುಗಳನ್ನು ನೋಡುವಂತೆಯೇ ತಿರಸ್ಕಾರದಿಂದ ನೋಡುತ್ತಿದ್ದರು. ಹಿಂದೆ ಮಹಾಪಾತ್ರರ ನಾಯಕಮಣಿಯಾಗಿದ್ದ ಶಿರಶ್ಚಂದ್ರಪಾತ್ರನು ಅವರ ದೃಷ್ಟಿಯಲ್ಲಿ 'ಅಂತ್ಯಜ'ನಾಗಿದ್ದ. ಜಾತಿಭ್ರಷ್ಟನನ್ನು ನೋಡುವಂತೆ ಅವರು ಅವನನ್ನು ನೋಡುತ್ತಿದ್ದರು.

ಮೊದಲಿನಿಂದಲೂ ಈ ಮಹಾಪಾತ್ರರೇ ಉತ್ಕಲದ ಮೂಲಬಲ. ಅವರು ಉತ್ಕಲ ರಾಜೇಶ್ವರಿಯ ಅಂಗಾಂಗಗಳು ಇದ್ದಂತೆ. ಉತ್ಕಲ

ಸಾಮ್ರಾಜ್ಯವು ಹದಿನಾರು ವಿಭಾಗಗಳಾಗಿ ವಿಭಾಗಿಸಲ್ಪಟ್ಟು, ಒಂದೊಂದು ಭಾಗಕ್ಕೂ ಒಬ್ಬೊಬ್ಬ ಮಹಾಪಾತ್ರನು ಮಾಂಡಲೇಶ್ವರನಾಗಿದ್ದನು. ಅವರು ಉತ್ಕಲದ ರಾಜಬೊಕ್ಕಸಕ್ಕೆ ಸಲ್ಲಬೇಕಾದ ರಾಜಾದಾಯವನ್ನು ಸಲ್ಲಿಸುತ್ತಾ, ಸಾಮ್ರಾಟರ ಸೇನೆಯ ಕೆಲವಂಶವನ್ನು ಪೋಷಿಸುತ್ತಾ, ಒಳಾಡಳಿತದಲ್ಲಿ ಸ್ವತಂತ್ರ ರಾಜರಂತೆ ಇದ್ದರು. ಸಾಮ್ರಾಜ್ಯಕ್ಕೆ ಶತ್ರುಭಯ ಉಂಟಾದಾಗ, ಸಾಮ್ರಾಜ್ಯ ರಕ್ಷಣೆಗೆ ಸೈನ್ಯವನ್ನು ಒದಗಿಸಿಕೊಡುವುದರ ಜತೆಗೆ, ತಮ್ಮ ಮೂಲಬಲಗಳೊಂದಿಗೆ ಬಂದು ಗಜಪತಿಗೆ ನೆರವಾಗುತ್ತಿದ್ದರು. ಮಹಾಪಾತ್ರರು ತಮ್ಮ ಕರ್ತವ್ಯವನ್ನು ಸರಿಯಾಗಿ ಪಾಲಿಸುತ್ತಿದ್ದರೆ, ಅವರ ತಂಟೆಗೆ ಸಾಮ್ರಾಟರು ಬರುತ್ತಿರಲಿಲ್ಲ. ಮಹಾಪಾತ್ರರು ಒಂದಲ್ಲ ಒಂದು ರೀತಿಯಲ್ಲಿ ಸಮ್ರಾಟರ ಸಂಬಂಧಿಕರೇ ಆಗಿದ್ದುದರಿಂದ, ಅವರ ನಡುವೆ ಯಾವ ಬಗೆಯ ವೈಮನಸ್ಸಿಗೆ ಕಾರಣವಿರಲಿಲ್ಲ. ಅವರ ಅಧಿಕಾರ ಸಾಮಾನ್ಯವಾಗಿ ವಂಶಪಾರಂಪರ್ಯವಾಗಿ ನಡೆದುಬರುತ್ತಿತ್ತು. ಅವರೆಲ್ಲರೂ ಸಾಮ್ರಾಜ್ಯದ ಕಷ್ಟಸುಖಗಳಲ್ಲಿ ಒಂದು ಮನೆಯವರೆಂಬಂತೆ ನಡೆದ,ಕೊಳ್ಳುತ್ತಿದ್ದರು. ಅವರು ತಮ್ಮಲ್ಲೇ ಒಬ್ಬ ಮುಖಂಡನನ್ನು ಆರಿಸಿಕೊಂಡು ಆ ಮೂಲಕ ಸಾಮ್ರಾಟರೊಂದಿಗೆ ನೇರ ಸಂಪರ್ಕ ಹೊಂದಿದ್ದರು.

ಇದುವರೆಗೂ ಎಲ್ಲ ಮಹಾಪಾತ್ರರ ಪ್ರೀತಿವಿಶ್ವಾಸಗಳಿಗೆ ಪಾತ್ರನಾಗಿದ್ದ ಶಿರಶ್ಚಂದ್ರ ಮಹಾಪಾತ್ರನೇ ಮಹಾಪಾತ್ರರ ನಾಯಕನಾಗಿದ್ದನು. ಶಿರಶ್ಚಂದ್ರ ಮಹಾಪಾತ್ರನು ಕೃಷ್ಣದೇವರಾಯನ ಸೆರೆಮನೆಯಲ್ಲಿ ಇದ್ದು, ಮಹಾಪಾತ್ರರು ಕೇಶವಪಾತ್ರನ ಮಗ ಬಾಲಚಂದ್ರ ಮಹಾಪಾತ್ರನನ್ನು ತಮ್ಮ ನಾಯಕನನ್ನಾಗಿ ಆರಿಸಿಕೊಂಡು ಅವನ ನೇತೃತ್ವದಲ್ಲಿ ಪೊಟ್ಟನೂರಿನ ರಕ್ಷಣೆಗೆ ಧಾವಿಸಿಬಂದು, ಗಜಪತಿಯನ್ನು ಕೂಡಿಕೊಂಡಿದ್ದರು. ಇಂತಿರುವಲ್ಲಿ ಶಿರಶ್ಚಂದ್ರ ಮಹಾಪಾತ್ರ ಮತ್ತು ಬೋದಜಣ್ಣ ಮಹಾಪಾತ್ರರು ಕೃಷ್ಣದೇವರಾಯನ ಸೆರೆಮನೆಯಿಂದ ತಪ್ಪಿಸಿಕೊಂಡು ಪೊಟ್ಟನೂರಿಗೆ ಕೆಲವು ದಿನಗಳ ಹಿಂದೆ ಆಗಮಿಸಿದ್ದರು. ಈಗ ಮಹಾಪಾತ್ರರಿಗೆ ಶಿರಶ್ಚಂದ್ರ ಮಹಾಪಾತ್ರನನ್ನು ತಮ್ಮ ನಾಯಕನನ್ನಾಗಿ ಮಾಡಿಕೊಳ್ಳಬೇಕೆ? ಬಾಲಚಂದ್ರ ಮಹಾಪಾತ್ರನನ್ನು ನಾಯಕನನ್ನಾಗಿ ಮಾಡಿಕೊಳ್ಳ

ಬೇಕೇ ಎಂಬುದು ಸಮಸ್ಯೆಯಾಯಿತು. ಈ ಸಮಸ್ಯೆ ಬಹುಬೇಗನೆ ಇತ್ಯರ್ಥವಾಯಿತು.

ಮಹಾಪಾತ್ರರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬಿಸಿ ರಕ್ತದ ತರುಣರೇ ಇದ್ದುದರಿಂದ ಅವರು ಸಹಜವಾಗಿಯೇ ತಮ್ಮ ಆಸೆ ಆಕಾಂಕ್ಷೆಗಳನ್ನು ಪ್ರತಿಬಿಂಬಿಸುವ ತರುಣನಾದ ಬಾಲಚಂದ್ರಮಹಾಪಾತ್ರನನ್ನೇ ತಮ್ಮ ನಾಯಕನನ್ನಾಗಿ ಮತ್ತೆ ಆರಿಸಿದರು. ವಯಸ್ಸಿನಲ್ಲಿ ಹಿರಿಯರಾದ ಮಹಾ ಪಾತ್ರರಲ್ಲಿ ಅನೇಕರು ಕೃಷ್ಣರಾಯನ ನೆರೆಯಲ್ಲಿ ಇದ್ದರು. ಇನ್ನು ಉಳಿದ ಮಹಾತ್ರರು ತಮ್ಮ ನೆಚ್ಚಿನ ಶಿರಶ್ಚಂದ್ರಮಹಾಪಾತ್ರನನ್ನು ನಾಯಕನನ್ನಾಗಿ ಮಾಡಲೆಳಸಿ, ವಿಫಲರಾಗಿದ್ದರು. ಹೀಗಾಗಿ ಮಹಾಪಾತ್ರರ ಕೂಟದಲ್ಲಿ ಭಿನ್ನಾಭಿಪ್ರಾಯ ವೈಮನಸ್ಸುಗಳು ತಲೆದೋರಿ ಅವರಲ್ಲಿ ಒಮ್ಮತ, ಒಗ್ಗಟ್ಟು ಕಡಿಮೆಯಾಯಿತು. ಶಿರಶ್ಚಂದ್ರಮಹಾಪಾತ್ರನು ಪೊಟ್ಟನೂರಿನಲ್ಲಿ ಕಾಲಿರಿಸುವತನಕ ಅವರಲ್ಲಿ ಇದ್ದ ಒಗ್ಗಟ್ಟು, ಈಗ ನಾಯಕಪದವಿಯ ನಿಮಿತ್ತದಿಂದ ಇಲ್ಲವಾಯಿತು.

ಮಹಾಪಾತ್ರರಲ್ಲಿ ಹಠಾತ್ತನೆ ಉಂಟಾದ ಅಂತಃಕಲಹದ ಕಥೆ ಗಜಪತಿಯ ಕಿವಿಗೆ ಬೀಳದೆ ಇರಲಿಲ್ಲ. ಈ ವಾರ್ತೆಯನ್ನು ಕೇಳಿ ಪ್ರತಾಪರುದ್ರ ಗಜಪತಿಗೆ ತುಂಬಾ ವ್ಯಥೆಯುಂಟಾಯಿತು. ಪೊಟ್ಟನೂರಿನ ರಕ್ಷಣೆಗಾಗಿ ಬಂದಿದ್ದ ಮಹಾಪಾತ್ರರು, ಯಾವುದೋ ಕ್ಷುಲ್ಲಕ ಕಾರಣಕ್ಕಾಗಿ ತಮ್ಮಲ್ಲೇ ಬಡಿದಾಡುವುದು ಗಜಪತಿಗೆ ಪ್ರಿಯವಾಗಲಿಲ್ಲ ಅಂತಲೇ ಅವನು ಎರಡುಕಡೆಯ ಮಹಾಪಾತ್ರರನ್ನು ಬರಮಾಡಿಕೊಂಡು, ಅವರ ವೈಮನಸ್ಸಿನ ಕಾರಣ ಅರಿತು, ಅದನ್ನು ವಿಚಾರಿಸಿ ಅವರಲ್ಲಿ ಮೊದಲಿನ ಸ್ನೇಹ ಸೌಹಾರ್ದ ಭಾವನೆಗಳು ಬೆಳೆಯುವಂತೆ ಮಾಡಲು ಪ್ರಯತ್ನಿಸಿದನು.

ಈ ಪ್ರಯತ್ನದ ಪ್ರಥಮಯತ್ನಕ್ಕಾಗಿ ಹೊಸದಾಗಿ ಆರಿಸಲ್ಪಟ್ಟಿದ್ದ ಬಾಲಚಂದ್ರಮಹಾಪಾತ್ರ ಹಾಗೂ ಅವನ ಸಂಗಡಿಗರನ್ನು ಒಂದುದಿನ ಬರಮಾಡಿಕೊಂಡು ಶಿರಶ್ಚಂದ್ರಮಹಾಪಾತ್ರನಮೇಲಿನ ಆರೋಪಗಳನ್ನು ವಿಚಾರಿಸಿದನು. ಅವರು ಶಿರಶ್ಚಂದ್ರಮಹಾಪಾತ್ರನಮೇಲೆ ಅನೇಕ ಸ್ವಾಮಿದ್ರೋಹದ ಆರೋಪಣೆಗಳನ್ನು ಹೊರಿಸಿದರು. ಅವುಗಳಲ್ಲಿ ಪ್ರಮುಖವಾದುದು ಶಿರಶ್ಚಂದ್ರಮಹಾಪಾತ್ರನು ಶತ್ರುಗಳೊಂದಿಗೆ ಸೇರಿಕೊಂಡು

ಯಾವುದೋ ಪಿತೂರಿಮಾಡಲು ಪೊಟ್ಟನೂರಿಗೆ ಬಂದಿದ್ದಾನೆ ಎಂಬುದು. ಶಿರಶ್ಚಂದ್ರ ಮಹಾಪಾತ್ರ ಹಾಗೂ ಬೋದಜಣ್ಣ ಮಹಾಪಾತ್ರರು ಉತ್ಕಲ ವನ್ನ ಶತ್ರುಗಳ ಪಾಲುಮಾಡಲು ನಿರ್ಧರಿಸಿರುವ ದ್ರೋಹಿಗಳು. ಅವರು ಯಾವುದೋ ಪ್ರಲೋಭಕ್ಕಾಗಿ ಶತ್ರುಗಳ ಕಡೆಗೆ ಸೇರಿಕೊಂಡು, ಈಗ ಶತ್ರುಗಳ ಕೋರಿಕೆಯಂತೆ ಮತ್ತೆ ಯಾವುದೋ ವಿದ್ರೋಹದ ನಿಮಿತ್ತವಾಗಿ ಪೊಟ್ಟನೂರಿಗೆ ಬಂದಿದ್ದಾರೆ. ಅವರನ್ನು ನಂಬಬಾರದು. ಕೃಷ್ಣದೇವ ರಾಯನಲ್ಲಿ ಕ್ಷಮಾಪಣೆ ಕೇಳಿಕೊಂಡು ಬಿಡುಗಡೆಯಾಗಿ ರಾಯನ ಸೈನ್ಯ ದಲ್ಲಿ ಕೆಲವುಕಾಲ ಕೆಲಸಕ್ಕಿದ್ದ ಆ ದ್ರೋಹಿಗಳನ್ನು ನಂಬಬಾರದು! ಅಂತಹ ವರನ್ನು ನಾಯಕರನ್ನಾಗಿ ಮಾಡಿಕೊಂಡರೆ, ಪೊಟ್ಟನೂರನ್ನು ಅವರು ಸುಲಭವಾಗಿ ಶತ್ರುಗಳ ಪಾಲುಮಾಡುತ್ತಾರೆ. ಅವರನ್ನು ಕೂಡಲೇ ವಿಚಾರಣೆಮಾಡಿ ಶಿಕ್ಷಿಸಬೇಕು! ಅವರು ಕೈಗೊಂಡಿರುವ ಸಂಚು ಬಯ ಲಾಗುವತನಕ ಅವರಿಬ್ಬರನ್ನು ಸೆರೆಮನೆಯಲ್ಲಿ ಬಂಧನದಲ್ಲಿಡಬೇಕು" ಎಂದು ಬಾಲಚಂದ್ರನ ಕಡೆಯ ಮಹಾಪಾತ್ರರು ಒಂದೇ ಧ್ವನಿಯಲ್ಲಿ ಆರೋಪಿಸಿದರು.

ಅವರ ಆರೋಪಗಳನ್ನು ಕೇಳಿ ಗಜಪತಿಯ ಮುಖ ವಿವರ್ಣ ವಾಯಿತು. ಎದೆಯಲ್ಲಿ ಎಂತಹುದೋ ಹೇಳಲಾಗದ ಭೀತಿ ತಲೆದೂರಿತು. ಬಾಲಚಂದ್ರ ಮಹಾಪಾತ್ರನು ಹೇಳುವಂತೆ ಈ ಸಂಗತಿಗಳು ನಿಜವೇ ಆಗಿ ದ್ದರೆ ಉತ್ಕಲದ ಗತಿ ? ಕುರಿಗಳನ್ನು ಕಾಯಲು ತೋಳನನ್ನು ನೇಮಿಸಿ ದಂತೆ—ಶತ್ರುಗಳಿಂದ ಪೊಟ್ಟನೂರನ್ನು ರಕ್ಷಿಸಲು, ಶತ್ರುಪಕ್ಷಕ್ಕೆ ಸೇರಿದ ಶಿರಶ್ಚಂದ್ರ ಮಹಾಪಾತ್ರನನ್ನು ಮಹಾದಂಡನಾಯಕನನ್ನಾಗಿ ಮಾಡುವುದು ಎಂದು ತನ್ನಲ್ಲೇ ತತ್ತರಿಸಿದ ಗಜಪತಿ, ಆ ವಿಷಮ ಪರಿಸ್ಥಿತಿಯನ್ನು ನೆನೆದು. ದೇವರ ದಯೆಯಿಂದ ಈ ಆರೋಪಗಳು ಸುಳ್ಳಾಗಲಿ ಎಂದು ಅವನ ಮನಸ್ಸು ಹಾತೊರೆಯಿತು. ಶಿರಶ್ಚಂದ್ರ ಮಹಾಪಾತ್ರನಂತಹ ಪ್ರಮುಖ ಮಹಾಪಾತ್ರನಮೇಲೆ ಈ ಆರೋಪಗಳು ಹೊರೆಸಲ್ಪಡ ಬೇಕಾದರೆ, ಇದರಲ್ಲಿ ಯಾವುದೋ ಸತ್ಯಾಂಶ ಅಡಗಿರಬೇಕು. ಬೆಂಕಿ ಇಲ್ಲದೆ ಹೊಗೆಯಾಡುವುದಿಲ್ಲ. ಈ ಆರೋಪಣೆಗಳ ಮೂಲವನ್ನು ಕೂಡಲೇ ಶೋಧಿಸಬೇಕು. ಒಂದುವೇಳೆ ಶಿರಶ್ಚಂದ್ರ ಮಹಾಪಾತ್ರನಮೇಲೆ ಹೊರೆಸ

ಲ್ಪಟ್ಟಿರುವ ಈ ಆರೋಪಣೆಗಳು ನಿಜವಾದರೆ, ಕೂಡಲೇ ಅವನನ್ನು ವಿಚಾರಣೆಗೆ ಒಳಪಡಿಸಿ, ಕ್ರೂರವಾಗಿ ದಂಡಿಸಬೇಕು! ಎಂದು ಆಲೋಚಿಸಿ ಬಾಲಚಂದ್ರ ಮಹಾಪಾತ್ರನ ಕಡೆಯವರನ್ನೆಲ್ಲಾ ಕಳುಹಿಸಿಕೊಟ್ಟು, ಶಿರಶ್ಚಂದ್ರ ಮಹಾಪಾತ್ರನನ್ನು ಅಂತರಂಗಕ್ಕೆ ಕರೆಸಿಕೊಂಡನು.

ಶಿರಶ್ಚಂದ್ರಮಹಾಪಾತ್ರನು ಬಂದು ಪ್ರತಾಪರುದ್ರ ಗಜಪತಿಗೆ ನಮಸ್ಕರಿಸಿ, ಗಜಪತಿಯು ತೋರಿಸಿದ ಆಸನದಲ್ಲಿ ಕುಳಿತುಕೊಂಡನು. ಕೆಲವು ಕಾಲ ಗಜಪತಿಗೆ ಈ ವಿಷಯವನ್ನು ಹೇಗೆ ಪ್ರಾರಂಭಮಾಡುವುದೆಂದು ತಿಳಿಯದೆ ಮೌನವಾಗಿ ಕುಳಿತನು. ತನ್ನನ್ನು ಹಠಾತ್ತಾಗಿ ಕರೆಸಿದುದು ಏಕೆಂದು ತಿಳಿಯದೆ ಶಿರಶ್ಚಂದ್ರಮಹಾಪಾತ್ರನೂ ಕಸಿವಿಸಿಗೊಂಡು ಗಜಪತಿಯ ಬಾಯಿಂದ ಏನು ಬರುವುದೋ ಎಂದು ಕಾತುರನಾಗಿ ಕುಳಿತಿದ್ದನು. ಆತಂಕಗೊಂಡ ಶಿರಶ್ಚಂದ್ರಮಹಾಪಾತ್ರನ ಮುಖವನ್ನು ನೋಡಿ ಗಜಪತಿಗೆ ಒಂದುಬಗೆಯ ವ್ಯಥೆಯಾಯಿತು. ನಿಸ್ಪೃಹತೆಯೇ ಮೈವೆತ್ತಿದಂತೆ, ಕುಳಿತಿದ್ದ ಅವನನ್ನು ನೋಡಿ ಗಜಪತಿಗೆ ಇಂತಹವನಮೇಲೆ ಎಂತಹ ಆರೋಪಗಳು ಹೊರಿಸಲ್ಪಟ್ಟಿದೆ! ಎಂದು ವಿಷಾದವುಂಟಾಯಿತು. ಆದರೂ ತನ್ನ ಕರ್ತವ್ಯ ಮಾಡಲೇಬೇಕಾಗಿತ್ತು.

"ಮಹಾಪಾತ್ರರ ಕೂಟಕ್ಕೆ ಮಕುಟಪ್ರಾಯರಾಗಿರುವ ಶಿರಶ್ಚಂದ್ರ ಮಹಾಪಾತ್ರರೇ ತಮ್ಮಮೇಲೆ ಹೊರಿಸಲ್ಪಟ್ಟಿರುವ ಒಂದು ರಾಜದ್ರೋಹದ ಆರೋಪವನ್ನು ವಿಚಾರಿಸುವ ಸಲುವಾಗಿ ನಿಮ್ಮನ್ನು ಬರಮಾಡಿಕೊಳ್ಳಬೇಕಾಯಿತು. ನನಗೆ ತುಂಬಾ ಅಪ್ರಿಯವಾಗಿರುವ ಈ ಕಾರ್ಯವನ್ನು ಕೇವಲ ಕರ್ತವ್ಯದೃಷ್ಟಿಯಿಂದ ಮಾಡಬೇಕಾಗಿದೆ. ನೀವು ವಯಸ್ಸಿನಲ್ಲಿ ಪಿತೃಸಮಾನರಾಗಿದ್ದೀರಿ. ನಿಮ್ಮ ಸ್ವಾಮಿನಿಷ್ಠೆ, ಧೈರ್ಯ, ಸಾಹಸಾದಿ ಗುಣಗಳು ಇಂದಿನ ಯುವಕರಿಗೆ ಆದರ್ಶಪ್ರಾಯವಾಗಿವೆ. ತಾವು ಬಹಳ ಕಾಲದಿಂದಲೂ ಮಹಾಪಾತ್ರರ ನಾಯಕರಾಗಿ, ನಮಗೆ ಬಲಗೈಯ್ಯಂತಿರುವಿರಿ. ನಮ್ಮ ಕಷ್ಟಸುಖಗಳಲ್ಲಿ ಒಂದಾಗಿ ಬೆರತಿದ್ದೀರಿ. ನಿಮ್ಮಂತಹ ಅಪ್ರತಿಮರಾಜನಿಷ್ಠ ಸೇವಕರನ್ನು ರಾಜದ್ರೋಹದ ಆರೋಪಕ್ಕೆ ಗುರಿಪಡಿಸಲಾಗಿರುವುದು ನಿಜವಾಗಿಯೂ ಪರಿಶೋಚನೀಯ ಸಂಗತಿ. ತಾವು ಅನ್ಯಥಾ ಭಾವಿಸದೆ ನನ್ನ ಕೆಲವು ಪ್ರಶ್ನೆಗಳಿಗೆ ಸರಳವಾಗಿ ಉತ್ತರ ಹೇಳಬೇಕು.

ಎಂದು ಮಾತಿಗೆ ಪೀಠಿಕೆಯನ್ನು ಹಾಕಿದನು.

"ಮಹಾಪ್ರಭುಗಳಿಗೆ ನನ್ನಮೇಲೆ ಇರುವ ಅಭಿಮಾನ, ಪ್ರೀತಿ, ವಿಶ್ವಾಸಗಳಿಗೆ ನಾನು ಎಷ್ಟರಮಟ್ಟಿಗೆ ಪಾತ್ರನೋ ಹೇಳಲಾರೆ. ಯಃಕಶ್ಚಿತವಾದ ಸೇವಕನಾದ ನಾನು ನನ್ನ ಕರ್ತವ್ಯವನ್ನು ನಿರ್ವಹಿಸಿದ್ದೇನೆ ಅಷ್ಟೆ. ನನ್ನ ಸೇವೆ ಪ್ರಭುಗಳ ಮನಸ್ಸಿಗೆ ಮುಟ್ಟಿದರೆ ನಾನು ಕೃತಕೃತ್ಯನಾದೆನೆಂದೇ ನನ್ನ ಭಾವನೆ. ನನ್ನ ಅಲ್ಪಸೇವೆಗೆ ಗುಣಗ್ರಾಹಿಗಳಾದ ಪ್ರಭುಗಳು ಪ್ರಸನ್ನರಾಗಿದ್ದೀರಿ. ತಮ್ಮ ಅಭಿಮಾನಕ್ಕೆ ನಾನು ಆಭಾರಿಯಾಗಿದ್ದೇನೆ. ಇದೇ ಅಭಿಮಾನ ಕಡೆಯತನಕ ಇರಬೇಕೆಂದು ನನ್ನ ವಿನಂತಿ. ಈಗ ನನ್ನ ದುರ್ದೈವದಿಂದಲೆಂಬಂತೆ ನನ್ನಮೇಲೆ ರಾಜದ್ರೋಹದ ಆರೋಪ ಬಂದಿದೆ. ಅದೇನೆಂದು ಪ್ರಭುಗಳು ಅಪ್ಪಣೆ ಕೊಡಿಸಿದರೆ, ಆಬಗ್ಗೆ ನಾನೇನಾದರೂ ಹೇಳುವುದಿದ್ದರೆ ಪ್ರಭುಗಳಲ್ಲಿ ಅರಿಕೆಮಾಡಿಕೊಳ್ಳುತ್ತೇನೆ,"

"ತಮ್ಮಮೇಲೆ ಇರುವ ಮೊದಲನೆಯ ಆರೋಪವೇನೆಂದರೆ ನೀವು ಕೊಂಡಪಲ್ಲಿಯನ್ನು ಹೋರಾಟವಿಲ್ಲದೆ ಏಕೆ ಶತ್ರುಗಳ ಪಾಲುಮಾಡಿದಿರಿ? ಈಬಗ್ಗೆ ನಿಮ್ಮ ವಿವರಣೆ ಏನು?"

"ಕೊಂಡಪಲ್ಲಿಯು ಶತ್ರುವಿನ ಕರಗತವಾದ ಬಗ್ಗೆ ಎಲ್ಲ ವಿಷಯಗಳನ್ನು ಪ್ರಭುಗಳಿಗೆ ಈಮೊದಲೇ ಪತ್ರಮುಖೇನ ಅರಿಕೆಮಾಡಿಕೊಂಡಿದ್ದೇನೆ. ಆದರೂ ಪ್ರಭುಗಳು ಆ ಪ್ರಸಂಗವನ್ನು ಮತ್ತೊಮ್ಮೆ ಕೇಳಬಿಚ್ಛಿಸುವುದಾದರೆ ತಿಳಿಸುತ್ತೇನೆ. ಪ್ರಭುಗಳು ಸಮಾಧಾನ ಚಿತ್ತದಿಂದ ಆಲಿಸಬೇಕು. ನಾವು ಮೂರುತಿಂಗಳಕಾಲ ಕೊಂಡಪಲ್ಲಿ ದುರ್ಗವನ್ನು ಶತ್ರುವಿನೊಡನೆ ಸೆಣಸಿ, ರಕ್ಷಿಸಿಕೊಂಡಿದ್ದೆವು. ಈ ಅವಧಿಯಲ್ಲಿ ತಾವು ಉತ್ಕಲ ಸೇನೆಯೊಂದಿಗೆ ಕೊಂಡಪಲ್ಲಿಯ ರಕ್ಷಣೆಗೆ ಬರುವುದಾಗಿ ನಿರೀಕ್ಷಿಸಿದ್ದೆವು. ಆದರೆ ನಮ್ಮ ನಿರೀಕ್ಷೆ ವ್ಯರ್ಥವಾಯಿತು. ಇತ್ತ ಶತ್ರುಗಳ ತೀವ್ರ ಮುತ್ತಿಗೆಯನ್ನು ಕಂಡು, ದುರ್ಗದಲ್ಲಿ ಇದ್ದ ಮಹಾರಾಣಿಯವರು, ದುರ್ಗದಲ್ಲಿದ್ದರೆ ಶತ್ರುಗಳಿಗೆ ಕೈಸೆರೆ ಸಿಕ್ಕುವ ಸಂಭವವಿದೆ ಎಂದು, ಪೊಟ್ಟನೂರಿಗೆ ಬರಲು ಚಡಪಡಿಸಿದರು. ಅವರನ್ನು ಸಮಾಧಾನಪಡಿಸಲೆತ್ನಿಸಿ ವಿಫಲರಾದಮೇಲೆ ಅವರನ್ನು ತಮ್ಮ ಬಳಿಗೆ ಬಿಟ್ಟುಬರುವ ಸಲುವಾಗಿ, ದುರ್ಗರಕ್ಷಣೆಯ ಭಾರವನ್ನೇ ನನಗೆ ವಹಿಸಿ, ಯುವರಾಜಕುಮಾರರೇ ಹೊರಟರು. ಆದರೆ

ನಮ್ಮೆಲ್ಲರ ದುರದೃಷ್ಟದಿಂದ ಯುವರಾಜಕುಮಾರರೂ, ಮಹಾರಾಣಿಯವರೂ ಮಾರ್ಗಮಧ್ಯದಲ್ಲಿಯೇ ಶತ್ರುಗಳ ಸೆರೆ ಸಿಕ್ಕಿದರು. ಶತ್ರುಗಳು ಈ ಸಂದರ್ಭವನ್ನು ಸದುಪಯೋಗಪಡಿಸಿಕೊಂಡು ನಮ್ಮನ್ನು ಮೋಸಪಡಿಸಿ ಕೊಂಡಪಲ್ಲಿಯನ್ನು ಯುದ್ಧವಿಲ್ಲದೆ ವಶಪಡಿಸಿಕೊಂಡರು.

"ಹೇಗೆ ?"

"ಯುವರಾಜಕುಮಾರರು ಮಹಾರಾಣಿಯವರ ಜೀವಕ್ಕೆ ಗಂಡಾಂತರವಿದೆ ಎನ್ನುವ ಹೆದರಿಕೆಯನ್ನು ನಮ್ಮ ಎದೆಗಳಲ್ಲಿ ಬಿತ್ತಿ ಉಪಾಯವಾಗಿ ಕಾರ್ಯ ಸಾಧಿಸಿಕೊಂಡರು. ನಾವು ಶತ್ರುಗಳ ಸಂಚಿಗೆ ಸುಲಭವಾಗಿ ಮಾರುಹೋಗುವವರಲ್ಲ. ಅದನ್ನು ಅರಿತೇ ಶತ್ರುಗಳು ಯುವರಾಜಕುಮಾರರು ಬರೆದಂತೆ ಒಂದು ಸುಳ್ಳು ಪತ್ರವನ್ನು ಸೃಷ್ಟಿಸಿ, ನಮ್ಮನ್ನು ಮೋಸಗೊಳಿಸಿದರು. ದುರ್ಗದ ಜನತೆ, ಸೈನಿಕರೆಲ್ಲರೂ ಆ ಕಾಗದವನ್ನು ನಿಜವೆಂದೇ ನಂಬಿ, ದುರ್ಗ ಹೋದರೂ ಚಿಂತೆ ಇಲ್ಲ—ಯುವರಾಜಕುಮಾರರ ಮಹಾರಾಣಿಯವರ ಜೀವಕ್ಕೆ ಯಾವ ಗಂಡಾಂತರ ಒದಗದೆ, ಅವರು ಕ್ಷೇಮದಿಂದ ಇರುವುದು ಬೇಕೆಂದು ಹಠಹಿಡಿದು, ದುರ್ಗವನ್ನು ಯುದ್ಧವಿಲ್ಲದೆ ಶತ್ರುಗಳಿಗೊಪ್ಪಿಸಲು ಬಲಾತ್ಕರಿಸಿದರು. ಜನತೆಯ ಅಭೀಷ್ಟವನ್ನು ವಿರೋಧಿಸಲಾಗದೆ, ನಾನು ನಿರ್ವಾಹವಿಲ್ಲದೆ, ದುರ್ಗವನ್ನು ಯುದ್ಧವಿಲ್ಲದೆ ಶತ್ರುಗಳಿಗೆ ಒಪ್ಪಿಸಬೇಕಾಯಿತು. ಯುವರಾಜಕುಮಾರರ, ಮಹಾರಾಣಿಯವರ ಪ್ರಾಣಸಂರಕ್ಷಣಾರ್ಥವಾಗಿ ಮಾಡಿದ ನನ್ನ ಈ ಕೆಲಸಕ್ಕೆ ಯಾವ ಶಿಕ್ಷೆ ವಿಧಿಸಿದರೂ ಅದನ್ನು ಸಂತೋಷವಾಗಿ ಅನುಭವಿಸುತ್ತೇನೆ."

"ರಾಜಕುಟುಂಬದವರ ಬಗ್ಗೆ ನಿಮಗಿರುವ ನಿಷ್ಠೆಗೆ ಎಂತಹವರೂ ತಲೆದೂಗಲೇ ಬೇಕು. ರಾಜಕುಟುಂಬದವರ ಹಿತರಕ್ಷಣೆಗಾಗಿ ನೀವು ಉಚಿತ ರೀತಿಯಲ್ಲೇ ವರ್ತಿಸಿದ್ದೀರಿ. ಆದರೂ ನಿಮ್ಮಂಥ ಅನುಭವಿಕರಾದ ರಾಜತಂತ್ರ ನಿಪುಣರಿಗೆ ಶತ್ರುವಿನ ಮೋಸಕೃತ್ಯ ತಿಳಿಯದೇ ಹೋದುದು ಆಶ್ಚರ್ಯವೇ ಸರಿ !

"ಆ ಸಮಯದಲ್ಲಿ ನನ್ನ ಬುದ್ಧಿಗೆ ಯಾವ ಮಂಕು ಕವಿದಿತ್ತೋ ಆ ಜಗನ್ನಾಥನೇ ಬಲ್ಲ. ಆದರೂ ನಾನು ಆ ಪತ್ರವನ್ನು ರಾಜಕುಮಾರರ

ಪತ್ರವಲ್ಲವೆಂದು ಬಗೆದು, ರಾಜಕುಮಾರರನ್ನು ಕಣ್ಣಾರ ಶತ್ರುಗಳ ಮಧ್ಯೆ ನೋಡಿದ ಹೊರತೂ ನಂಬಬಾರದೆಂದು, ಅದರಂತೆ ಶತ್ರುಗಳಿಗೆ ಪತ್ರ ಬರೆದು ತಿಳಿಸಿದೆ. ನಮ್ಮ ದುರದೃಷ್ಟಕ್ಕೆ ಸರಿಯಾಗಿ ಶತ್ರುಗಳ ಜತೆಯಲ್ಲಿ ಯುವರಾಜಕುಮಾರರು ನಮಗೆ ಕಾಣಿಸಿಕೊಂಡರು! ನಾವು ಯಾವುದು ಸುಳ್ಳೆಂದು ತಿಳಿದಿದ್ದೆವೋ ಅದು ನಿಜವಾಗಿತ್ತು. ಇಂತು ನಾವು ಶತ್ರುಗಳ ಮೋಸಕ್ಕೆ ಬಲಿಯಾದೆವು. ಇಲ್ಲದಿದ್ದರೆ ನಾವು ಕೊಂಡಪಲ್ಲಿಯನ್ನು ಅಷ್ಟೇ ಸುಲಭವಾಗಿ ಶತ್ರುಗಳ ವಶಪಡಿಸುತ್ತಿದ್ದೆವೆ? ದುರ್ಗದಲ್ಲಿ ಒಬ್ಬ ಸೈನಿಕನು ಜೀವದಿಂದ ಇರುವತನಕ ದುರ್ಗದ ರಕ್ಷಣೆಗಾಗಿ ಹೋರಾಡುತ್ತಿದ್ದೆವು. ಆದರೆ ನಮ್ಮ ದುರ್ವಿಧಿ ನಮ್ಮನ್ನು ಮೋಸಗೊಳಿಸಿತು" ಎಂದು ವಿಷಾದವಾಗಿ ಹೇಳಿದ ಶಿರಶ್ಚಂದ್ರಮಹಾಪಾತ್ರ.

"ಕಳೆದುಹೋದುದನ್ನು ನೆನೆದು ಫಲವಿಲ್ಲ. ಈ ನಿಮ್ಮಮೇಲಿನ ಎರಡನೆಯ ಆರೋಪ. ನೀವು ಶತ್ರುರಾಯನನ್ನು ಕ್ಷಮೆ ಬೇಡಿ ಸೆರೆಯಿಂದ ಬಿಡುಗಡೆ ಹೊಂದಿರುವಿರಂತೆ ಹೌದೆ?"

"ನಾನು ಅಂತಹ ಜೀವಗಳ್ಳನಾಗಿದ್ದರೆ ಆ ಬಗೆಯ ಹೇಯಕೃತ್ಯಕ್ಕೆ ಕೈಹಾಕಿ ಜೀವ ಉಳಿಸಿಕೊಳ್ಳುತ್ತಿದ್ದೆನೇ ಪ್ರಭು! ನನಗೆ ಅಂತಹ ಹೇಡಿ ಬದುಕು ಬೇಡ. ಹೇಡಿಯಾಗಿ ಸಾವಿರವರ್ಷ ಬದುಕುವುದಕ್ಕಿಂತಲೂ ಧೀರನಾಗಿ ಒಂದುದಿನ ಬದುಕುವುದು ಲೇಸು! ಇದುವರೆಗೆ ಸಿಂಹವಿಕ್ರಮನೆಂದು ಕೀರ್ತಿ ತಳೆದು ಸಾಯುವಮುನ್ನ ನಾನು ಆ ಬಗೆಯ ನೀಚಕೃತ್ಯಕ್ಕೆ ತೊಡಗುವೆನೇ ಪ್ರಭು!"

"ನಿಮ್ಮ ಮಾತಿನ ಬಗ್ಗೆ ನನಗೆ ಸಂಶಯವಿಲ್ಲ. ಆದರೂ ಈ ಬಂದ ಆರೋಪಣೆ ನಿಮ್ಮ ಮೇಲೆ ಹೊರಿಸಲ್ಪಟ್ಟಿದೆ. ನೀವು ರಾಯನ ಸೆರೆಯಲ್ಲಿ ಕಡೆತನಕ ಇದ್ದುದು ನಿಜವಾದರೆ, ಇಲ್ಲಿಗೆ ಹೇಗೆ ಬಂದಿರಿ?"

"ನಾನು ಸೆರೆಮನೆಯಿಂದ ತಪ್ಪಿಸಿಕೊಂಡು ಬಂದೆ ಪ್ರಭು!"

"ಹೇಗೆ?"

ಅದೊಂದು ದೊಡ್ಡ ಕಥೆ. ಕೃಷ್ಣದೇವರಾಯನು ನಮ್ಮನ್ನು ಸೆರೆಮನೆಯಲ್ಲಿ ಇಡುವ ಮೊದಲು ನಮ್ಮನ್ನೆಲ್ಲ ಒಳಗೆ ಕರೆಸಿಕೊಂಡು ತನ್ನಲ್ಲಿ ಕ್ಷಮೆ ಬೇಡಿದರೆ, ಬಿಡುಗಡೆ ಮಾಡುವುದಾಗಿ ತಿಳಿಸಿದನು. ರಾಯನ

ಕೋರಿಕೆಯನ್ನು ನಾವೆಲ್ಲ ತಿರಸ್ಕರಿಸಿ, ಹಂಗಿನ ಸ್ವತಂತ್ರಕ್ಕಿಂತಲೂ ಹಂಗಿಲ್ಲದ ಸೆರೆಮನೆಯವಾಸ ಲೇಸೆಂದು ನಾವು ಸೆರೆಮನೆಯಲ್ಲಿ ಇರಲೊಪ್ಪಿದೆವು. ನಮಗೆ ಬಂಧನದಲ್ಲಿ ಇರುವಾಗ ಎಲ್ಲ ಅನುಕೂಲತೆಗಳು ಕೊಡಲ್ಪಟ್ಟಿದ್ದರೂ ನಮಗೆ ಮಾತ್ರ ಮನಶ್ಶಾಂತಿ ಇರಲಿಲ್ಲ. ನಾವು ಶತ್ರುಗಳ ಮೋಸಕ್ಕೆ ಬಲಿಯಾಗಿ ದುರ್ಗವನ್ನು ಸುಲಭವಾಗಿ ವಶಮಾಡಿದೆವಲ್ಲಾ ಎನ್ನುವ ಕೊರಗು ನಮ್ಮ ಹೃದಯವನ್ನು ದಹಿಸುತ್ತಿತ್ತು—ರಾಯನು ಮಾಡಿದ ಮೋಸಕ್ಕೆ ಪ್ರತಿ ಮೋಸವನ್ನು ನಾವು ಮಾಡಿ ಆ ಮೂಲಕ ನಮ್ಮ ಪ್ರತೀಕಾರವನ್ನು ಬಗೆಯಬೇಕೆಂದು ನಿರ್ಧರಿಸಿದೆವು. ಸೆರೆಮನೆಯಲ್ಲಿದ್ದ ನಾವು ಹೀಗೆ ಪ್ರತೀಕಾರ ತೀರಿಸಿಕೊಳ್ಳಲು, ನಾವು ಸೆರೆಯಿಂದ ಹೊರಗೆ ಬರುವುದು ಅನಿವಾರ್ಯವಾಗಿತ್ತು. ನಾವು ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದೆವು. ಅಲ್ಲಿಯತನಕ ಕಾಯಲು ಬೋದಜಣ್ಣಮಹಾಪಾತ್ರರಿಗೆ ವ್ಯವಧಾನ ಉಳಿಯಲಿಲ್ಲ. ಅವರು ಒಂದು ಆಲೋಚನೆ ಮಾಡಿದರು. ರಾಯನು ತನ್ನಲ್ಲಿ ಕ್ಷಮಾ ಯಾಚಿಸಿದವರನ್ನು ಬಿಡುಗಡೆ ಮಾಡುವುದಾಗಿ ಹಿಂದೆ ಹೇಳಿದ್ದ ಸಂಗತಿಯನ್ನು ನೆನಪಿಗೆ ತಂದುಕೊಂಡು ಅದರಂತೆ ಕ್ಷಮೆ ಯಾಚಿಸಿ ಸೆರೆಮನೆಯಿಂದ ಹೊರಗೆ ಬಂದು ಶತ್ರುಗಳ ಕಣ್ಣು ತಪ್ಪಿಸಿ ಅಲ್ಲಿಂದ ಹೊರಟು ಹೋಗುವ ಆಲೋಚನೆಯನ್ನು ಮುಂದೆ ಇಟ್ಟರು. ಇದಕ್ಕೆ ನಾವುಗಳು ಯಾರೂ ಸಮ್ಮತಿಸಲಿಲ್ಲ. ಅವರ ಆಲೋಚನೆ ತುಂಬಾ ನಿಕೃಷ್ಟರೀತಿಯದೆಂದು ನಾವು ಯಾರೂ ಅವರಿಗೆ ಸಹಾನುಭೂತಿ ತೋರಿಸಲಿಲ್ಲ. ಆದರೂ ಅವರು ನಮ್ಮ ಸಲಹೆಯನ್ನು ತಿರಸ್ಕರಿಸಿ, ತಾವು ಆಲೋಚಿಸಿದ್ದ ಮಾರ್ಗದಲ್ಲೇ ನಡೆದು ಸೆರೆಯಿಂದ ಬಿಡುಗಡೆ ಹೊಂದಿದರು. ಅನಂತರ ಅವರ ಗತಿ ಏನಾಯಿತೆಂದು ನನಗೆ ಇಲ್ಲಿಗೆ ಬರುವತನಕ ತಿಳಿಯಲಿಲ್ಲ. ಅವರು ಮೊದಲು ರಾಯನ ಸ್ನೇಹಿತನಂತೆ ನಟಿಸಿ, ಅವನನ್ನು ಮೋಸಗೊಳಿಸಿ ಕಡೆಗೂ ತಮ್ಮನ್ನು ಕೂಡಿಕೊಂಡರು— ಇದು ಸಂತೋಷದ ಸಂಗತಿ !"

"ನೀವು ಕ್ಷಮೆ ಕೋರಿ ಬಿಡುಗಡೆಯಾಗದಿದ್ದರೆ, ಮತ್ತೆ ಹೇಗೆ ಸೆರೆಯಿಂದ ಬಿಡುಗಡೆ ಹೊಂದಿದಿರಿ ?"

"ಬೋದಜಣ್ಣ ಮಹಾಪಾತ್ರರು ಸೆರೆಮನೆಯಿಂದ ಕ್ಷಮಾ ಯಾಚಿಸಿ, ಹೊರಬಿದ್ದಮೇಲೆ ಅನೇಕ ತಿಂಗಳು ನಮ್ಮ ಜೀವನದಲ್ಲಿ ಮಬ್ಬು ಕವಿದಿ

ತ್ತೇಂದರೂ ಸರಿ. ಈ ಅವಧಿಯಲ್ಲಿ ಸೆರೆಯಿಂದ ಹೇಗೆ ತಪ್ಪಿಸಿಕೊಂಡು ಹೋಗುವುದೆಂದು ಬಗೆಬಗೆಯ ಉಪಾಯಗಳನ್ನುಮಾಡುವುದರಲ್ಲಿ ಸಮಯ ಕಳೆದೆವು. ದೈವಾನುಗ್ರಹವಾಗದೇ ಯಾವ ಪ್ರಯತ್ನವೂ ಯಶಸ್ವಿಯಾಗು ವುದಿಲ್ಲವೆನ್ನಲು ನನ್ನ ಸಾಹಸವೇ ಸಾಕ್ಷಿ."

"ಅಂದು ಕೊಂಡಪಲ್ಲಿಯಲ್ಲಿ ವಿಜಯದಶಮಿ. ದುರ್ಗ ರಾಯನ ವಶ ವಾಗಿ ಸುಮಾರು ಒಂದು ವರ್ಷವಾಗಿತ್ತು ಅಂದಿಗೆ. ಈ ಅವಧಿಯಲ್ಲಿ ರಾಯನು ದುರ್ಗವನ್ನು ತನ್ನ ಒಬ್ಬ ದಳಪತಿಗೆ ಒಪ್ಪಿಸಿ, ಇನ್ನೂ ಅನೇಕ ಪ್ರದೇಶಗಳನ್ನು ಗೆದ್ದು ಮಳೆಗಾಲದ ಪ್ರಯುಕ್ತ ಸಿಂಹಾದ್ರಿಯಲ್ಲಿ ಬೀಡು ಬಿಟ್ಟಿದ್ದನು. ಕೊಂಡಪಲ್ಲಿ ಗುಣೋಜಿಪಂತನೆಂಬ ಸರದಾರನ ವಶದಲ್ಲಿ ಇತ್ತು. ಅವನು ರಾಯನ ಪ್ರತಿನಿಧಿಯಾಗಿದ್ದುದರಿಂದ, ವಿಜಯನಗರದ ಅರಸರಿಗೆ ಪ್ರಿಯವಾಗಿದ್ದ ನವರಾತ್ರಿಯ ಉತ್ಸವವನ್ನು ಕೊಂಡಪಲ್ಲಿಯಲ್ಲಿ ವೈಭವವಾಗಿಯೇ ಆಚರಿಸಿದನು. ಇಂತಹ ದೊಡ್ಡ ಹಬ್ಬಗಳಲ್ಲಿ ಸೈನಿಕರ ಶಿಸ್ತು ಕೂಡ ಸಡಿಲವಾಗುತ್ತಿತ್ತು. ಸೈನಿಕರು ಚನ್ನಾಗಿ ತಿಂದು, ಕುಡಿದು ವೇಶ್ಯಾದಾಟಗಳಲ್ಲೂ, ಅನೇಕ ಬಗೆಯ ಕ್ರೀಡೆ, ವಿನೋದಗಳಲ್ಲೂ ಮೈ ಮರೆತು ಬಿದ್ದಿರುತ್ತಿದ್ದರು. ಉತ್ಸವದ ಒಂಭತ್ತು ದಿನವೂ ದುರ್ಗದಲ್ಲಿ ಹಬ್ಬ. ಒಂಭತ್ತು ದಿನವೂ ವಿಶೇಷ ದರ್ಬಾರು. ಸ್ವಯಂವಿಲಾಸಿಯಾದ ಗುಣೋಪಂತನು ಸೈನಿಕರಿಗೂ, ಪಟ್ಟಣಿಗರಿಗೂ, ಹಬ್ಬದ ಪ್ರಯುಕ್ತ ಕೊಂಚಮಟ್ಟಿಗಾದರೂ ತಮ್ಮ ನಿತ್ಯದ ತಾಪತ್ರಯಗಳನ್ನು, ಕಷ್ಟಕಾರ್ಪಣ್ಯ ಗಳನ್ನು ಮರೆಯುವಂತೆ ವಿಶೇಷ ರೀತಿಯ ಸೌಲಭ್ಯಗಳನ್ನು ಒದಗಿಸಿ ಕೊಟ್ಟಿದ್ದನು ಹೀಗಾಗಿ ಸೆರೆಮನೆಯನ್ನು ಕಾಯಲು ನೇಮಿತರಾಗಿದ್ದ ಸೈನಿಕರು ಹಬ್ಬದ ಸಂಭ್ರಮದಲ್ಲಿ ಚನ್ನಾಗಿ ತಿಂದು, ಕುಡಿದು ಮತ್ತೇರಿ ಮಲಗಿದ್ದ ಸಮಯವನ್ನು ಸಾಧಿಸಿ, ನಾನು ಉಪಾಯಾಂತರದಿಂದ ಸೆರೆಮನೆ ಯಿಂದ ತಪ್ಪಿಸಿಕೊಂಡು, ವೇಷಾಂತರಗಳಲ್ಲಿ ಶತ್ರುಗಳ ಗೂಢಚಾರರ ಕಣ್ಣಿಗೆ ಮಣ್ಣೆರಚಿ, ಇಲ್ಲಿಗೆ ಸುರಕ್ಷಿತವಾಗಿ ಬಂದು ಸೇರಿದೆವು. ಇದು ನನ್ನ ಪೂರ್ವ ಪುಣ್ಯವೇ ಸರಿ."

"ಹಾಗಾದರೆ ನೀವು ಕೃಷ್ಣದೇವರಾಯನ ಕ್ಷಮೆ ಯಾಚಿಸಿ, ಬಿಡುಗಡೆ ಹೊಂದಿ ಬಂದಿರುವಿರೆಂಬ ಸುದ್ದಿ ಸುಳ್ಳೆ ?"

"ಖಂಡಿತವಾಗಿಯೂ ಸುಳ್ಳು ಪ್ರಭು! ನಾನು ಕ್ಷಮೆ ಹೊಂದಿ ಬಿಡುಗಡೆ ಬಯಸಿದ್ದರೆ ಒಂದು ವರ್ಷದ ಹಿಂದೆಯೇ ಸೆರೆಯಿಂದ ಬಿಡುಗಡೆಯಾಗಬಹುದಿತ್ತು. ನಾನು ಇದುವರೆಗೆ ಸೆರೆಮನೆಯಲ್ಲಿ ಕೊಳೆಯುತ್ತಿರಬೇಕಾದ ಪ್ರಸಂಗ ಬರುತ್ತಲೇ ಇರಲಿಲ್ಲ."

"ನಿಮ್ಮ ಹೇಳಿಕೆಗೂ, ನಿಮ್ಮ ವಿರೋಧಪಕ್ಷದವರ ಹೇಳಿಕೆಗೂ ತುಂಬಾ ವ್ಯತ್ಯಾಸವಿದೆ!"

"ವಿರುದ್ಧಪಕ್ಷದವರ ಹೇಳಿಕೆಯಾದರೂ ಏನು ಪ್ರಭು?"

"ಅವರು ಹೇಳುವಂತೆ ನೀವೂ, ಬೋದಜಣ್ಣಮಹಾಪಾತ್ರರೂ ಸೆರೆಮನೆಯಲ್ಲಿದ್ದವರು, ಕೃಷ್ಣದೇವರಾಯನಲ್ಲಿ ಕ್ಷಮೆ ಕೋರಿ ಬಿಡುಗಡೆ ಹೊಂದಿದ್ದೀರಿ. ಅಷ್ಟೇ ಅಲ್ಲ ನೀವು ಇದುವರೆಗೂ ರಾಯನ ಸೇವೆಯಲ್ಲಿ ಇದ್ದಿರಿ. ನಮ್ಮ ವಿರುದ್ಧ ಅನೇಕ ವಿದ್ರೋಹಗಳಲ್ಲಿ ತೊಡಗಿ ಆ ಮೂಲಕ ರಾಯನ ವಿಶ್ವಾಸಕ್ಕೆ ಪಾತ್ರರಾಗಿದ್ದೀರಿ. ಈಗ ನೀವು ಇಲ್ಲಿಗೆ ಬಂದಿರುವುದಾದರೂ ನಿಮ್ಮ ಸ್ವಯಿಚ್ಛೆಯಿಂದಲ್ಲ; ರಾಯನ ಇಚ್ಛೆಯಂತೆ. ರಾಯನು ಕೊಂಡಪಲ್ಲಿ ಮತ್ತಿತರ ದುರ್ಗಗಳನ್ನು ಗೆದ್ದಂತೆ ಪೊಟ್ಟನೂರನ್ನೂ ಮೋಸದಿಂದ ಸಾಧಿಸುವ ಸಲುವಾಗಿ ನಿಮ್ಮನ್ನು ಇಲ್ಲಿಗೆ ಕಳುಹಿಸಿದ್ದಾನೆ. ನೀವು ಯಾವುದೋ ಸಂಚುಮಾಡುತ್ತಿದ್ದೀರಿ—ನಮಗೆ ಮಿತ್ರರಂತೆ ನಟಿಸುತ್ತಾ, ಶತ್ರುಗಳಿಗೆ ಬೇಕಾಗುವ ಸುದ್ದಿ ಸಮಾಚಾರಗಳನ್ನು ತಿಳಿಸಿ. ಪೊಟ್ಟನೂರು ಯುದ್ಧವಿಲ್ಲದೆ ರಾಯನ ಪಾಲುಮಾಡಲು ಭಯಂಕರ ಪಿತೂರಿಮಾಡುತ್ತಿದ್ದೀರಿ. ಇವೇ ಮೊದಲಾದ ಆಕ್ಷೇಪಣೆಗಳು ನಿಮ್ಮಮೇಲೆ ಹೊರೆಸಲ್ಪಟ್ಟಿವೆ. ಇವುಗಳು ಎಷ್ಟೇ ಸುಳ್ಳೆಂದರೂ, ಇಷ್ಟೆಲ್ಲ ಸುಳ್ಳಿನ ಕಥೆ ಬೆಳೆಯಲು ಯಾವುದಾದರೂ ಒಂದು ಸತ್ಯಾಂಶವಿರಲೇಬೇಕು—ಅಲ್ಲವೇ?" ಎಂದನು. ಗಜಪತಿ ಪರಿಶೀಲನಾದೃಷ್ಟಿಯಲ್ಲಿ ಶಿವಚಂದ್ರ ಮಹಾಪಾತ್ರನ ಮುಖವನ್ನೇ ದಿಟ್ಟಿಸಿ ನೋಡುತ್ತಾ,

"ನನ್ನ ಮಾತಿನಿಂದ ಪ್ರಭುಗಳಿಗೆ ಅಪಚಾರವಾಗಿದ್ದರೆ ಕ್ಷಮಿಸಬೇಕು ಪ್ರಭು. ನೀವೂ ಈ ಎಲ್ಲಾ ಮಿಥ್ಯಾರೋಪಗಳನ್ನೂ ನಂಬುತ್ತೀರಾ? ನಾನು ಅಂತಹ ನೀಚಕೃತ್ಯದಲ್ಲಿ ಮನಸ್ಸುಕೊಟ್ಟಿದ್ದರೆ, ನಾನು ಶತ್ರುಗಳ ಎಂಜಲಿಗೆ ಕೈಯೊಡ್ಡಿ, ನನ್ನ ತಾಯಿಸಮಾನವಾಗಿರುವ ಮಾತೃಭೂಮಿಗೆ ದ್ರೋಹ

ಬಗೆಯುವ ಕಾರ್ಯಕ್ಕೆ ಪ್ರವರ್ತಕನಾಗಿದ್ದರೆ ನನ್ನನ್ನು ಕೂಡಲೇ ತುಂಡರಿಸಿ ಕೊಲ್ಲಬೇಕು........ಇದುವರೆಗೂ ಪ್ರಭುಗಳ ಉಪ್ಪುಂಡು ಬೆಳೆದ ದೇಹ ಇದು. ಮುಪ್ಪಿನಲ್ಲಿ, ನನ್ನ ಜೀವಿತದ ಮಹತ್ಕಾರ್ಯವನ್ನು ಕುಲಗೆಡಿಸುವ ನನ್ನ ಸತ್ಕೀರ್ತಿಗೆ ಕಳಂಕತರುವ ನನ್ನ ಚಾರಿತ್ರಕ್ಕೆ ಮಸಿಯನ್ನು ಬಳಿಯುವ ಈ ಹೇಯವಾದ ಕಾರ್ಯದಲ್ಲಿ ನಾನು ತೊಡಗುವೆನೇ ಪ್ರಭು!"

"ನೀವು ಹೇಳುವುದೆಲ್ಲ ದಿಟ, ನಾ ಬಲ್ಲೆ. ಆದರೆ, ಅಕಾರಣವಾಗಿ ನಿಮ್ಮಮೇಲೆ ಉಳಿದ ಮಹಾಪಾತ್ರರು ಏಕೆ ಇಲ್ಲದ ಸಂಗತಿಗಳನ್ನು ಆರೋಪಿಸಿ ಹೇಳಬೇಕು. ಇದರಿಂದ ಅವರಿಗೆ ಆಗುವ ಅನುಕೂಲವಾದರೂ ಏನು ?"

"ನನಗೂ ಇದೇ ಆಶ್ಚರ್ಯದ ಸಂಗತಿಯಾಗಿದೆ ಪ್ರಭು! ನಾನು ಇದುವರೆಗೂ ಎಲ್ಲ ಮಹಾಪಾತ್ರರನ್ನೂ ಅಣ್ಣತಮ್ಮಂದಿರನ್ನು ನೋಡಿಕೊಳ್ಳುವಂತೆ, ಪ್ರೀತಿವಿಶ್ವಾಸಗಳಿಂದಲೇ ನೋಡುತ್ತಾ ಬಂದಿದ್ದೇನೆ. ನಾವೆಲ್ಲ ಒಂದು ಮನೆಯವರೆಂದು ತಿಳಿಯುವಂತೆ, ಅವನನ್ನು ನೋಡಿಕೊಂಡಿದ್ದೇನೆ. ನಾನು ಕೃಷ್ಣದೇವರಾಯನಿಗೆ ಸೆರೆ ಸಿಕ್ಕುವತನಕ ನನ್ನಲ್ಲಿ ಮಹಾಪಾತ್ರರೆಲ್ಲರೂ ಅತಿ ವಿಶ್ವಾಸದಿಂದ ಇದ್ದರು. ಆದರೆ, ನಾನು ಸೆರೆ ಮನೆಯಿಂದ ತಪ್ಪಿಸಿಕೊಂಡು ಬಂದಮೇಲೆ, ನನ್ನಮೇಲೆ ಅವರಿಗೆ ಮೊದಲಿನ ಪ್ರೀತಿ ವಿಶ್ವಾಸಗಳು ಏಕೋ ಹಾರಿಹೋಗಿವೆ. ಏಕೆಂಬುದು ತಿಳಿಯದಾಗಿದೆ. ನಾನು ಎಂದೂ ಯಾರಿಗೂ ಯಾವಬಗೆಯ ಕೇಡೂ ಮಾಡಿದವನಲ್ಲ. ಯಾರಿಗೂ ಯಾವ ವಿಷಯದಲ್ಲೂ ಅಹಿತವನ್ನೂ ಬಯಸಿದವನಲ್ಲ. ಹೀಗಿದ್ದೂ ನನ್ನನ್ನು ಮಹಾಪಾತ್ರರು ತುಂಬಾ ತಿರಸ್ಕಾರದಿಂದ, ಕೀಳು ದೃಷ್ಟಿಯಿಂದ ನೋಡುತ್ತಿರುವುದರ ಜತೆಗೆ, ನನ್ನಮೇಲೆ ಇಲ್ಲದ ಸಲ್ಲದ ಆರೋಪಗಳನ್ನು ಹೊರಿಸಿದ್ದಾರೆ. ಇವೆಲ್ಲವನ್ನೂ ನೋಡಿದರೆ, ನನ್ನ ಗ್ರಹಗತಿಗಳು ಚೆನ್ನಾಗಿಲ್ಲವೆಂದು ಎನಿಸುತ್ತಿದೆ—ನನಗೆಲ್ಲೋ ಶನಿದೆಸೆ ಆರಂಭವಾಗಿರಬೇಕು. ಇಲ್ಲದೇ ಇದ್ದರೆ ಒಮ್ಮೆಲೇ, ಅಕಾರಣವಾಗಿ ಇಷ್ಟೆಲ್ಲಾ ಮಿಥ್ಯಾರೋಪ ಹುಟ್ಟಿಕೊಳ್ಳಬೇಕಾದರೆ, ಏನನ್ನಬೇಕು?

—ಎಂದ, ನೊಂದು ನುಡಿದ ಶಿವಶ್ಚಂದ್ರಮಹಾಪಾತ್ರ.

"ತಮ್ಮ ಮಾತನ್ನು ಕೇಳಿ ನನಗೂ ತುಂಬಾ ವ್ಯಥೆಯಾಗುತ್ತಿದೆ. ನಿಮ್ಮಮೇಲೆ ಅಕಾರಣವಾಗಿ ಮಹಾಪಾತ್ರರು ಅವಿಶ್ವಾಸ ಸೂಚಿಸಿ, ಆರೋಪಗಳನ್ನು ಹೊರಿಸುತ್ತಿರುವುದನ್ನು ನೋಡಿದರೆ, ನಿಮಗೆಮಾತ್ರವೇ ಅಲ್ಲ, ಇಡೀ ಉತ್ಕಲಕ್ಕೆ ಶನಿಕಾಟ ಆರಂಭವಾಗಿದೆ ಎಂದು ತಿಳಿಯುವಂತೆ ಆಗಿದೆ, ನಿಮ್ಮಲ್ಲಿ ಏಕನಿಷ್ಠರಾಗಿದ್ದ ಮಹಾಪಾತ್ರರು ನಿಮ್ಮ ವಿರುದ್ಧ ತಿರುಗಿಬೀಳಲು ಯಾವುದಾದರೊಂದು ಕಾರಣವಿರಲೇಬೇಕು. ನಿಮ್ಮಮೇಲಿನ ವಿಶ್ವಾಸ, ಈ ಒಂದುವರ್ಷದ ಅವಧಿಯಲ್ಲಿ ದ್ವೇಷವಾಗಿ ಮಾರ್ಪಡಲು ಏನಾದರೂ ಪ್ರಬಲ ಕಾರಣವಿರಲೇಬೇಕು.......ನೀವು ಯಾರನ್ನಾದರೂ, ಯಾವ ಕಾರಣಕ್ಕಾದರೂ ದ್ವೇಷಿಸುತ್ತಿದ್ದಿರಾ ?

"ಶ್ರೀ ಜಗನ್ನಾಥನ ಆಣೆಗೂ ನಾನು ಯಾರನ್ನೂ ದ್ವೇಷಿಸುತ್ತಿರಲಿಲ್ಲ ಪ್ರಭು, ಹಿಂದೆಯೂ ದ್ವೇಷಿಸುತ್ತಿರಲಿಲ್ಲ. ಮುಂದೆಯೂ ದ್ವೇಷಿಸುವುದಿಲ್ಲ."

"ನೀವು ಯಾರನ್ನು ದ್ವೇಷಿಸದಿದ್ದರೂ, ನಿಮ್ಮನ್ನು ಯಾರಾದರೂ ದ್ವೇಷಿಸುತ್ತಿದ್ದರೆ? ಯಾವ ಕಾರಣಕ್ಕಾದರೂ ಸರಿ, ದ್ವೇಷಿಸುತ್ತಿದರೆ ?

ಈ ಪ್ರಶ್ನೆ ಕೇಳಿ ಶಿರಶ್ಚಂದ್ರ ಮಹಾಪಾತ್ರನು ಆಲೋಚಿಸುತ್ತಾ ಕುಳಿತ—ಕೆಲವು ಕ್ಷಣ. ಅನಂತರ ಹೇಳಿದ.

"ನನ್ನ ಊಹೆ ತಪ್ಪಿದ್ದರೂ ಇರಬಹುದು ಪ್ರಭು ! ಆದರೆ ಹಲವಾರು ಸಂದರ್ಭಗಳಲ್ಲಿ ಈ ಅಂಶ ಹೊರಬಿದ್ದಿರುವುದನ್ನು ನೋಡಿದ್ದೇನೆ. ನನ್ನನ್ನು ರಂಡತೆ ಕೇಶವಪಾತ್ರನಿಗೆ ಮಾತ್ರ ಏಕೋ ಆಗುತ್ತಿರಲಿಲ್ಲ. ಮೊದಲಿನಿಂದಲೂ ನನ್ನ ಬಗೆಗೆ ಒಂದು ಬಗೆಯ ಅಸಹನೆ, ದ್ವೇಷ ಇದ್ದುದನ್ನು ನಾನು ಬಲ್ಲೆ. ಬಹುಶಃ ಈ ಒಂದು ಕಾರಣಕ್ಕೆ ಅವರು ನನ್ನನ್ನು ದ್ವೇಷಿಸಲು ಆರಂಭಿಸಿರಬೇಕು.

ಒಮ್ಮೆ ಕೇಶವಪಾತ್ರನಿಗೆ ಮಹಾಪಾತ್ರರ ಕೂಟಕ್ಕೆ ನಾಯಕನಾಗಿ ಆರಿಸಲ್ಪಡುವ ಆಸೆಯಾಯಿತು. ಇದನ್ನು ಒಂದೆರಡುಬಾರಿ ನನ್ನ ಇದಿರಿನಲ್ಲಿ ವ್ಯಕ್ತಪಡಿಸಿದ್ದ. ಅವನ ಆಸೆಯನ್ನು ಈಡೇರಿಸಲಾಗದ ಸ್ಥಿತಿಯಲ್ಲಿ ನಾನು ಇದ್ದೆ. ಮಹಾಪಾತ್ರರ ನಾಯಕನ ಪದವಿಗೆ ನನ್ನನ್ನಲ್ಲದೆ, ಬೇರೆ ಯಾರನ್ನೂ ಆರಿಸಲು ಮಹಾತ್ರರು ಒಪ್ಪಲಿಲ್ಲ. ಕೇಶವಪಾತ್ರನು ವೀರನಾಗಿದ್ದರೂ—ಸದ್ಗುಣಿಯಾಗಿದ್ದರೂ—ವಯಸ್ಸಿನಲ್ಲಿ ನನಗಿಂತಲೂ

ಒಂದೆರಡುವರ್ಷ ಕಿರಿಯವನಾಗಿದ್ದರೂ ಏಕೋ ಅವನನ್ನು ನಾಯಕ ಪದವಿಗೇರಿಸಲು ಮಹಾಪಾತ್ರರು ಇಷ್ಟಪಡಲಿಲ್ಲ. ಇದರಿಂದಾಗಿ, ಕೇಶವ ಪಾತ್ರನಿಗೆ ತುಂಬಾ ನಿರಾಶೆಯುಂಟಾಯಿತು. ಅದರ ಸಿಟ್ಟನ್ನು ನನ್ನಮೇಲೆ ತೋರಿಸುತ್ತಿದ್ದ. ನಾನು ಆದಷ್ಟು ರೀತಿಯಲ್ಲಿ ಅವನ ಅಸಮಾಧಾನವನ್ನು ಕಳೆಯಲು ಪ್ರಯತ್ನಿಸಿ ವಿಫಲನಾದೆ. ಕಡೆಗೂ ಅವನು ನನ್ನಮೇಲೆ ಕತ್ತಿ ಮಸೆಯುವುದನ್ನು ಬಿಡಲಿಲ್ಲ. ಉಳಿದ ಮಹಾಪಾತ್ರರ ಬೆಂಬಲವಿದ್ದ ನಾನೂ ಅದನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಈಗ ಆ ದ್ವೇಷದ ಮೊಟ್ಟೆ ಎಂತಹ ವಿಷಪ್ರಾಣಿಗೆ ಜನನ ಕೊಟ್ಟಿತೆಂಬ ಸಂಗತಿ ತಿಳಿದು ವಿಷಾದ ವಾಗಿದೆ. ಕೇಶವಪಾತ್ರನು ಉದಯಗಿರಿಯ ಮುತ್ತಿಗೆಯಲ್ಲಿ ರಾಯನಿಗೆ ಸೆರೆ ಸಿಕ್ಕಿ, ಈಗ ಬಂಧನದಲ್ಲಿದ್ದಾನೆ. ಅವನ ಮಗ ಬಾಲಚಂದ್ರ ಮಹಾ ಪಾತ್ರನು, ಹಿರಿಯ ಮಹಾಪಾತ್ರರಲ್ಲಿ ಅನೇಕರು ಸೆರೆಮನೆಯಲ್ಲಿ ಇರುವ ಅವಕಾಶವನ್ನು ಉಪಯೋಗಿಸಿಕೊಂಡು, ನನ್ನ ವಿರುದ್ಧ ಅಪಪ್ರಚಾರ ಮಾಡಿ, ಎಲ್ಲರ ಮನಸ್ಸನ್ನೂ ಕೆಡಿಸಿ, ಈಗ ತಾನೇ ಮಹಾಪಾತ್ರರ ನಾಯಕನಾಗಿ ಆರಿಸಲ್ಪಟ್ಟಿದ್ದಾನೆ. ನಾನು ಅವನಿಗೆ ಯಾವ ಕೆಡುಕು ಮಾಡದಿದ್ದರೂ. ನನ್ನನ್ನು ಪರಮಶತ್ರುವೆಂದು ಪರಿಗಣಿ ಸಿದ್ದಾನೆ. ನನ್ನಮೇಲೆ ಇಲ್ಲಸಲ್ಲದ ಆರೋಪಗಳನ್ನು ಹೊರೆಸಿ, ನನ್ನಬಗ್ಗೆ ಎಲ್ಲರ ಮನಸ್ಸನ್ನೂ ಕಲುಷಿತಗೊಳಿಸಲು ಪ್ರಯತ್ನಿಸುತ್ತಿದ್ದಾನೆ. ಧರ್ಮಾವ ತಾರಿಗಳಾದ ಪ್ರಭುಗಳು ಸ್ವಾರ್ಥಸಾಧಕರಾದ ಆ ಮಹಾಪಾತ್ರರ ಆಪೋತ್ತ ರಗಳಿಗೆ ಕಿವಿಗೊಡಬಾರದು ಪ್ರಭು!"

—ಎಂದು ಆರ್ತನಾಗಿ ಶಿರಶ್ಚಂದ್ರಮಹಾಪಾತ್ರನು ಹೇಳಿದ.

ಅವನು ಹೇಳಿದ ಮಾತಿನ ರೀತಿಯಲ್ಲಿ ಅವನ ಮನಸ್ಸಿಗೆ ಈ ಎಲ್ಲ ಆರೋಪಗಳಿಂದ ಎಷ್ಟು ನೋವಾಗಿದೆ ಎಂದು ಹೇಳಬಹುದಾಗಿತ್ತು. ಕೇವಲ ಕೆಲವು ತಾಸುಗಳ ಹಿಂದೆ, ಈ ಆರೋಪಗಳೆಲ್ಲ ನಿಜವಿದ್ದರೂ ಇರ ಬಹುದೆಂಬ ಶಂಕೆಯುಂಟಾಗಿದ್ದ ಗಜಪತಿಗೆ, ಶಿರಶ್ಚಂದ್ರಮಹಾಪಾತ್ರನಿಂದ ಇಂತಹ ಹೇಯವಾದ ಕಾರ್ಯ ನಡೆಯಲು ಸಾಧ್ಯವೇ ಎಂದು ಸಂಶಯ ಉಂಟಾಯಿತು. ಹೇಗೇ ಆಗಲಿ, ಈ ಎಲ್ಲ ಆರೋಪಗಳ ತಳವನ್ನು ಶೋಧಿಸಿ, ಈ ಆರೋಪಗಳ ಸತ್ಯಾಂಶವನ್ನು ಬಯಲುಮಾಡಿ, ತಪ್ಪಿತಸ್ಥರಿಗೆ

ಶಿಕ್ಷಿಸಬೇಕೆಂದು ಗಜಪತಿಯು ನಿಶ್ಚಯಿಸಿ, ಶಿರಶ್ಚಂದ್ರಮಹಾಪಾತ್ರನಂತೆಯೇ ರಾಜದ್ರೋಹದ ಆರೋಪಕ್ಕೆ ಒಳಗಾಗಿದ್ದ ಬೋದಜಣ್ಣಮಹಾಪಾತ್ರನನ್ನು ವಿಚಾರಿಸಲು ನಿರ್ಧರಿಸಿದ. ಶಿರಶ್ಚಂದ್ರಮಹಾಪಾತ್ರನ ಹೇಳಿಕೆಗಳಿಗೂ, ಬೋದಜಣ್ಣಮಹಾಪಾತ್ರನ ಹೇಳಿಗಳಿಗೂ ತಾಳೆ ಬರುವುದೇನೋ—ಎಂದು ನೋಡುವುದೇ ಗಜಪತಿಯ ಉದ್ದಿಶ್ಯವಾಗಿತ್ತು. ಅಂತಲೇ ಬೋದಜಣ್ಣ ಮಹಾಪಾತ್ರನನ್ನು ಕರೆತರಲು ದೂತರನ್ನು ಅಟ್ಟಿದ.—ಶಿರಶ್ಚಂದ್ರ ಮಹಾಪಾತ್ರನು ತನ್ನನ್ನು ಬೀಳ್ಕೊಂಡು ಹೊರಟುಹೋದ ಮೇಲೆ !

## ೧೩

ಬೋದಜಣ್ಣಮಹಾಪಾತ್ರನನ್ನು ಅಂತರಂಗಕ್ಕೆ ಕರೆಸಿಕೊಂಡು ಅವನ ಮೇಲಣ ಅರೋಪಗಳ ಬಗ್ಗೆ ವಿಚಾರಿಸಲಾಗಿ ಒಂದು ಅಂಶ ದೃಢಪಟ್ಟಿತು. ಕೃಷ್ಣದೇವರಾಯನು ತನಗೆ ಕೊಂಡಪಲ್ಲಿಯಲ್ಲಿ ಸೆರೆ ಸಿಕ್ಕಿದ ಪ್ರಮುಖ ದಳಪತಿಗಳೆಲ್ಲರನ್ನೂ ತನ್ನ ಬಳಿಗೆ ಕರೆಸಿಕೊಂಡು ಅವರು ಶತ್ರುಪಕ್ಷಕ್ಕೆ ಸೇರುವುದಾದರೆ ಅವರನ್ನು ಸೆರೆಯಿಂದ ಬಿಡುಗಡೆ ಮಾಡುವುದಾಗಿ ತಿಳಿಸಿದ ನಂತೆ. ಯಾರೂ ರಾಯನ ಕ್ಷಮೆಯನ್ನು ಯಾಚಿಸಿ ಬಿಡುಗಡೆಯಾಗಲು ಇಚ್ಛಿಸದೆ ಇರುವುದನ್ನು ಕಂಡು ರಾಯನು ಬೇರೊಂದು ಉಪಾಯ ಮಾಡಿದನು. ತನ್ನಲ್ಲಿ ಕ್ಷಮೆ ಕೋರಿ ಬಿಡುಗಡೆ ಹೊಂದಿದಮೇಲೆ ತಾನು ತನ್ನಸೈನ್ಯದಲ್ಲಿ ಭಾರಿ ಹುದ್ದೆಗಳನ್ನು ಕೊಡುವುದಾಗಿಯೂ, ರಾಜಕುಮಾರ ವೀರಭದ್ರದೇವನು ಉನ್ನತಿಗೇರಿದಂತೆ ಅವರೂ ಉನ್ನತಿಗೇರಲು ಪ್ರಲೋಭಕ್ಕೆ ಅವರನ್ನು ಈಡುಮಾಡಲು ಪ್ರಯತ್ನಿಸಿದನಂತೆ. ಆ ಸಮಯದಲ್ಲಿ ಶಿರಶ್ಚಂದ್ರಮಹಾಪಾತ್ರನ ನಿಷ್ಠುರವಾದ ಮುಖವನ್ನು ನೋಡಿ ಅನೇಕರಿಗೆ ಮನಸ್ಸಿನಲ್ಲಿ ರಾಯನಲ್ಲಿ ಕ್ಷಮೆ ಹೊಂದಿ ಬಿಡುಗಡೆಯಾಗುವ ಆಸೆಯಿದ್ದರೂ ರಾಯನಲ್ಲಿ ಕ್ಷಮೆ ಕೇಳುವ ಧೈರ್ಯವಾಗದೆ ಸುಮ್ಮನಾದರು. ಆದರೆ ಬೋದಜಣ್ಣಮಹಾಪಾತ್ರನು ಮಾತ್ರ ಈ ಬಗ್ಗೆ ಒಂದು ನಿರ್ಧಾರಕ್ಕೆ ಬಂದಿದ್ದನು. ಅವನಿಗೆ ಶತ್ರುವಿನ ಸೆರೆಮನೆಯಲ್ಲಿ ವೃಥಾ ಸಮಯ ಹಾಳಾಗುತ್ತಿರುವುದು ತುಂಬಾ ಬೇಸರತಂದಿತ್ತು. ಆದಷ್ಟು ಶೀಘ್ರವಾಗಿ ಸೆರೆಮನೆಯಿಂದ ತಪ್ಪಿಸಿಕೊಂಡು ಹೊರಗೆಬಂದು ಶತ್ರುಗಳಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಅವರಮನಸ್ಸು ಚಡಪಡಿಸುತ್ತಿತ್ತು. ಅವನು

ಒಂದು ಸದುದ್ದೇಶದಿಂದ ರಾಯನ ಕ್ಷಮೆ ಕೋರಿ ಸೆರೆಯಿಂದ ಬಿಡುಗಡೆ ಹೊಂದಲು ನಿಶ್ಚಯಿಸಿದನು, ಆ ಸಮಯದಲ್ಲಿ ಅವನಿಗೂ ಶಿರಶ್ಚಂದ್ರ ಮಹಾಪಾತ್ರನಿಗೂ ದೀರ್ಘವಾದ ಚರ್ಚೆ ನಡೆಯಿತು.

"ಉತ್ಕಲದ ಪ್ರತಾಪರುದ್ರ ಗಜಪತಿಗಳ ಸೇವೆಯಲ್ಲಿ, ಅವರ ಉಪ್ಪುಂಡು ಬೆಳೆದ ಈ ದೇಹವನ್ನು ಶತ್ರುಗಳ ಸೇವೆಯಲ್ಲಿ ಕಲುಷಿತ ಗೊಳಿಸಲು ನಿಮಗೆ ಮನವಾದರೂ ಹೇಗೆ ಬಂತು ?"

—ಎಂದು ಶಿರಶ್ಚಂದ್ರ ಮಹಾಪಾತ್ರ ಆಕ್ಷೇಪಿಸಿದನು.

"ನಾನು ಉತ್ಕಲದ ಹಿತದೃಷ್ಟಿಯನ್ನು ಇಟ್ಟುಕೊಂಡು ಮಾಡು ತ್ತಿರುವ ಈ ಕಾರ್ಯವೂ ಒಂದು ಬಗೆಯ ಸೇವೆಯೇ !"

—ಎಂದನು ಬೋದಜಣ್ಣ ಮಹಾಪಾತ್ರ.

"ಶತ್ರುಪಕ್ಷಕ್ಕೆ ಸೇರಿಕೊಂಡು ತಾಯ್ನಾಡಿನಮೇಲೆ ಕತ್ತಿ ಎತ್ತುವುದು ಒಂದು ಸೇವೆಯೇ ?"

"ಹೌದು ; ಹೊರನೋಟಕ್ಕೆ ಇದೊಂದು ವಿದ್ರೋಹ ಕಾರ್ಯವೆನಿ ಸಿದರೂ, ಅಂತರಂಗದಲ್ಲಿ ಇದೊಂದು ಮಹತ್ವದ ಸೇವೆ. ಈಗ ಶತ್ರುಗಳ ಅನೇಕ ರಹಸ್ಯಗಳು ಅವರ ಚಲನವಲನಗಳು, ತಂತ್ರಗಳೇ ಮೊದಲಾದ ಅನೇಕ ಗೋಪ್ಯಸಂಗತಿಗಳು ನಮಗೆ ತಿಳಿಯಬೇಕಾಗಿದೆ. ಇವುಗಳನ್ನು ತಿಳಿಯಲು ಈಗ ನಮಗೊಂದು ಸುಸಂದರ್ಭ ಒದಗಿದೆ. ನಾವು ರಾಯನ ಕ್ಷಮೆ ಯಾಚಿಸಿ ಬಿಡುಗಡೆ ಹೊಂದಿ, ಅವರ ಮಿತ್ರರಂತೆ ನಟಿಸಿ, ಅವರ ನಂಬಿಕೆಗೆ ಪಾತ್ರರಾಗಿ ಆ ಮೂಲಕ ನಮಗೆ ಬೇಕಾದ ಸುದ್ದಿಗಳನ್ನು ಸಂಗ್ರಹಿಸಿಕೊಳ್ಳಬಹುದು. ನಾವು ಉತ್ಕಲಕ್ಕೆ ಗಂಡಾಂತರ ಒದಗಿರುವ ಈ ದುರ್ಭರ ಸನ್ನಿವೇಶದಲ್ಲಿ ಇಲ್ಲಿ ಸೆರೆಮನೆಯಲ್ಲಿ ಕೊಳೆಯುತ್ತಾ ಬಿದ್ದಿ ರುವುದರಿಂದ ಯಾವ ಪುರುಷಾರ್ಥಸಾಧನೆಯಾಯಿತು ? ಈಗ ನಾವು ಉಪಾಯಾಂತರವಾಗಿ ಇಲ್ಲಿಂದ ಪಾರಾಗುವ ಪ್ರಯತ್ನಮಾಡಬೇಕು ?"

"ಬೋದಜಣ್ಣ ಮಹಾಪಾತ್ರರೇ, ನೀವೇ ಬುದ್ಧಿಶಾಲಿಗಳೆಂದು ಭಾವಿಸಿದರೆ, ಶತ್ರುಗಳು ನಿಮಗಿಂತಲೂ ಬುದ್ಧಿಶಾಲಿಗಳು. ರಾಯನು ತನ್ನ ಔದಾರ್ಯ ಪ್ರದರ್ಶನದ ಸಲುವಾಗಿ ನಿಮ್ಮನ್ನು ಕ್ಷಮಿಸುವನೆಂದು ತಿಳಿದಿದ್ದರೆ ಅದು ನಿಮ್ಮ ತಪ್ಪು ಕಲ್ಪನೆ. ನಮ್ಮಿಂದ ಒಂದು ಹನಿ

ಹನಿ ರಕ್ತವಿಲ್ಲದೆ ಕೊಂಡಪಲ್ಲಿಯನ್ನು ಹೇಗೆ ಉಪಾಯವಾಗಿ ಸ್ವಾಧೀನಕ್ಕೆ ತೆಗೆದುಕೊಂಡನೆಂಬುದು ನಿಮಗೆ ತಿಳಿದಿದೆ. ಈಗ ನಿಮ್ಮೆಲ್ಲರಿಗೆ ಕ್ಷಮೆ ತೋರಲು ಮುಂದೆ ಬಂದಿದ್ದಾನೆ. ಇದರಲ್ಲಿ ಯಾವುದೋ ದುರುದ್ದೇಶ ವಿದೆ, ಕುತಂತ್ರವಿದೆ ಎಂದು ನನ್ನ ಭಾವನೆ."

"ರಾಯನ ತಂತ್ರವೇನಿದ್ದರೂ ಅದಕ್ಕೆ ಮಾರುಹೋಗುವವನು ನಾನಲ್ಲ. ನಾನು ಇಲ್ಲಿಂದ ಹೊರಬೀಳುವುದು ಒಂದು ಘನೋದ್ದೇಶ ಸಾಧನೆಗೆ ಅದು ಸಾಧಿಸದೆ ಹೋದರೆ, ನಾನು ಆತ್ಮಹತ್ಯ ಮಾಡಿಕೊಳ್ಳುವ ವನೇ ಹೊರತು, ಶತ್ರುಗಳ ಪ್ರಲೋಭಕ್ಕೆ ಒಳಗಾಗಿ, ತಾಯಿನಾಡಿಗೆ ದ್ರೋಹ ಬಗೆಯುವುದಿಲ್ಲ!"

"ನಿಮ್ಮ ಉದ್ದೇಶ್ಯ ಶ್ಲಾಘನೀಯವಾದುದಾದರೂ, ನೀವು ಕ್ಷಮೆ ತೋರಿ ಬಿಡುಗಡೆ ಹೊಂದಿ ನಿಮ್ಮ ಉದ್ದೇಶ್ಯ ಸಾಧಿಸುವ ಬಗ್ಗೆ ನನಗೆ ಸಂಶಯವಿದೆ. ಏಕೆಂದರೆ ನೀವು ತುಳಿಯುತ್ತಿರುವ ದಾರಿ ತುಂಬಾ ಬಳಸು ದಾರಿ. ಇರ್ಕೆಡೆಯಲ್ಲೂ ಸಾಣೆ ಹಿಡಿದು ಹರಿತಮಾಡಿದ ಕೊರಡಿಯೊಡನೆ ಮಾಡುವ ಹೋರಾಟ ನಿಮ್ಮ ಈ ಪ್ರಯತ್ನ! ಇದರಿಂದ ನಿಮಗೇ ಹೆಚ್ಚಿನ ಅಪಾಯ. ಒಂದುವೇಳೆ ನಿಮ್ಮ ಸಂಚು ಶತ್ರುವಿಗೆ ತಿಳಿದರೆ ಮುಂದಾಗುವ ಪರಿಣಾಮವನ್ನು ಆಲೋಚಿಸಿ ನಿಮ್ಮನ್ನು ಅವರು ಕೊಚ್ಚಿ ಕೊಂದು, ನಾಯಿ ನರಿಗಳಿಗೆ ಹಾಕಲೂ ಹೇಸುವುದಿಲ್ಲ ಇದು ಖಂಡಿತ, ಶತ್ರುವಿನ ವಿಷಯ ದಲ್ಲಿ ತುಂಬಾ ಎಚ್ಚರದಿಂದ ಇರುವುದು ಲೇಸು!"

"ಈ ಬಗ್ಗೆ ನಾನೂ ಚೆನ್ನಾಗಿಯೇ ವಿಚಾರಮಾಡಿದ್ದೇನೆ. ಈ ಕಾರ್ಯದ ಜವಾಬ್ದಾರಿ, ಅಪಾಯಗಳೇನೆಂಬುದೂ ಚೆನ್ನಾಗಿ ತಿಳಿದಿದೆ. ನನಗೆ ರಾಜಕುಮಾರ ವೀರಭದ್ರದೇವರ ಕಾರ್ಯ ಸ್ಫೂರ್ತಿ ಕೊಟ್ಟಿದೆ. ಅವರನ್ನು ನಾನು ಚೆನ್ನಾಗಿ ಬಲ್ಲೆ. ಅವರು ಶತ್ರುಗಳೊಡ್ಡಿದ ಯಾವ ಪ್ರಲೋಭಕ್ಕೂ ಒಳಗಾಗುವ ವ್ಯಕ್ತಿಗಳಲ್ಲ. ಅಂತಹವರು ಶತ್ರುಗಳ ಸೇವೆ ಯನು ಅಂಗೀಕರಿಸಿ, ಮಲೆಬೆನ್ನೂರಿನ ಮಾಂಡಲೇಶ್ವರರಾಗಿರುವುದರಲ್ಲಿ ಏನೋ ಮಹತ್ವದ ಸಂಗತಿಯಿದೆ. ಬಹುಶಃ ಅವರೂ ಶತ್ರುಪಕ್ಷಕ್ಕೆ ಸೇರಿ ರುವಂತೆ ನಟಿಸಿ, ಅವರ ವಿಶ್ವಾಸಕ್ಕೆ ಪಾತ್ರರಾಗಿ, ಆಮೂಲಕ ಅವರ

ರಹಸ್ಯಗಳನ್ನು ತಿಳಿದುಕೊಂಡು ಉತ್ಕಲಕ್ಕೆ ಸೇರಹೋಗುವ ಉದ್ದಿಶ್ಯದಿಂದಲೇ ಶತ್ರುಗಳ ಸೇವೆಯನ್ನಂಗೀಕರಿಸಿರಬೇಕೆಂದು ನನ್ನ ಊಹೆ!"

"ರಾಜಕುಮಾರ ವೀರಭದ್ರದೇವರ ಮಾತು ಬೇರೆ. ಅವರು ಶತ್ರು ಪಕ್ಷಕ್ಕೆ ಸೇರಿರುವ ಸಂಗತಿ ಇಂದಿಗೂ ಸಮಸ್ಯೆಯಾಗಿ ಉಳಿದಿದೆ. ಅವರು ಯಾವ ಉದ್ದಿಶ್ಯದಿಂದ ಈ ಕಾರ್ಯ ಮಾಡಿರುವರೋ ಯಾರೂ ಭೇದಿಸಲಾರದಾಗಿದ್ದಾರೆ! ಇಷ್ಟುಮಾತ್ರ ನಿಜ. ಅವರು ರಾಯರ ಸೇವೆಯಲ್ಲಿದ್ದಾರೆ! ಈ ಕಾರ್ಯವನ್ನು ಗಜಪತಿಗಳು ಪುರಸ್ಕರಿಸಿಲ್ಲ ಎಂಬುದನ್ನು ಮರೆಯಬಾರದು. ವೀರಭದ್ರದೇವರ ಕೃತ್ಯವನ್ನು ಯುವರಾಜಕುಮಾರರೂ ಮೆಚ್ಚಿಲ್ಲವೆಂಬುದೂ ನಿಮಗೆ ತಿಳಿದಿದೆ. ಎಲ್ಲರೂ ವೀರಭದ್ರದೇವರು ಮಾಡಿರುವ ಈ ಕೃತ್ಯದಿಂದ ಉತ್ಕಲಕ್ಕೆ ಅಪಮಾನವಾಯಿತೆಂದು ತಲೆ ತಗ್ಗಿಸಿದ್ದಾರೆ—ಲಜ್ಜೆಯಿಂದ. ಗಜಪತಿಗಳಂತೂ ಆ ರಾಜಕುಮಾರರನ್ನು ತಮ್ಮ ಮಗನಲ್ಲವೆಂದು ಅನೇಕಬಾರಿ ಘೋಷಿಸಿದ್ದಾರೆ. ಈಗ ವೀರಭದ್ರದೇವರು ನಮ್ಮ ಮಿತ್ರರಲ್ಲ ಅವರು ನಮ್ಮ ಶತ್ರುಗಳೇ ಆಗಿದ್ದಾರೆ."

ಈ ಮಾತು ಕೇಳಿ ಬೋದಜಣ್ಣ ಮಹಾಪಾತ್ರನು ಒಂದು ಕ್ಷಣ ಕಾಲ ಆಲೋಚಿಸುತ್ತಾ ಕುಳಿತ.

"ಈಗ ನಮಗೆ ಬೇಕಿರುವುದು ರಾಜಕುಮಾರ ವೀರಭದ್ರದೇವರ ಆದರ್ಶವಲ್ಲ. ಯುವರಾಜಕುಮಾರ ರಾಮಚಂದ್ರದೇವರ ಆದರ್ಶ!"

—ಎಂದನು ಶಿರಶ್ಚಂದ್ರ ಮಹಾಪಾತ್ರ.

ಶಿರಶ್ಚಂದ್ರ ಮಹಾಪಾತ್ರನ ಮಾತುಗಳೆಲ್ಲವನ್ನು ಚನ್ನಾಗಿ ಮನನ ಮಾಡಿಕೊಂಡು, ತನ್ನ ಕಡೆಯ ನಿರ್ಧಾರ ಹೇಳಿದನು, ಬೋದಜಣ್ಣ ಮಹಾಪಾತ್ರ.

"ನಮ್ಮ ನಿಮ್ಮ ಅಭಿಪ್ರಾಯಗಳಲ್ಲಿ ಹೆಚ್ಚಿನ ಭೇದವಿಲ್ಲ. ನಮ್ಮಿಬ್ಬರ ಉದ್ದೇಶ ಒಂದೇ ಆದರೂ ನಾವು ಆರಿಸಿಕೊಂಡ ಮಾರ್ಗಗಳು ಮಾತ್ರ ಭಿನ್ನವಾದವು. ನೀವು ನಿಮ್ಮ ಸ್ವಭಾವ, ವಯೋಗುಣಕ್ಕೆ ತಕ್ಕ ರೀತಿಯಲ್ಲಿ ಮಾತನಾಡುತ್ತಿದ್ದೀರಿ. ನಿಮ್ಮ ಆದರ್ಶದ ವ್ಯಕ್ತಿ ಯುವರಾಜಕುಮಾರರಾದರೆ, ನನ್ನ ಆದರ್ಶ ವ್ಯಕ್ತಿ ರಾಜಕುಮಾರ ವೀರಭದ್ರದೇವರಾಗಿದ್ದಾರೆ. ಈಗ ನಮ್ಮ ಆದರ್ಶಸಾಧನೆಗೆ ನಮ್ಮದೇ ಆದ ದಾರಿಯಲ್ಲಿ

ನಡೆಯಬೇಕಾಗಿದೆ. ಹೀಗಾಗಿ ನಿಮ್ಮಿಂದ ನಾನು ಬೇರೆಯಾಗಲೇಬೇಕಾದ ಸಂದರ್ಭ ಒದಗಿದೆ ಜಗನ್ನಾಥನ ಕೃಪೆ ಇದ್ದರೆ ನಾವು ಸ್ವತಂತ್ರ ಉತ್ಕಲದಲ್ಲಿ ಮಿತ್ರರಾಗಿ ಸಂಧಿಸೋಣ!“ ಎಂದು ಹೇಳಿ ಶಿರಶ್ಚಂದ್ರಮಹಾಪಾತ್ರನಿಂದ ಬೀಳ್ಕೊಂಡಿದ್ದನು.

ಬೋದಜಣ್ಣ ಮಹಾಪಾತ್ರನು ಕ್ಷಮೆಯಾಚಿಸಿ ಸೆರೆಮನೆಯಿಂದ ಬಿಡುಗಡೆಯಾದರೂ ಅವನು ಸೆರೆಮನೆಯಿಂದ ಹೊರಗೆ ಬಂದ ಉದ್ದಿಶ್ಯ ಮಾತ್ರ ನೆರವೇರದೆಹೋಗಿತ್ತು. ಕೃಷ್ಣದೇವರಾಯನು ಅವನಿಗೆ ಎಲ್ಲ ಸ್ವಾತಂತ್ರ್ಯ ಕೊಟ್ಟಿದ್ದರೂ, ದುರ್ಗದಿಂದ ಹೊರಗೆ ಹೋಗಬೇಕಾದರೆ ರಾಯನ ಅಪ್ಪಣೆಯನ್ನ ಪಡೆಯಬೇಕಾಗಿತ್ತು. ಬೋದಜಣ್ಣ ಮಹಾಪಾತ್ರ ಚಲನವಲನಗಳ ಮೇಲೇ ಗಮನವಿಟ್ಟು ವರದಿಮಾಡಲು ಗುಪ್ತಚಾರರು ನೇಮಿಸಲ್ಪಟ್ಟಿದರು. ಬೋದಜಣ್ಣನು ಮಾಡುತ್ತಿದ್ದ ಪ್ರತಿಯೊಂದು ಕಾರ್ಯ, ಆಡುತ್ತಿದ್ದ ಪ್ರತಿಯೊಂಡು ಮಾತು ರಾಯನಿಗೆ ಕೂಡಲೇ ವರದಿಯಗಾಗುತ್ತಿತ್ತು. ಇದನ್ನು ಬೋವಜಣ್ಣ ಅರಿತುದರಿಂದಲೇ ಅವನು ಆದುಷ್ಟು ಜಾಗರೂಕನಾಗಿದ್ದನು ಇದು ಸೆರೆಮನೆಯವಾಸಕ್ಕಿಂತಲೂ ಕಠಿವಾಗಿತ್ತು.

ಹೀಗೆ ಸುಮಾರು ಮೂರು ನಾಲ್ಕು ತಿಂಗಳು ಯಾವ ಬಗೆಯ ವಿದ್ರೋಹದ ಚಟವಟಿಕೆಗಳಿಗೆ ತೊಡಗದೆ, ಇದ್ದಮೇಲೆ ರಾಯನಿಗೆ ಅವನ ವಿಷಯದಲ್ಲಿ ನಂಬಿಕೆಯುಂಟಾಯಿತು. ಅವನ್ನು ಸೂಕ್ತರೀತಿಯಲ್ಲಿ ಉಪಯೋಗಿಸಿಕೊಂಡು ಗಜಪತಿಯ ರಹಸ್ಯಗಳನ್ನು ಭೇಇಸಲು ಆಶಿಸಿದನು. ಅದರಂತೆ ಬೋದಜಣ್ಣ ಮಹಾಪಾತ್ರನಿಗೆ ರಾಯನ ಸೈನ್ಯದಲ್ಲಿ, ಒಂದು ಜವಾಬ್ದಾರಿಯುತವಾದ ಕೆಲಸ ಕೊಡಲ್ಪಟ್ಟಿತು. ಅವನು ಗಜಪತಿಯ ಸೈನ್ಯದ ಚಲನವಲನಗಳನ್ನು ತಿಳಿದು ವರದಿ ಮಾಡಬೇಕಿತ್ತು ಅಲ್ಲದೇ ತನ್ನ ವರ್ಚಸ್ಸನ್ನ ಉಪಯೋಗಿಸಿ ಸೈನ್ಯಕ್ಕೆ ಬೇಕಾದ ಆಹಾರವನ್ನು ದೊರಕಿಸಿ ಕೊಡಬೇಕಾಗಿತ್ತು. ಈ ಕೆಲಸ ಕಾರ್ಯಗಳು ಬೋದಣ್ಣ ಮಹಾಪಾತ್ರನಿಗೆ ಇಷ್ಟವಿಲ್ಲದಿದ್ದರೂ ಮಾಡಬೇಕಾಯಿತು. ತನ್ನ ಮೇಲೆ ಸದಾ ಬೇಹಕಾಯುವ ಗುಪ್ತ ಚಾರರಕಣ್ಣುತಪ್ಪಿಸಿಕೊಂಡು ಯಾವ ವಿದ್ರೋಹದ ಚಟುವಟಿಕೆಗೂ ತೊಡಗಲು ಸಾಧ್ಯವಿರಲಿಲ್ಲ. ಹೀಗಾಗಿ

ಬೋದಜಣ್ಣ ಮಹಾಪಾತ್ರನು ಕೃಷ್ಣದೇವರಾಯನ ಸೈನಿಕಯಂತ್ರದಲ್ಲೂ ಒಂದು ಉಪಾಂಗವೇ ಆಗಿದ್ದನು. ಅವನ ವ್ಯಕ್ತಿತ್ವ ಆಸೆ, ಆದರ್ಶಗಳು ಗಾಳಿಗೆ ತೂರುವಂತೆ ಆಗಿತ್ತು. ಅವನು ರಾಯನು ಹೇಳಿದ ಕೆಲಸಗಳನ್ನ ಮಾಡಿಕೊಡುವ ಅಸಂಖ್ಯಾತ ಪರಿಚಾರಕರಲ್ಲೂ ಒಬ್ಬನೇ ಆಗಿದ್ದ. ಶಿರಶ್ಚಂದ್ರಮಹಾಪಾತ್ರನ ಉಪದೇಶ ನೆನಪಿಗೆ ಬಂದು ತುಂಬಾವ್ಯಥೆಯಾಗುತ್ತಿತ್ತು. ಅವನ ಮಾತನ್ನು ಕೇಳದೆ, ತಾನು ಕ್ಷಮೆಯಾಚಿಸಿ ಹೊರಗೆ ಬಂದುದು ಮೂರ್ಖತನವಾಯಿತೆಂದು ಸಾವಿರಬಾರಿ ಅನಿಸಿತ್ತು. ತಾನು ಕ್ಷಮೆಯನ್ನು ಯಾಚಿಸಿ ಹೊರಗೆ ಬಂದು ಉದ್ದಿಶ್ಯಗಳೊಂದೂ ನೆರವೇರಿರಲಿಲ್ಲ. ಇದರಿಂದ ವ್ರತಭಂಗವಾಗಿತ್ತೇಹೊರತು, ಸುಖಮಾತ್ರ ಸಿಕ್ಕಿರಲಿಲ್ಲ.

ಬೋದಜಣ್ಣನ ಸ್ಥಿತಿ ನಿಜಕ್ಕೂ ಸೆರೆಯಾಳಿನ ಸ್ಥಿತಿಗಿಂತಲೂ ಪರಿಶೋಚನೀಯವಾಯಿತು. ಸೆರೆಯೊಳಗಾದರೆ ಆತ್ಮ ಸ್ವಾತಂತ್ರ್ಯವಿತ್ತು. ಆತ್ಮಗೌರವವಿತ್ತು, ಬೋದಜಣ್ಣಮಹಾಪಾತ್ರನಿಗೆ ಇವೆರಡೂ ಇಲ್ಲವಾಗಿತ್ತು. ಆತ್ಮ ಒಪ್ಪದ ಕೆಲಸವನ್ನೂ, ಆತ್ಮಗೌರವ ಉಳಿಯದ ದೇಶಪ್ರೇಮಿಯೂ ಮಾಡದಂತಹ ಹೀನ ಕೆಲಸವನ್ನೂ, ಅವನು ಮಾಡಬೇಕಾಗಿತ್ತು. ಇಲ್ಲದಿದ್ದರೆ, ಅವನ ಜೀವಕ್ಕೆ ಶತ್ರುಗಳಿಂದ ಗಂಡಾಂತರ ಒದಗುತ್ತಿತ್ತು. ಹೀಗೆ ದಿನದಿನವೂ ಒಂದೊಂದುಬಗೆಯ ನರಕಯಾತನೆಯನ್ನು ಅನುಭವಿಸಿ ಕೆಲವುಕಾಲ ರಾಯನ ಸೇವೆಯಲ್ಲಿ ಇದ್ದನು. ರಾಯನ ಗುಪ್ತಚಾರರ ಕಣ್ಣು ತಪ್ಪಿಸಿ ಹೇಗಾದರೂ ಮಾಡಿ, ಅಲ್ಲಿಂದ ತಪ್ಪಿಸಿಕೊಂಡು ಹೋಗಬೇಕೆಂದು, ಸರಿಯಾದ ಸಮಯಕ್ಕಾಗಿ ಕಾಯುತ್ತಿದ್ದನು. ಹೀಗಿರುವಲ್ಲಿ ಒಂದುದಿನ ಅವನು ಕಾಯುತ್ತಿದ್ದ ಸುಸಂಧಿ ದೊರಕಿತು. ಸೇನೆಗೆ ಬೇಕಾಗುವ ಆಹಾರಪದಾರ್ಥಗಳನ್ನು ದೂರದ ಹಳ್ಳಿಗಳಿಂದ ಸಂಗ್ರಹಿಸಿ ತರುವ ಕೆಲಸದಮೇಲೆ ಹೊರಟ. ಬೋದಜಣ್ಣಮಹಾಪಾತ್ರನು ತನ್ನನ್ನು ಅನುಸರಿಸಿ ಬರುತ್ತಿದ್ದ ಸೈನಿಕರನ್ನು ಜಾಡುತಪ್ಪಿಸಿ, ಅವರ ಕೈಯಿಂದ ತಪ್ಪಿಸಿಕೊಂಡು, ಪೊಟ್ನೂರಿಗೆ ಬಂದು ಸೇರಿದ್ದನು- ಅವನು ಪೊಟ್ನೂರಿಗೆ ಸೂಕ್ತಕಾಲದಲ್ಲೇ ಬಂದಂತಾಗಿತ್ತು. ಪೊಟ್ನೂರಿನಮೇಲೆ ರಾಯನ ದಂಡೆತ್ತಿಬರಲು ಸನ್ನಾಹಮಾಡುತ್ತಿದ್ದ ಕಾಲ ಅದು. ಅವನು ಸಕಾಲದಲ್ಲಿಯೇ ಗಜಪತಿಯ ನೆರವಿಗೆ ಬಂದಿದ್ದನು.

ಬೋದಜಣ್ಣಮಹಾಪಾತ್ರನು ಪೊಟ್ಟನೂರಿಗೆ ಬಂದ ಕೆಲವು ದಿನಗಳಲ್ಲೇ ಕೊಂಡಪಲ್ಲಿಯ ಸೆರೆಮನೆಯಿಂದ ಶಿರಶ್ಚಂದ್ರಮಹಾಪಾತ್ರನೂ ತಪ್ಪಿಸಿಕೊಂಡು ಪೊಟ್ಟನೂರಿಗೆ ಬಂದಿದ್ದನು. ಅವರು ಹಿಂದೆ ಹೇಳಿದ್ದಂತೆ, ಸ್ವತಂತ್ರ ಉತ್ಕಲದಲ್ಲಿ ಅವರು ಗೆಳೆಯರಿಗೆ ಮತ್ತೆ ಸಂಧಿಸದೆ ಇದ್ದರೂ, ಈಗ ಶತ್ರುಭೀತವಾದ ಪೊಟ್ಟನೂರಿನಲ್ಲಿ ಉತ್ಕಲಸಾಮ್ರಾಜ್ಯದ ಸಂಕ್ರಮಣ ಕಾಲದಲ್ಲಿ ಒಬ್ಬರನ್ನೊಬ್ಬರು ಸೇರಿದ್ದರು. ಉತ್ಕಲದ ರಾಜ್ಯಶ್ರೀಗೆ ಗಂಡಾಂತರ ಒದಗಿದ್ದ ವಿಷಮಸನ್ನಿವೇಶದಲ್ಲಿ ಅವರು ಉತ್ಕಲದ ಸಂರಕ್ಷಣೆಗೆ ಸಕಾಲದಲ್ಲಿ ಬಂದು ಸೇರಿದ್ದರು. ಶತ್ರು ಶಿಬಿರದಲ್ಲಿ ಗೆಳೆಯರಾಗಿದ್ದ ಇವರು, ಈಗ ಆತ್ಮೀಯ ಗೆಳೆಯರೇ ಆಗಿದ್ದರು.

ಅವರ ಈ ಗೆಳೆತನವೇ ಅವರನ್ನು ಉಳಿದ ಮಹಾಪಾತ್ರರು ಸಂಶಯ ದೃಷ್ಟಿಯಿಂದ ನೋಡಲು ಕಾರಣವಾಯಿತು.

ರಾಯನ ಸೆರೆಮನೆಯಲ್ಲಿ ಇದ್ದು, ಅನಂತರ ಕ್ಷಮೆ ಯಾಚಿಸಿ, ಹೊರಗೆಬಂದು ರಾಯನ ಸೇವೆಯಲ್ಲಿ ಕೆಲವುಕಾಲ ಇದ್ದ ಬೋದಜಣ್ಣ ಮಹಾಪಾತ್ರನಂತಹ 'ಸ್ವಾಮಿದ್ರೋಹಿ'ಯ ಆತ್ಮೀಯ ಗೆಳೆಯ ಶಿರಶ್ಚಂದ್ರ ಮಹಾಪಾತ್ರನೆಂದಮೇಲೆ ಅವರಿಬ್ಬರಮೇಲೂ ಉಳಿದ ಮಹಾಪಾತ್ರರಿಗೆ ಸಹಜವಾಗಿಯೇ ಸಂಶಯವುಂಟಾಯಿತು. ಅವರು ಯಾವಾಗಲೂ ಕೂಡಿ ಇರುತ್ತಿದ್ದುದರಿಂದ ಅವರು ಯಾವುದೋ ಸಂಚಿನಸಲುವಾಗಿ, ಕೃಷ್ಣದೇವ ರಾಯನ ಅಪ್ಪಣೆಯ ಮೇರೆಗೆ, ಇಲ್ಲಿಗೆ ಬಂದಿರುವರೆಂದು ಅವರು ಭಾವಿಸಿದರು. ಇದಕ್ಕೆ ತಕ್ಕಂತೆ, ಶಿರಶ್ಚಂದ್ರಮಹಾಪಾತ್ರ, ಬೋದಜಣ್ಣಮಹಾ ಪಾತ್ರರಿಗೆ ಆಗದವರು ಈ ಆರೋಪಗಳಿಗೆ ಬಣ್ಣ ಕಟ್ಟಿ, ಎಲ್ಲೆಲ್ಲೂ ಹಬ್ಬಿದರು. ಮೊದಲಿನಿಂದಲೂ ಶಿರಶ್ಚಂದ್ರಮಹಾಪಾತ್ರನ ಬಗ್ಗೆ ಪ್ರೀತಿ ವಿಶ್ವಾಸಗಳನ್ನು ತಳೆದಿದ್ದ ಮಹಾಪಾತ್ರರೂ ಈ ವಾರ್ತೆಯನ್ನು ನಿಜವೆಂದೇ ನಂಬಿ ಶಿರಶ್ಚಂದ್ರಮಹಾಪಾತ್ರನಿಂದ ದೂರವಾಗಿ, ಅವನನ್ನು ಶತ್ರುವಿನ ಗೂಢ ಚಾರನೆಂಬಂತೆ ನೋಡಲು ತೊಡಗಿದ್ದರು. ಇದೇ ಸಮಯದಲ್ಲಿ, ನೂತನವಾಗಿ ಮಹಾಪಾತ್ರರ ನಾಯಕನಾಗಿ ಆರಿಸಲ್ಪಟ್ಟಿದ್ದ ಬಾಲಚಂದ್ರಮಹಾ ಪಾತ್ರನು ತನ್ನ ತಂದೆಯ ಶತ್ರುವಾದ ಶಿರಶ್ಚಂದ್ರಮಹಾಪಾತ್ರನಮೇಲಿದ್ದ ಹಳೆಯ ಹಗೆತನವನ್ನು ತೀರಿಸಿಕೊಳ್ಳಲು, ತನ್ನ ನೂತನ ನಾಯಕ ಪಟ್ಟ

ವನ್ನು ಭದ್ರಪಡಿಸಿಕೊಳ್ಳಲು ಈ ಸುಸಂಧಿಯನ್ನು ಉಪಯೋಗಿಸಿಕೊಂಡು ಶಿರಶ್ಚಂದ್ರಮಹಾಪಾತ್ರ ಹಾಗೂ ಬೋದಜಣ್ಣಮಹಾಪಾತ್ರರಮೇಲೆ ಸಲ್ಲದ ರಾಜದ್ರೋಹದ ಆರೋಪಗಳನ್ನು ಹೊರಿಸಿ, ಅವರ ವಿಷಯದಲ್ಲಿ ಗಜಪತಿಯ ಮನಸ್ಸು ಕೆಡಲು ಎಷ್ಟುಬೇಕೋ ಅಷ್ಟೂ ಮಾಡಿದ್ದನು.

ಬೋದಜಣ್ಣ ಮಹಾಪಾತ್ರನೊಂದಿಗೆ ಮಾತನಾಡಿದಮೇಲೆ ಶಿರಶ್ಚಂದ್ರ ಮಹಾಪಾತ್ರನಮೇಲೆ ಬಾಲಚಂದ್ರ ಮಹಾಪಾತ್ರನ ಕಡೆಯವರು ಹೊರಸಿರುವ ಆರೋಪಗಳು ಸತ್ಯ ದೂರವೆಂದು ಗಜಪತಿಗೆ ಅನಿಸಿತು. ಈ ಆರೋಪಗಳು ಸತ್ಯವೆಂದು ಸಿದ್ಧಪಡಿಸಲು, ಸುಳ್ಳೆಂದು ಸಿದ್ಧಪಡಿಸಲು ಇಬ್ಬರಲ್ಲೂ ಸಾಕಷ್ಟು ಸಾಕ್ಷಿಸಾಮಗ್ರಿಗಳು ಇರಲಿಲ್ಲ. ಶಿರಶ್ಚಂದ್ರ ಮಹಾಪಾತ್ರನ ಹಿಂದಣ ನಡವಳಿಕೆಗಳ ಮೇಲಿಂದ ಅವನಿಂದ ಇಂತಹ ವಿದ್ರೋಹ ಕಾರ್ಯ ನಡೆಯಲು ಸಾಧ್ಯವಿಲ್ಲವೆಂದು ಗಜಪತಿಯು ಎಲ್ಲ ಆರೋಪಗಳಿಂದ ಅವನನ್ನು ನಿವೃತ್ತನನ್ನಾಗಿ ಮಾಡಿ, ಉತ್ಕಲದ ಸಕಲ ಸೈನ್ಯಗಳ ಮಹಾದಂಡನಾಯಕ ಪದವಿಯನ್ನು ಕೊಟ್ಟು ಸನ್ಮಾನಮಾಡಿದನು. ಕಳೆದ ಐವತ್ತುವರ್ಷಗಳಿಂದಲೂ ಸಾಮ್ರಾಜ್ಯಕ್ಕೆ ಉತ್ಕೃಷ್ಟವಾದ ಸೇವೆಯನ್ನು ಸಲ್ಲಿಸಿದ್ದ, ಅನೇಕ ದಂಡಯಾತ್ರೆಗಳನ್ನು ಯಶಸ್ವಿಯಾಗಿ ನಡೆಯಿಸಿದ್ದ ರಣವಿಕ್ರಮನಾಗಿದ್ದ ಶಿರಶ್ಚಂದ್ರ ಮಹಾಪಾತ್ರನಿಗೆ ಈ ಗೌರವ ಸಂದುದರಲ್ಲಿ ಆಚ್ಚರಿಯಿಲ್ಲ. ಆದರೂ ಮಹಾಪಾತ್ರರಿಗೆಲ್ಲ, ಮುಖ್ಯವಾಗಿ ಬಾಲಚಂದ್ರ ಮಹಾಪಾತ್ರನಿಗೆ, ಗಜಪತಿಯ ನಿರ್ಧಾರದಿಂದ ತುಂಬಾ ವ್ಯಥೆಯುಂಟಾಯಿತು. ತಾವು ಯಾರನ್ನು ಸಾಮ್ರಾಜ್ಯದ ಪರಮಶತ್ರುವೆಂದು ತಿಳಿದಿದ್ದೆವೋ ಅಂತಹವನನ್ನೇ ಗಜಪತಿಯು ಸಕಲ ಸೈನ್ಯಗಳ ಮಹಾದಂಡನಾಯಕನನ್ನಾಗಿ ಮಾಡಿದುದು, ಉತ್ಕಲದ ದೌರ್ಭಾಗ್ಯವೆಂದು ಅವರೆಲ್ಲರೂ ಬಹಳ ವಿಷಾದಿಸಿದರು. ಅವರು ಗಜಪತಿಯ ಈ ನಿರ್ಧಾರವನ್ನು ಬದಲಿಸಲು ಎಷ್ಟೋ ಪ್ರಯತ್ನಿಸಿದರು. ಆವರ ಪ್ರಯತ್ನ ಸಫಲಗೊಳ್ಳಲಿಲ್ಲ. ಕಡೆಗೆ ದೈವ ಮಾಡಿದುದು ಆಗಲೆಂದು—ಹತಾಶರಾಗಿ, ನಿರ್ವಾಹವಿಲ್ಲದೆ ಸುಮ್ಮನಾದರು. ಆದರೂ ಆವರ ಅಂತಃಕರಣದಲ್ಲಿ ಶಿರಶ್ಚಂದ್ರ ಮಹಾಪಾತ್ರನ ಬಗ್ಗೆ ಅವಿಶ್ವಾಸ, ದ್ವೇಷ, ತಿರಸ್ಕಾರಗಳು ಇನ್ನೂ ಹೊಗೆಯಾಡುತ್ತಲೇ ಇದ್ದವು. ಹೊರಗೆ ಕಾಣಿಸಿಕೊಳ್ಳಲು ಸೂಕ್ತಸಮಯ

ಕ್ಕಾಗಿ ಕಾಯುತ್ತಿತ್ತು. ಅಂತಹ ಸುಸಮಯ ಅನಿರೀಕ್ಷಿತವಾಗಿ ಬಂದೊದಗಿತ್ತು !

ಪೊಟ್ಟನೂರಿನ ಕೋಟೆಯಲ್ಲಿ ಬೀಡುಬಿಟ್ಟಿದ್ದ ಮಹಾಪಾತ್ರರಲ್ಲಿ ಇಷ್ಟೆಲ್ಲ ಅಂತಃಕಲಹ ವೈಮನಸ್ಸುಗಳು ನಡೆದಿರುವ ವೇಳೆಯಲ್ಲೇ ಶತ್ರುವಿನ ಚಲನವಲನಗಳನ್ನು ತಿಳಿದುಬರಲು ಹೋಗಿದ್ದ ಗೂಢಚಾರರು, ಕೃಷ್ಣ ದೇವರಾಯನು ತನ್ನ ಸೈನ್ಯಸಮೇತ ಬಂದು, ಪೊಟ್ಟನೂರಿಗೆ ಅನತಿದೂರ ದಲ್ಲಿ ಬಂದಿಳಿದಿರುವನೆಂಬ ವಾರ್ತೆಯನ್ನು ತಂದರು. ಮಹಾಪಾತ್ರರು ಶತ್ರುಧಾಳಿ ಬಂದೊದಗಿದ ಈ ಸಮಯದಲ್ಲಿ ತಮ್ಮ ಒಳಜಗಳವನ್ನು ಮರೆತು ಪೊಟ್ಟನೂರಿನ ರಕ್ಷಣೆಗೆ ಧಾವಿಸಿದರು. ಒಳಕೋಟೆಯೆಲ್ಲಾ ಸೈನ್ಯದಿಂದ ತುಂಬಿಹೋಯಿತು. ಕೋಟೆಯ ಬುರುಜುಗಳಮೇಲೆ ಬಲವಾದ ಕಾವಲು ಏರ್ಪಟ್ಟಿತು. ಕೋಟೆಯ ಬಾಗಿಲನ್ನು ಭದ್ರಪಡಿಸಿ, ಅಗಳಿಗೆ ನೀರು ತುಂಬಿಸಿ, ಶತ್ರುಗಳ ಮುತ್ತಿಗೆಯನ್ನೇ ಕಾಯುತ್ತ ಕುಳಿತರು.

ಒಂದು ದಿನವಾಯಿತು........ ಮೂರುದಿನವಾಯಿತು........ ಒಂದು ವಾರವೂ ಆಯಿತು...........ಕಡೆಗೆ ಒಂದು ತಿಂಗಳೂ ಆಯಿತು........ ಶತ್ರುಗಳು ಪೊಟ್ಟನೂರಿನಮೇಲೆ ಧಾಳಿ ಇಡುವ ಸೂಚನೆಯೇ ಕಾಣಲಿಲ್ಲ. ಈ ಸಂಗತಿ ಎಲ್ಲರಿಗೂ ಆಶ್ಚರ್ಯವನ್ನು ಉಂಟುಮಾಡಿತು. ಇಂದು ಧಾಳಿ ನಡೆಯಬಹುದು, ನಾಳೆ ಧಾಳಿ ನಡೆಯಬಹುದು ಎಂದು ಅವರು ಒಂದು ತಿಂಗಳಕಾಲ ಕಾದುನೋಡಿ, ಬೇಸತ್ತರು. ಶತ್ರುವಿನ ಧಾಳಿ ಮಾತ್ರ ನಡೆಯಲಿಲ್ಲ. ಶತ್ರುಗಳು ಪೊಟ್ಟನೂರಿನ ಬಳಿ ಬೀಡುಬಿಟ್ಟಿದ್ದರೂ ಏಕೆ ಇನ್ನು ಮುತ್ತಿಗೆಯನ್ನು ಆರಂಭಿಸಲಿಲ್ಲ ಎಂಬುದು ಯಾರೂ ಭೇದಿಸಲಾರದೆ ಹೋದರು. ಅವರಿಗೆ ನಿರಾಶೆಗಿಂತಲೂ ನಿರೀಕ್ಷೆ ಹೆಚ್ಚು ಆತಂಕವನ್ನು ಉಂಟುಮಾಡಿತು. ಕಡೆಗೆ ಶತ್ರುಧಾಳಿಯನ್ನೇ ನಿರೀಕ್ಷಿಸಿ ನಿರಾಶೆಗೊಂಡ ಗಜಪತಿ, ಶತ್ರುಗಳು ಧಾಳಿ ಆರಂಭಿಸಲು ಏಕೆ ಹಿಂದುಮುಂದೆ ತುಳಿಯುತ್ತಿದ್ದಾರೆಂಬುದನ್ನು ತಿಳಿದುಬರಲು ಸಮರ್ಥರಾದ ಗೂಢಚಾರರನ್ನು ಕಳುಹಿಸಿಕೊಟ್ಟರು.

ಅವರು ಶತ್ರು ಶಿಬಿರದಲ್ಲಿ ವೇಷಾಂತರದಿಂದ ಪ್ರವೇಶದೊರಕಿಸಿ ಕೊಂಡು ಅನೇಕ ಮಹತ್ವದ ಸಂಗತಿಗಳನ್ನು ಸಂಗ್ರಹಿಸಿಕೊಂಡು ಬಂದರು.

ಅವರು ತಂದ ವಾರ್ತೆಯನ್ನು ಕೇಳಿ ಗಜತಿಗೆ ಗಾಬರಿಯುಂಟಾಯಿತು. ಅವರು ತಂದಿದ್ದ ವಾರ್ತೆಯಮೇರೆಗೆ ಕೃಷ್ಣದೇವರಾಯನು ಯುದ್ಧವಿಲ್ಲದೆ, ಯಾವುದೋ ತಂತ್ರದಮೂಲಕ ಪೊಟ್ಟನೂರನ್ನು ವಶಪಡಿಸಿಕೊಳ್ಳಲು ನಿರ್ಧರಿಸಿರುವನೆಂದು ತಿಳಿಯಿತು. ಕೃಷ್ಣದೇವರಾಯನು ಆಲೋಚಿಸಿದ್ದ ತಂತ್ರವೇನೆಂಬುದು ಮಾತ್ರ ಗಜಪತಿಗೆ ತಿಳಿಯದಾಯಿತು. ಆ ಬಗ್ಗೆ ಹೆಚ್ಚಿನ ತನಿಖೆ ನಡೆಸಿದ ಮೇಲೆ ಬಂದ ಸುದ್ದಿ ಹೊರಬಿತ್ತು. ಕೃಷ್ಣದೇವ ರಾಯನು ಗಜಪತಿಯ ಸೈನ್ಯದಲ್ಲಿರುವ ಪ್ರಮುಖ ದಂಡನಾಯಕನೊಬ್ಬ ನೊಡನೆ ಸಂಚುಮಾಡಿರುವನೆಂದೂ, ಆವನು ಸಮಯಸಾಧಿಸಿ ಯುದ್ಧ ವಿಲ್ಲದೆ ಪೊಟ್ಟನೂರನ್ನು ರಾಯನಿಗೆ ವಶಪಡಿಸುವನೆಂದೂ ತಿಳಿಯಿತು. ಕೃಷ್ಣದೇವರಾಯನು ಗಜಪತಿಯ ಸೈನ್ಯದ ಯಾವ ದಂಡನಾಯಕನ ಜತೆಯಲ್ಲಿ ಪಿತೂರಿಮಾಡುತ್ತಿರುವನೆಂಬುದು ಮಾತ್ರ ಯಾರಿಗೂ ತಿಳಿಯ ದಾಗಿತ್ತು.

ಗಜತಿಯಂತೂ ಈ ಸುದ್ದಿ ಕೇಳಿ ತನ್ನ ಉಪ್ಪುತಿಂದೂ ತನಗೆ ದ್ರೋಹಬಗೆಯುವ ಆ ದ್ರೋಹಿಯಾರೆಂದು ಹಲ್ಲುಕಡಿದ. ಮರುಕ್ಷಣ ದಲ್ಲಿ ದೂತರು ತಂದ ಈ ವದಂತಿಗಳನ್ನು ನಂಬುವುದಾದರೂ ಎಂತು ? ಇದು ತನ್ನನ್ನು ಮೋಸಪಡಿಸಲು ರಾಯನು ಹರಡಿದ ಸುಳ್ಳು ಸುದ್ದಿ ಯಾಕೆ ಆಗಿರಬಾರದು ? ಎನ್ನುವ ಸಂಶಯವೂ ಬಂದಿತು. ಈ ಸುದ್ದಿ ಕೇವಲ ಗಾಳಿಗೋಪುರವಾಗಿರಲಾರದು. ಇಂತಹ ಸುದ್ದಿಗಳು ಹರಡಲು ಇದಕ್ಕೆ ಮೂಲದಲ್ಲಿ ಯಾವುದೋ ಸತ್ಯಸಂಗತಿ ಇರಬೇಕು ಎಂದು ಆಲೋಚಿಸಿ, ಈ ಸುದ್ದಿಗಳು ಯಥಾರ್ಥ ಸ್ವರೂಪವನ್ನು ತಿಳಿದು ಬರಲು, ತನ್ನ ನಂಬುಗೆಯ ಮಹಾ ಪಾತ್ರರಲ್ಲಿ ಒಬ್ಬನಾಗಿದ್ದ, ಬಾಲಚಂದ್ರ ಮಹಾಪಾತ್ರ ನನ್ನು ಕಳುಸಿಕೊಟ್ಟನು. ಆದರೂ ಗಜಪತಿಗೆ ಮನಸ್ಸಮಾದನ ವಿಲ್ಲವಾ ಯಿತು. ಈಬಗೆಯ ಸುಳ್ಳು ಸುದ್ದಿಗಳು ಅಕಾರಣವಾಗಿ ಎಂದಿಗೂ ಹುಟ್ಟು ವುದಿಲ್ಲ. ಇದರಲ್ಲಿ ಯಾವುದೋ ಮಹತ್ವದ ಸಂಗತಿ ಅಡಗಿದೆ. ಇಲ್ಲದೇ ಇದ್ದರೆ ಕೃಷ್ಣದೇವರಾಯನು ಏಕೆ ತನ್ನ ದಂಡಿನೊಡನೆ ಬಂದು ಪೊಟ್ಟ ನೂರಿನ ಬಳಿ ಬೀಡುಬಿಟ್ಟಿರುವನು, ಒಂದು ತಿಂಗಳಾಗಿದ್ದರೂ ಮುತ್ತಿಗೆ ಹಾಕದೆ, ಯುದ್ಧ ಹೂಡದೆ ಇದ್ದಾನೆ? ರಾಯನ ಈ ವರ್ತನೆಗೆ ಏನು

ಆಲೋಚನೆ ಮಾಡಿದರೂ ಸೂಕ್ತವಾದ, ಸಮಾಧಾನಕರವಾದ ಉತ್ತರ ದೊರೆತಿರಲಿಲ್ಲ. ಅಂತಲೇ ಗಜಪತಿಯ ಮನಸ್ಸು ಈ ವಿಷಯದಲ್ಲಿ ವ್ಯಗ್ರವಾಗಿತ್ತು. ಬಹುಶಃ ಈ ಒಳಸಂಚಿನ ವದಂತಿ ವಿಶ್ವಾಸನೀಯವಾದ ಕಡೆಯಿಂದ ಬಂದಿದ್ದರೆ. ಅದರಲ್ಲಿ ಸತ್ಯಾಂಶವಿರಬೇಕು! ಇದು ಸತ್ಯಾಂಶವಾಗಿದ್ದರೆ ರಾಯನೊಡನೆ ಪಿತೂರಿ ನಡೆಸುವಂತಹ ಕೃತಘ್ನ ದಂಡನಾಯಕನು ತನ್ನ ಸೈನ್ಯದಲ್ಲಿ ಯಾರು?........

ಗಜಪತಿಯ ಮನಸ್ಸು ಅನೇಕರಮೇಲೆ ಹರಿದಾಡಿತು. ಯಾರ ಬಗೆಗೂ ಸಂಶಯವುಂಟಾಗಲಿಲ್ಲ. ಆದರೆ ಮಹಾ ದಂಡನಾಯಕನಾಗಿ ನೇಮಿತವಾಗಿದ್ದ ಶಿರಶ್ಚಂದ್ರಮಹಾಪಾತ್ರ ಮತ್ತು ಬೋದಜಣ್ಣಮಹಾಪಾತ್ರರನ್ನು ನೆನೆದಾಗ ಏಕೋ ಅವರ ಹೆಸರಿನೊಂದಿಗೆ ಒಂದುಬಗೆಯ ಸಂಶಯದ ವಾಸನೆ ಅಂಟಿತು. ಬಹುಶಃ ಹಿಂದೆ ಉಂಟಾಗಿದ್ದ ಆರೋಪಗಳನ್ನು ನೆನೆದು ಏನೋ........ಅಂತೂ ಗಜಪತಿಯ ಸಂಶಯದ ದೃಷ್ಟಿಪಥಕ್ಕೆ ಅವರಿಬ್ಬರು ಬಿದ್ದಿದ್ದರು. ಅವರು ಕೃಷ್ಣದೇವರಾಯನ ಸೆರೆಮನೆಯಲ್ಲಿ ಇದ್ದರೆಂಬ ಅಂಶ ಅವನ ಸಂಶಯವನ್ನು ದೃಢಪಡಿಸಿತ್ತು. ಅಂತಲೇ ಅವರ ಬಗ್ಗೆ ಹೆಚ್ಚಿನ ಆಸ್ಥೆಯುಂಟಾಗಿ, ಅವರ ಚಲನವಲನಗಳನ್ನು ತಿಳಿದು ವರದಿಮಾಡಲು ತನ್ನ ಅಂತರಂಗಕ್ಕೆ ಪಾತ್ರರಾದ ಕೆಲವು ಗೂಢಚಾರರನ್ನು ನೇಮಿಸಿದ್ದನು. ಇಷ್ಟಾದರೂ ಶತ್ರುಗಳೊಂದಿಗೆ ಪಿತೂರಿ ನಡೆಸುತ್ತಿರುವ ವಿಶ್ವಾಸಘಾತುಕ—ದೇಶದ್ರೋಹಿಯರೆಂದು ಖಚಿತವಾಗಿ ತಿಳಿಯದೆ ಹೋಗಿತ್ತು!

ಇತ್ತ ಶತ್ರು ಶಿಬಿರಕ್ಕೆ ಈ ವದಂತಿಯ ಸತ್ಯಾಸತ್ಯತೆಗಳನ್ನು ತಿಳಿದು ಬರಲು ಹೋಗಿದ್ದ ಬಾಲಚಂದ್ರಮಹಾಪಾತ್ರನು ತನ್ನ ಕಾರ್ಯದಲ್ಲಿ ಕೃತಕೃತ್ಯನಾಗಿ ಹಿಂತಿರುಗಿ ಬಂದಿದ್ದನು ಅವನು ಶತ್ರು ಶಿಬಿರದಿಂದ ಅತ್ಯಂತ ಮಹತ್ವಪೂರಿತವಾದ ಸುದ್ದಿಯನ್ನು, ಪಿತೂರಿಗೆ ಸಂಬಧಿಸಿದ ಅನೇಕ ವಿವರಗಳನ್ನು, ಮಾಹಿತಿಗಳನ್ನೂ—ಸಂಗ್ರಹಿಸಿಕೊಂಡು ಬಂದಿದ್ದ ಅವನು ಇದಕ್ಕಾಗಿ ಹೆಚ್ಚು ಕಷ್ಟಪಡಬೇಕಾಗಲಿಲ್ಲ ದೈವವೇ ಅವನಿಗೆ ನೆರವಾಗಿತ್ತು. ಅಂತಲೇ ರಾಯನು ಪಿತೂರಿಗಾರರಿಗೆ ಬರೆದಿದ್ದ ಮಹತ್ವದ ಕಾಗದಪತ್ರ

ಗಳೂ, ಅವನು ಕಳುಹಿಸಿಕೊಟ್ಟಿದ್ದ ಅಮೂಲ್ಯವಾದ ಒಡವೆವಸ್ತುಗಳೂ, ಬಾಲಚಂದ್ರಮುಹಾಪಾತ್ರನ ಕೈಗೆ ಸಿಕ್ಕಿಬಿದ್ದಿದ್ದವು !

ಬಾಲಚಂದ್ರ ಮುಹಾಪಾತ್ರನು ಗಜಪತಿಯ ಆಜ್ಞೆಯಂತೆ ಮಿತ್ರ ಸಂಗಡಿಗರೊಡನೆ, ಶತ್ರುಗಳ ಪಾಳಯದ ಕಡೆ ಬರುತ್ತಿರುವಾಗ ಮಾರ್ಗ ಮಧ್ಯದಲ್ಲಿ, ಒಂದು ಹಗಲ ವೇಷಧಾರಿಗಳ ತಂಡವು ಎದುರಿಗೆ ಬಂದಿತು. ಆ ತಂಡದಲ್ಲಿ ಹತ್ತು ಹದಿಮೂರು ಮಂದಿ ಇದ್ದರು. ಅವರುಗಳಲ್ಲಿ ಒಂದೊಂದು ಗಂಟುಗಳನ್ನು ತಲೆಯಮೇಲೆ ಹೊತ್ತು ನಡೆದಿದ್ದರು. ಅವರು ಹಗಲು ವೇಷದ ನಟರಂತೆ ಕಾಣುತ್ತಿದ್ದು, ಅವರಗಂಟುಗಳು ಅವರ ವೃತ್ತಿಗೆ ಸಂಬಂಧಿಸಿದಂತೆ ಇತ್ತು. ಅವರ ಉಡುಗೆ ತೊಡಿಗೆಗಳಿಂದ ಹೇಳುವುದಾದರೆ ಅವರು ಹಗಲು ವೇಷದವರೇ ಸರಿ ! ಆದರೆ ಒಂದೇ ಒಂದು ಸಂಶಯದ ಸಂಗತಿ ಎಂದರೆ, ಆ ತಂಡದಲ್ಲಿ ಇದ್ದವರೆಲ್ಲರೂ ಬಲಶಾಲಿಯಾದ ಯುವಕರೇ ! ಒಬ್ಬ ಹಣ್ಣುಮುಗಳನ್ನು ಬಿಟ್ಟರೆ ಉಳಿದ ವರೆಲ್ಲ ನಡುಪ್ರಾಯದ ಯುವಕರೇ ಆಗಿದ್ದರು. ಅಂತಲೇ ಅವರ ಬಗ್ಗೆ ಬಾಲಚಂದ್ರ ಮುಹಾಪಾತ್ರನ ಕುತೂಹಲ ಕೆರಳಿ, ಆ ತಂಡದ, ಯಜಮಾನ ನಂತೆ ಕಾಣುತ್ತಿದ್ದ ಒಬ್ಬ ಮುದುಕನನ್ನು ಸಹಜವಾಗಿ ಮಾತನಾಡಿಸಿದ ತಮ್ಮನ್ನು ದಾರಿಹೋಕರೆಂದು ತಿಳಿದು ಸುಮ್ಮನಾಗದೆ, ತಮ್ಮ ಬಗ್ಗೆ ಕುತೂಹಲ ವ್ಯಕ್ತಪಡಿಸದ ಬಾಲಚಂದ್ರ ಮುಹಾ ಪಾತ್ರನ ಮುಖವನ್ನು ನೋಡುತ್ತಲೇ ಆ ತಂಡದ ಯಜಮಾನನ ಮುಖ ಬಿಳಿಚಿಕೊಂಡಿತು. ಮಾತನಾಡಿಸಿದಾಗ ಅವನು ಗಾಬರಿಗೊಂಡಧ್ವನಿಯಲ್ಲಿ ತೊದಲುತ್ತ ಉತ್ತರ ಕೊಟ್ಟ. ಅವನ ವರ್ತನೆಯಿಂದ ಬಾಲಚಂದ್ರ ಮುಹಾಪಾತ್ರನಿಗೆ ಒಂದು ಬಗೆಯ ಸಂಶಯಉಂಟಾಯಿತು. ಅದನ್ನು ವೃದ್ಧಿಪಡಿಸಲೆಂಬಂತೆ ಅವರು ಶತ್ರು ಶಿಬಿರದಕಡೆ ಬರುತ್ತಿದ್ದರು. ಕೂಡಲೇ ಅವರನ್ನು ಅಲ್ಲೇ ನಿಲ್ಲಲು ಹೇಳಿ ಅವರ ಗಂಟುಗಳನ್ನು ವಶಪಡಿಸಿಕೊಂಡು ಅವುಗಳನ್ನು ಶೋಧಿಸಲು ತನ್ನ ಸಂಗಡಿಗರಿಗೆ ಆಜ್ಞೆಮಾಡಿದ. ಅವರು ಮಾಡಿದ ಪ್ರತಿಭಟನೆಯನ್ನು ಲೆಕ್ಕಿಸದೆ, ಅವರ ಗಂಟುಗಳನ್ನು ಶೋಧಿಸಿದಾಗ ಆ ಹಗಲು ವೇಷಧಾರಿಗಳ ನಿಜಸ್ವರೂಪ ಬಯಲಾಯಿತು. ಅವರು ಬೇರಾರೂ ಅಲ್ಲದೆ ಕೃಷ್ಣದೇವ ರಾಯನ ಸೈನಿಕರೇ ಆಗಿದ್ದರು. ಅವರು ತಂದಿದ್ದ ಗಂಟುಗಳಲ್ಲಿ ಒಂದೊಂದು

ಹೆಡಿಗೆ, ಅದರಲ್ಲಿ ಒಂದರಲ್ಲಿ ಚಿನ್ನದ ನಾಣ್ಯಗಳು, ಮತ್ತೊಂದರಲ್ಲಿ ಮುತ್ತು ರತ್ನ ಹೀಗೆ ಹತ್ತು ಹೆಡಿಗೆಗಳ ತುಂಬ, ತುಂಬಾ ಬೆಲೆಬಾಳುವ ರತ್ನಾಭರಣಗಳೂ, ವಡವೆವಸ್ತುಗಳೂ ಇದ್ದವು. ಆ ಎಲ್ಲ ಹೆಡಗೆಗಳಿಗೆ ಕಸೂತಿ ಕೆಲಸಮಾಡಿದ್ದ ರೇಶ್ಮೆಯ ಬಟ್ಟೆಯನ್ನು ಹೊದಿಸಲಾಗಿತ್ತು. ಅವುಗಳನ್ನು ಕೃಷ್ಣದೇವರಾಯನು ಪೊಟ್ಟನೂರಿನಲ್ಲಿ ಇದ್ದ ದಂಡನಾಯಕನಿಗೆ, ತನ್ನೊಡನೆ ಸಂಚಿನಲ್ಲಿ ಸಹಕರಿಸಿದ್ದಕ್ಕೆ ಪ್ರತಿಫಲವಾಗಿ ಈಹೆಡಿಗೆಗಳನ್ನು ಕಾಣಿಕೆಯಾಗಿ ಕಳುಹಿಸಿದ್ದನು. ಆ ತಂಡದ ಮುಖಂಡನನ್ನು ಶೋಧಿಸಿದಾಗ ಅವನ ಬಳಿ ಇದ್ದ ಸುವರ್ಣ ಸಂಪುಟದಲ್ಲಿ ಒಂದು ಕಾಗದ ಸಿಕ್ಕಿತು. ಅದು ಪೊಟ್ಟನೂರಿನಲ್ಲಿದ್ದ, ಪಿತೂರಿಗಾರನಿಗೆ ಕೃಷ್ಣದೇವರಾಯನೇ ಸ್ವಹಸ್ತಾಕ್ಷರಗಳಲ್ಲಿ ಬರೆದಿದ್ದ ಒಂದು ಅಭಿನಂದನಾಪತ್ರ! ಆ ಪತ್ರ ಅನೇಕ ಮಹತ್ತರ ಸಂಗತಿಗಳನ್ನು ಹೊರಗೆಡಹಿತ್ತು.

ಬಾಲಚಂದ್ರ ಮಹಾಪಾತ್ರನು ಆ ಗೂಢಚಾರರ ತಂಡವನ್ನು ಕೈಸೆರೆ ಹಿಡಿದು, ಅವರು ತಂದಿದ್ದ ಹೆಡಿಗೆಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡು ಕೂಡಲೇ ಪೊಟ್ಟನೂರಿಗೆ ಹೊರಟುಬಂದನು. ಬಂದವನೇ, ಒಂದು ನಿಮಿಷ ಕಾಲ ವ್ಯರ್ಥಮಾಡದೆ ಗಜಪತಿಯ ಬಳಿಗೆ ಹೋಗಿ ತಾನು ಸಂಗ್ರಹಿಸಿಕೊಂಡು ತಂದಿದ್ದ ಸುದ್ದಿಯನ್ನೆಲ್ಲಾ ವಿವರವಾಗಿ ವರದಿಮಾಡಿದನು. ಗಜಪತಿಯು ಬಾಲಚಂದ್ರ ಮಹಾಪಾತ್ರನು ತಂದುಕೊಟ್ಟ ಪತ್ರವನ್ನು ಓದಿಕೊಂಡು "ಎಲಾ ದ್ರೋಹಿ! ನಿನಗೆ ಅನ್ನವಿಟ್ಟುದು ಹಾವಿಗೆ ಹಾಲೆರೆದಂತೆ ಆಯಿತು!" ಎಂದು ಉದ್ಗಾರ ತೆಗೆದನು.

## ೧೪

ಪ್ರತಾಪರುದ್ರ ಗಜಪತಿಯು ಮತ್ತೊಮ್ಮೆ ಆ ಪತ್ರವನ್ನು ಓದಿಕೊಂಡನು. ಆ ಪತ್ರ ಹೀಗಿತ್ತು.

ಉತ್ಕಲದ ಮಹಾ ಸಾಮಂತ ಪ್ರಹರ ಸೇನ ಶಿರಶ್ಚಂದ್ರಮಹಾಪಾತ್ರರ ಸಮಕ್ಷಮಕ್ಕೆ ವಿದ್ಯಾನಗರದ ಸಾಮ್ರಾಟ ಕೃಷ್ಣದೇವರಾಯನು ಮಾಡುವ ಅನೇಕ ವಂದನೆಗಳು.

ಈಗ ಬರೆಯುವುದೇನೆಂದರೆ, ನಿಮ್ಮ ಪತ್ರ ಕರಗತವಾಗಿ ಸಕಲವೂ ವಿದಿತವಾಯಿತು. ನಿಮ್ಮೆಲ್ಲ ವಿಷಯಗಳು ನಮ್ಮ ನಿರೀಕ್ಷೆಯಂತೆ, ಸುಗಮವಾಗಿ ನಡೆದಿದೆಯೆಂದು ಕೇಳಿ ತುಂಬಾ ಸಂತೋಷವಾಯಿತು. ನಮ್ಮ ಸೇವೆಯಲ್ಲಿದ್ದ ನಿಮ್ಮನ್ನೂ ಹಾಗೂ ಬೋದಜಣ್ಣಮಹಾಪಾತ್ರರನ್ನೂ ಗಜಪತಿಯು ಶತ್ರುಗಳ ಕಡೆಯವರೆಂದು ಸಂಶಯ ವ್ಯಕ್ತಪಡಿಸದೆ, ಮೊದಲಿನ ವಿಶ್ವಾಸದಿಂದಲೇ ಬರಮಾಡಿಕೊಂಡು ಜವಾಬ್ದಾರಿಯುತವಾದ ಹುದ್ದೆಗಳನ್ನು ಕೊಡುವಂತೆ ಮಾಡಿದ ನಿಮ್ಮ ಜಾಣ್ಮೆಗೆ ತಲೆದೂಗಲೇಬೇಕು. ನಿಮ್ಮ ಚಾಣಾಕ್ಷತೆಗೆ ಎಷ್ಟು ಹೊಗಳಿದರೂ ಸಾಲದು! ನೀವು ಎಂತಹ ದಕ್ಷರಾದ ರಾಜತಂತ್ರ ನಿಪುಣರೆಂದು ನಾವು ಕೊಂಡಪಲ್ಲಿಯ ಮುತ್ತಿಗೆಯಲ್ಲೇ ಅರಿತುಕೊಂಡೆವು. ನಿಮ್ಮಂತಹವರ ಸೇವೆ ನಮಗೆ ದೊರೆತಿರುವುದಕ್ಕೆ ನಾವು ನಿಜವಾಗಿಯೂ ಭಾಗ್ಯಶಾಲಿಗಳು. ಈಗ ನೀವು ವಹಿಸಿಕೊಂಡಿರುವ ಜವಾಬ್ದಾರಿ ತುಂಬಾ ಗುರುತರವಾದುದು. ಇದರಲ್ಲಿ ಕೊಂಚ ಎಚ್ಚರ ತಪ್ಪಿದರೂ ಪ್ರಾಣಕ್ಕೆ ಅಪಾಯ ತರುವ ಸೂಕ್ಷ್ಮವೂ, ಗಹನವೂ

ಆದ ರಾಜಕಾರಣ ಅಡಗಿದೆ. ಇದರಲ್ಲಿ ನೀವಲ್ಲದೆ ಮತ್ತೆ ಯಾರಿಂದಲೂ ಯಶಸ್ಸು ದೊರಕಿಸಿಕೊಳ್ಳುವುದು ದುಸ್ಸಾಧ್ಯ! ಅಂತಲೇ ನಿಮ್ಮನ್ನು ಪೊಟ್ಟನೂರಿಗೆ ಕಳುಹಿಸಿಕೊಟ್ಟುದು. ನೀವು ಪೊಟ್ಟನೂರಿಗೆ ಬಂದ ಅತ್ಯಲ್ಪಕಾಲದಲ್ಲಿ ಸಾಧಿಸಿರುವ ಪ್ರಗತಿಯನ್ನು ನೋಡಿದರೆ, ನಮಗೆ ನಮ್ಮ ಸಂಚು ಫಲಕಾರಿಯಾಗುವುದೆಂಬ ನಂಬಿಕೆ, ಧೈರ್ಯ ಬರುತ್ತಿದೆ. ಅಂತೂ ನೀವು ಆ ಅರುಳು ಮರುಳು ಗಜಪತಿಯನ್ನು ಸರಿಯಾಗಿಯೇ ಮರುಳುಮಾಡಿದ್ದೀರಿ! ಇಲ್ಲದೆ ಇದ್ದರೆ ಇತರ ಮಹಾಪಾತ್ರರ ವಿರೋಧವನ್ನು ಲಕ್ಷಿಸದೆ ನಿಮ್ಮನ್ನು ಸಕಲ ಸೈನ್ಯಗಳ ಮಹಾದಂಡನಾಯಕರನ್ನಾಗಿ ಮಾಡುತ್ತಿದ್ದನೆ? ಈಗ ನೀವು ಹೆಚ್ಚು ಎಚ್ಚರದಿಂದ ಇರಬೇಕಾಗಿದೆ. ನಿಮ್ಮ ಬಗ್ಗೆ ಗಜಪತಿಗೆ ಕೊಂಚ ಸಂಶಯವುಂಟಾದರೂ ನಮ್ಮ ಕಾರ್ಯ ನಿಫಲವಾಗುತ್ತದೆ. ನೀವು ಅದಷ್ಟು ಜಾಗರೂಕರಾಗಿದ್ದು ನಮ್ಮ ಕೆಲಸವನ್ನು ಸುಸೂತ್ರವಾಗಿ ಸಾಧಿಸಿಕೊಡುವಿರೆಂದು ನಾವು ನಂಬಿದ್ದೇವೆ.

ಈ ಪತ್ರವಾಹಕನೊಂದಿಗೆ ನಿಮಗೆ ಕೊಟ್ಟಿದ್ದ ವಚನದಂತೆ, ಹತ್ತು ಹೆಡಿಗೆಗಳ ತುಂಬಾ ಬೆಲೆಬಾಳುವ ರತ್ನಾಭರಣಗಳನ್ನು ಕಳುಹಿಸಿದ್ದೇನೆ. ನಿಮಗೆ ನಾವು ಮಾಡಿರುವ ಸನ್ಮಾನಕ್ಕೆ ಇದೇ ಕಡೆಯಲ್ಲಿ ನೀವು ಆಶ್ವಾಸನ ಕೊಟ್ಟಿರುವಂತೆ, ಇತರ ಮಹಾಪಾತ್ರರೆಲ್ಲರನ್ನೂ ನಮ್ಮ ಪಕ್ಷಕ್ಕೆ ಸೇರುವಂತೆ ಮಾಡಿದರೆ, ಇದಕ್ಕೂ ಇಮ್ಮಡಿಯಾದ ಬಹುಮಾನ ನಿಮಗೆ ದೊರೆಯುವುದು. ನಿಮ್ಮ ಪತ್ರ ನೋಡಿಕೊಂಡು, ಉಳಿದ ಮಹಾಪಾತ್ರರಿಗೆ, ಬೇರೆಬೇರೆಯಾಗಿ, ಹಣವನ್ನೂ, ಪತ್ರವನ್ನೂ ಬರೆಯಲಾಗುವುದು. ನೀವು ನಿಮ್ಮ ಅಧಿಕಾರದ ವರ್ಚಸ್ಸನ್ನು ಉಪಯೋಗಿಸಿಕೊಂಡು ಈ ವೇಳೆಗಾಗಲೇ ಮಹಾಪಾತ್ರರನ್ನೆಲ್ಲಾ ನಿಮ್ಮ ಬುಟ್ಟಿಗೆ ಹಾಕಿಕೊಂಡಿರುವಿರೆಂದು ನಾವು ನಂಬಿದ್ದೇವೆ. ನಿಮ್ಮ ಪತ್ರವನ್ನು ನೋಡಿಕೊಂಡು ನಾವು ಮುತ್ತಿಗೆಯನ್ನು ಹಾಕಬೇಕೆಂದಿದ್ದೇವೆ. ನೀವು ಕೂಡಲೇ ಕಾಗದ ಬರೆದು ನಿಮ್ಮ ಸಿದ್ಧತೆಗಳಬಗ್ಗೆ ತಿಳಿಸಬೇಕು. ನೀವು ಗಜಪತಿಯನ್ನೂ, ಜಗನ್ಮೋಹಿನಿಯನ್ನೂ ಕೈಸೆರೆ ಹಿಡಿದುಕೊಟ್ಟರೂ ಸರಿಯೇ. ಅವರನ್ನು ಸುಲಭವಾಗಿ ಕೈಸೆರೆ ಹಿಡಿಯಲು ಅನುಕೂಲ ಮಾಡಿಕೊಟ್ಟರೂ ಸರಿಯೇ. ಅಂತೂ ಪೊಟ್ಟನೂರು ಯುದ್ಧವಿಲ್ಲದೆ ನಮ್ಮ ಕೈ ಸೇರಬೇಕು, ಗಜಪತಿ ಹಾಗೂ

ಜಗನ್ಮೋಹಿನಿಯರು ನಮ್ಮ ಸೆರೆ ಸಿಕ್ಕಬೇಕು. ಇಷ್ಟಾದರೆ ನಮ್ಮ ಇಚ್ಛೆ ಪೂರ್ತೈಸಿದಂತೆ. ನೀವೂ ಹಾಗೂ ಇತರ ಮಹಾಪಾತ್ರರ ನೆರವಿನಿಂದ ಸಾಧಿಸಬೇಕಾಗಿರುವ ಮಹತ್ಕಾರ್ಯ ಇದು. ಇದರಲ್ಲಿ ಪಂಪಾಪತಿಯು ನಿಮಗೆ ಸಂಪೂರ್ಣ ಯಶಸ್ಸನ್ನು ದೊರಕಿಸಿಕೊಡಲೆಂದು ಪ್ರಾರ್ಥಿಸುತ್ತೇನೆ.

ಇಂತು ನಿಮ್ಮ ಪರಮಮಿತ್ರ,
ಕೃಷ್ಣದೇವರಾಯ.

"ಎಲಾ ದ್ರೋಹಿ! ನೀಚ ಶಿರಶ್ಚಂದ್ರಸೇನ! ನೀನು ಇಂತಹ ವಿಷಜಂತುವೆಂದು ನಾನು ತಿಳಿದಿರಲಿಲ್ಲ. ನಿನ್ನಂತಹ ವಿಶ್ವಾಸ ಘಾತುಕ ನನ್ನು, ಉಂಡಮನೆಗೆ ಎರಡು ಬಗೆಯುವ ದ್ರೋಹಿಯನ್ನು ನಾನು ಸ್ನೇಹಿತನೆಂದೇ ನಂಬಿದ್ದೆನಲ್ಲಾ ನಿನ್ನನ್ನು ನಂಬಿ ನಾನು ಕೆಟ್ಟೆ. ನಿನ್ನ ಘಾತುಕತನಕ್ಕೆ ನಿನಗೆ ಯಾವ ಶಿಕ್ಷೆ ವಿಧಿಸಬೇಕುಗೊತ್ತೆ?" ಎಂದು ತನ್ನಲ್ಲೇ ಉದ್ಗಾರತೆಗೆದ ಗಜಪತಿ.

"ಮರಣ ದಂಡನೆ" ಅಲ್ಲೇ ನಿಂತಿದ್ದ ಬಾಲಚಂದ್ರ ಮಹಾ ಪಾತ್ರನು ಪಕ್ಕನೆ ಹೇಳಿದ.

ಈ ನೀಚನಿಗೆ ಮರಣದಂಡನೆ—ಅಷ್ಟೇ ಸಾಲದು ಅವನನ್ನು ಕತ್ತೆಯ ಮೇಲೆ ಕೂಡಿಸಿ, ಊರಿನಲ್ಲೆಲ್ಲಾ ಮೆರವಣಿಗೆ ಮಾಡಬೇಕು. ತನ್ನ ನೀಚತನಕ್ಕಾಗಿ ಪಶ್ಚಾತ್ತಾಪ ಪಡುವಂತೆ ಆ ದ್ರೋಹಿಯನ್ನು ಚಿತ್ರಹಿಂಸೆ ಕೊಟ್ಟು ಕೊಲ್ಲಿಸಬೇಕು. ಇತರ ವಿದ್ರೋಹಿಗಳಿಗೆ ಭಯೋತ್ಪಾದಕವಾಗು ವಂತೆ, ಅವನ ಚರ್ಮವನ್ನು ಸುಲಿದು, ಅವನ ಮಾಂಸವನ್ನು ನಾಯಿ ನರಿಗಳ ಪಾಲುಮಾಡಬೇಕು! ಎಂದು ಕೋಪದಿಂದ ಹುಚ್ಚನಂತೆ ಕೂಗಿದ ಗಜಪತಿ, ತಾನು ಯಾರನ್ನು ನಂಬಿದ್ದೆನೋ, ಯಾರನ್ನು ಸ್ವಾಮಿನಿಷ್ಠ ಸೇವಕನೆಂದು ಸನ್ಮಾನಮಾಡಿ ಗೌರವಿಸಿದ್ದೇನೋ ಅಂತಹ ಮಹಾ ದಂಡನಾಯಕ ಶಿರಶ್ಚಂದ್ರ ಮಹಾಪಾತ್ರನೇ ತನ್ನನ್ನು ಶತ್ರುಗಳಿಗೆ ಕೈಸೆರೆ ಹಿಡಿದು ಒಪ್ಪಿಸಲು ಸಂಚುಮಾಡುವನೆಂದು ತಿಳಿದಿರಲಿಲ್ಲ, ಗಜಪತಿ. ತಾನು ಯಾರನ್ನು ಸ್ನೇಹಿತನೆಂದೂ, ಪಿತೃಸ್ಥಾನದಲ್ಲಿ ಇರುವವನೆಂದೂ ಬಗೆದು, ಪ್ರೀತಿವಿಶ್ವಾಸಗಳಿಂದ ನಡೆಸಿಕೊಂಡೆನೋ ಅವನೇ ತನ್ನನ್ನೂ,

ಜಗನ್ಮೋಹಿನಿಯನ್ನೂ ಶತ್ರುಗಳ ಪಾಲುಮಾಡಲು ಪಿತೂರಿ ನಡೆಸಿ, ಪೊಟ್ಟನೂರನ್ನು ಕದನವಿಲ್ಲದೆ ಶತ್ರುಗಳ ವಶಪಡಿಸಲು ಸಂಚುಮಾಡುವ ನೆಂದು ಗಜಪತಿ ಕನಸು ಮನಸ್ಸಿನಲ್ಲಿ ತಿಳಿದಿರಲಿಲ್ಲ. ಈಗ ಅನಿರೀಕ್ಷಿತವಾಗಿ ಶಿರಶ್ಚಂದ್ರ ಮಹಾಪಾತ್ರ ಹಾಗೂ ಬೋದಜಣ್ಣ ಮಹಾಪಾತ್ರರ ನಿಜವಾದ ಗೋಮುಖವ್ಯಾಘ್ರತನ ತಿಳಿದುಹೋಗಿತ್ತು. ಉತ್ಕಲದ ಇತಿಹಾಸದಲ್ಲಿ ಹಿಂದೆಂದೂ ಹಿಂದಾರೂ ಮಾಡದಿದ್ದ ಪರಮ ನೀಚಕಾರ್ಯದ ಮೂಲಕ ಸ್ವಾರ್ಥ ಸಾಧಿಸಿಕೊಳ್ಳಲೆಳಸಿದ ಪರಮ ಪಾಪಿ ಶಿರಶ್ಚಂದ್ರಮಹಾಪಾತ್ರ ನನ್ನೂ, ಬೋದಜಣ್ಣಮಹಾಪಾತ್ರನನ್ನೂ ವಿಚಾರಣೆ ಮಾಡಿ ಶಿಕ್ಷಿಸಬೇ ಕೆಂದು, ಅವರನ್ನು ಕೂಡಲೇ ಬಂಧಿಸಿ ಕರೆತರಲು ಬಾಲಚಂದ್ರಮಹಾಪಾತ್ರ ನನ್ನು ಕಳುಹಿಸಿಕೊಟ್ಟನು.

ಬಾಲಚಂದ್ರಮಹಾಪಾತ್ರನು ಹೊರಟುಹೋದಮೇಲೆ, ಗಜಪತಿಗೆ ಒಂದೆಡೆ ಕುಳಿತಿರಲು ಸಾಧ್ಯವಾಗದೆ, ಅತ್ತಿಂದಿತ್ತ, ಇತ್ತಿಂದತ್ತ ಶತಪಥ ತಿರುಗುತ್ತಿದ್ದನು. ಅವನ ಮನಸ್ಸಿನಲ್ಲಿ ಭಯಂಕರ ಕ್ಷೋಭೆಯುಂಟಾ ಗಿತ್ತು. ಅವನ ಮನಶ್ಶಾಂತಿ ಕದಡಿ, ಚಿತ್ತವಿಕಾಸವಾಗಿತ್ತು. ಅವನ ವ್ಯಗ್ರಗೊಂಡ ಮನಸ್ಸಿಗೆ ಶಿರಶ್ಚಂದ್ರಮಹಾಪಾತ್ರನಷ್ಟೇ ಸ್ವಾಮಿದ್ರೋಹಿ ಯಾಗಿ ತೋರಲಿಲ್ಲ. ಮಹಾಪಾತ್ರರೆಲ್ಲರೂ ಈ ಸಂಚಿಗೆ ಸೇರಿಕೊಂಡಿ ದ್ದಾರೆ! ಅವರು ತನ್ನನ್ನೂ, ಜಗನ್ಮೋಹಿನಿಯನ್ನೂ ಕೈಸೆರೆ ಹಿಡಿದು ಕೃಷ್ಣ ದೇವರಾಯನಿಗೆ ಒಪ್ಪಿಸುತ್ತಾರೆ! ತನ್ನ ಜೀವ ಈಗ ಗಂಡಾಂತರದಲ್ಲಿದೆ! ಮೊದಲು ತನ್ನನ್ನು ರಕ್ಷಣೆಮಾಡಿಕೊಳ್ಳಬೇಕು. ಅನಂತರ ಸಂಚಿಗೆ ಸೇರಿದ ದ್ರೋಹಿಗಳೆಲ್ಲರನ್ನು ಬಂಧಿಸಿ ಸೆರೆಮನೆಯಲ್ಲಿ ಇಡಬೇಕು. ಎಂದೆನಿಸು ತ್ತಿತ್ತು ಒಮ್ಮೆ. ಮತ್ತೊಮ್ಮೆ ತನ್ನ ಈ ಕಾರ್ಯದಿಂದ ಸೈನ್ಯದಲ್ಲಿ ಹಾಹಾ ಕಾರವುಂಟಾದರೆ ತನ್ನ ಸೈನ್ಯವು ತನ್ನಮೇಲೇ ತಿರುಗಿಬಿದ್ದರೆ ಇದೇ ಸಮಯ ವನ್ನು ಸಾಧಿಸಿ ಕೃಷ್ಣದೇವರಾಯನು ಪೊಟ್ಟನೂರನ್ನು ಮುತ್ತಿದರೆ! ಎಂದೆಲ್ಲ ಆಲೋಚಿಸಿದನು. ತಮ್ಮ ಸಂಚು ಬಯಲಾದುದು ಸೇನೆಯಲ್ಲಿರುವ ಇತರ ದ್ರೋಹಿಗಳಿಗೆ ತಿಳಿಯುವ ಮೊದಲೇ ಅವರನ್ನೆಲ್ಲ ಬಂಧಿಸಿ ಸೆರೆಯ ಲ್ಲಿಡಬೇಕು. ಈ ವಿದ್ರೋಹದ ಸಸಿಯನ್ನು ಮೊಳಕೆಯಲ್ಲೇ ಹೊಸಿಯ ಬೇಕು! ಇಲ್ಲದೇ ಇದ್ದರೆ, ಪೊಟ್ಟನೂರು ರಾಯನ ವಶವಾಗುವುದು!

ತಾನು ರಾಯನ ಕೈಸೆರೆ ಸಿಕ್ಕುವೆನು! ಈ ದಾರುಣಪ್ರಸಂಗ ಬರದಂತೆ ತಡೆಯಬೇಕು! ಆದರೆ ಹೇಗೆ ಎಂಬುದು ಮಾತ್ರ ಗಜಪತಿಯ ವಿದ್ವಿಗ್ನಗೊಂಡ ಮನಸ್ಸಿಗೆ ಹೊಳೆಯಲಿಲ್ಲ. ಅವನು ಸುಮ್ಮನೆ ಹೊಯ್ದಾಡುತ್ತಿದ್ದ ತೊಣಚಿ ಕಚ್ಚಿದ ಸೊಣಗನಂತೆ ನಿಂತಲ್ಲಿ ನಿಲ್ಲದೆ, ಕೂತಲ್ಲಿ ಕೂಡದೆ, ಶತಪಥ ತಿರುಗುತ್ತಿದ್ದನು.

ಗಜಪತಿಯ ಆಜ್ಞೆಯಂತೆ ಸಾಕಷ್ಟು ಶಸ್ತ್ರಬಲದೊಂದಿಗೆ ಶಿರಶ್ಚಂದ್ರ ಮಹಾಪಾತ್ರ, ಬೋದಜಣ್ಣ ಮಹಾಪಾತ್ರ ಇವರನ್ನು ಸೆರೆಹಿಡಿದು ತರಲು ಹೊರಟ ಬಾಲಚಂದ್ರ ಮಹಾಪಾತ್ರನು, ಊಹಿಸಿದಷ್ಟು ಸುಲಭವಾಗಿ ಈ ಕಾರ್ಯ ಸಾಧಿಸಲಿಲ್ಲ.

ಬಾಲಚಂದ್ರ ಮಹಾಪಾತ್ರನು ಶಿರಶ್ಚಂದ್ರ ಮಹಾಪಾತ್ರ, ಬೋದಜಣ್ಣ ಮಹಾಪಾತ್ರರನ್ನು ಕೈಸೆರೆ ಹಿಡಿಯಲು ಬಂದಾಗ ಅವರಿಬ್ಬರು ಸೈನಿಕ ಶಿಬರದಲ್ಲಿ ಯಾವುದೋ ಗಹನವಾದ ವಿಷಯವನ್ನು ಕುರಿತು ಚರ್ಚಿಸತ್ತಿದ್ದರು. ಅವರು ಇದ್ದ ಗುಡಾರವನ್ನು ಸುತ್ತುಗಟ್ಟಿ, ಸೈನಿಕರನ್ನು ಕಾವಲಿರಿಸಿ, ಶಿರಶ್ಚಂದ್ರ ಮಹಾಪಾತ್ರನನ್ನು ಸೆರೆಹಿಡಿಯಲು ಹೊರಟನು.

ತನ್ನ ಶಿಬಿರದಲ್ಲಿ ಹಠಾತ್ತನೆ ಕಾಣಿಸಿಕೊಂಡ ಬಾಲಚಂದ್ರ ಮಹಾಪಾತ್ರನನ್ನು ನೋಡಿ ಶಿರಶ್ಚಂದ್ರ ಮಹಾಪಾತ್ರನಿಗೆ ಒಮ್ಮೆಲೇ ಅಚ್ಚರಿಯುಂಟಾಯಿತು. ಆವನನ್ನು ಸ್ವಾಗತಿ, ಕುಳಿತುಕೊಳ್ಳಲು ಆಸನವನ್ನು ತೋರಿದ ತನ್ನನ್ನು ಕೃತಕ ವಿಶ್ವಾಸ ನಟಿಸಿ ಮೋಸಪಡಿಸುತ್ತಿರುವನೆಂದು ಬಗೆದ ಬಾಲಚಂದ್ರ ಮಹಾಪಾತ್ರನು ಆಸನದಲ್ಲಿ ಕುಳಿತುಕೊಳ್ಳದೆ, ಮುಖವನ್ನು ಗಂಟಿಕ್ಕಿಕೊಂಡು ಅವರನ್ನೊಮ್ಮೆ ನೋಡಿ, ತನ್ನ ಸಂಗಡಿಗರಿಗೆ ಅವರನ್ನು ಬಂಧಿಸಲು ಆಜ್ಞೆಮಾಡಿದ.

ಸಶಸ್ತ್ರ ಸೈನಿಕರು ಶಿರಶ್ಚಂದ್ರ ಮಹಾಪಾತ್ರನ ಕಡೆಗೆ ನುಗ್ಗಿದರು. ತಮ್ಮ ಒರೆಗಳಿಂದ ಕತ್ತಿಯನ್ನು ಹಿರಿದು! ಅದರಿಂದ ಶಿರಶ್ಚಂದ್ರ ಮಹಾಪಾತ್ರನಿಗೆ ಅಚ್ಚರಿಯು ಆಯಿತು, ಗಾಬರಿಯು ಆಯಿತು.

"ಬಾಲಚಂದ್ರ ಮಹಾಪಾತ್ರರು ನಮ್ಮ ಮೇಲೆ ಏನೋ ಆಗ್ರಹಗೊಂಡಿರುವಂತೆ ಇದೆ! ಎಂದು ಹೇಳಿ ವ್ಯಂಗ್ಯವಾಗಿ ನಕ್ಕು ಮತ್ತೆ ಹೇಳಿದ"

ನಮ್ಮನ್ನು ಯಾರ ಆಜ್ಞೆಯಮೇಲೆ, ಯಾವ ಅಪಾದನೆಯಮೇಲೆ ಬಂಧಿಸುತ್ತಿದ್ದೀರಿ ತಿಳಿಯಬಹುದೇ ?

"ನಿಮ್ಮಮೇಲೆ ರಾಜದ್ರೋಹದ ಆಪಾದನೆ ಇದೆ. ನಿಮ್ಮನ್ನು ಕೂಡಲೆ ಬಂಧಿಸಿ ಕರೆತರಬೇಕೆಂದು ಪ್ರಭುಗಳು ಆಜ್ಞೆಮಾಡಿದ್ದಾರೆ!"

"ಇದು ಸುಳ್ಳು!" ಎಂದು ಅಲ್ಲೇಯಿದ್ದ ಬೊದಜಣ್ಣ ಮಹಾಪಾತ್ರನು ಕೂಗಿ ಹೇಳಿದ.

"ಮಹಾಪ್ರಭುಗಳು ಹೀಗೆ ಆಜ್ಞೆಮಾಡಿದ್ದಾರೆಂದು ನಾವು ನಂಬುವುದೆಂತು ?"

ಈ ಮಾತು ಕೇಳಿ ಬಾಲಚಂದ್ರ ಮಹಾಪಾತ್ರನು ಗಜಪತಿಯು ಕೊಟ್ಟಿದ್ದ ಮುದ್ರಿಕೆಯ ಉಂಗುರವನ್ನು ತೋರಿಸಿದನು.

ಆ ಉಂಗುರವನ್ನು ಬೋದಜಣ್ಣ ಮಹಾಪಾತ್ರನು ಕೈಗೆ ತೆಗೆದುಕೊಳ್ಳಲು ನೋಡಿದ. ಆದರೆ ಬಾಲಚಂದ್ರ ಮಹಾಪಾತ್ರನು ಅದನ್ನು ಅವನ ಕೈಗೆ ಕೊಡಲಿಲ್ಲ. ಇದರಿಂದ ಕುಪಿತನಾಗಿ ಅವನು ಒದರಿದ.

"ನೀವು ಮುದ್ರಿಕೆಯ ಉಂಗುರ ತೋರಿಸಿದ ಮಾತ್ರಕ್ಕೆ ನಾವು ಬಂಧನಕ್ಕೆ ಒಳಗಾಗುವುದಿಲ್ಲ. ನೀವು ಪ್ರಭುಗಳಿಂದ ಲಿಖಿತದ ರಾಜಾಜ್ಞೆಯನ್ನು ತರದ ಹೊರತು ನಮ್ಮನ್ನು ನೀವು ಬಂಧಿಸಲಾರಿರಿ !"

"ನೀವು ಒಳ್ಳೆಯ ಮಾತಿನಿಂದ ಬಂಧನಕ್ಕೆ ಒಳಗಾಗದಿದ್ದರೆ, ನಿಮ್ಮನ್ನು ನಾವು ಬಲಾತ್ಕಾರದಿಂದ ಬಂಧಿಸಬೇಕಾಗುತ್ತದೆ."

"ಅದು ಎಂದಿಗೂ ಸಾಧ್ಯವಿಲ್ಲ! ಎಂದು ಬೋವಜಣ್ಣನು ಕತ್ತಿ ಹಿರಿದು ನಿಂತನು ಅತ್ಮರಕ್ಷಣೆಗೆಂಬಂತೆ. ಅದನ್ನು ನೋಡಿ ಹೆದರದೆ, ಶಿರಶ್ಚಂದ್ರ ಮಹಾಪಾತ್ರನು ಏನು ಹೇಳುವನೋ ಎಂದು ಅವನ ಕಡೆ ನೋಡಿದ."

"ಪ್ರಭುಗಳು ನಮ್ಮನ್ನು ಬಂಧಿಸಿ ತರಲು ನಿಮಗೆ ಆಜ್ಞೆಮಾಡಿರುವರೆಂದು ನಂಬಲು ಸಾಧ್ಯವೇ ಇಲ್ಲ."

"ಏಕೆ ?"

"ಮೊದಲಿನಿಂದಲೂ ನಮ್ಮಮೇಲೆ ಅಕಾರಣವಾಗಿ ದ್ವೇಷ ಕಾರುತ್ತಿರುವ ನೀವು ನಮ್ಮನ್ನು ಬಂಧಿಸಲು ಬಂದಿರುವಿರೆಂದರೆ, ಅದರಲ್ಲಿ ಏನೋ

ವಿಶೇಷವಿದೆ. ನೀವು ಪ್ರಭುಗಳ ಮುದ್ರಿಕೆಯ ಉಂಗುರವನ್ನು ಹೇಗೋ ದೊರಕಿಸಿಕೊಂಡು, ನಿಮ್ಮ ದ್ವೇಷ ಸಾಧಿಸಲು ಈಗ ಬಂಧಿಸಲು ಬಂದಿದ್ದೀರಿ. ಬೋದಜಣ್ಣಮಹಾಪಾತ್ರರು ಹೇಳಿದಂತೆ ಇದರಲ್ಲಿ ಏನೋ ಮೋಸವಿದೆ. ನೀವು ಲಿಖಿತಮೂಲಕ ಪ್ರಭುಗಳ ಆಜ್ಞೆಯನ್ನು ತರದಹೊರತು ನಾವು ನಿಮಗೆ ಸೆರೆಯಾಗುವುದಿಲ್ಲ!"

"ನೀವು ಸೆರೆಯಾಗದೇ ಇದ್ದರೆ ನಿಮ್ಮನ್ನು ಬಲಾತ್ಕಾರವಾಗಿ ಸೆರೆ ಹಿಡಿಯುಲಾಗುವುದು!" ಬಾಲಚಂದ್ರಮಹಾಪಾತ್ರ ಗರ್ಜಿಸಿದ.

"ನಿಮ್ಮಲ್ಲಿ ಅಷ್ಟು ಪೌರುಷವಿದ್ದರೆ ನಮ್ಮನ್ನು ಬಲಾತ್ಕಾರದಲ್ಲಿ ಸೆರೆ ಹಿಡಿದುಕೊಂಡು ಹೋಗಿ!" ಎಂದು ಹೇಳಿ ಶಿರಶ್ಚಂದ್ರಮಹಾಪಾತ್ರನೂ ಕತ್ತಿ ಹಿರಿದು ನಿಂತ.

ಮೆಟ್ಟಿದ ಹಾವಿನಂತೆ ಬುಸುಗುಟ್ಟುತ್ತಾ, ಬಾಲಚಂದ್ರಮಹಾಪಾತ್ರನು ತನ್ನ ಸಂಗಡಿಗರಿಗೆ ಬಲಾತ್ಕಾರದಿಂದ ಕೈಸೆರೆ ಹಿಡಿಯಲು ಆಜ್ಞೆ ಮಾಡಿದ. ಸುಮಾರು ಹತ್ತುಮಂದಿ ಸಶಸ್ತ್ರ ಸೈನಿಕರು ಶಿರಶ್ಚಂದ್ರಪಾತ್ರ ಬೋದಜಣ್ಣ ಮಹಾಪಾತ್ರರ ಮೇಲೆ ನುಗ್ಗಿದರು. ಇನ್ನೊಂದು ಕ್ಷಣದಲ್ಲಿ ಆ ಹತ್ತುಮಂದಿ ಸೈನಿಕರು ರಣವಿಕ್ರಮಿಗಳಾದ ಮಹಾಪಾತ್ರರಿಬ್ಬರ ಎದುರಿಗೆ ನಿಲ್ಲಲಾರದೆ ಹಿಮ್ಮೆಟ್ಟಿದರು. ಅದನ್ನು ನೋಡಿ, ಬಾಲಚಂದ್ರಮಹಾಪಾತ್ರನೇ ಅವರನ್ನು ಹಿಡಿಯಲು ಮುಂದೆ ನುಗ್ಗಿದ. ಉಳಿದ ಸೈನಿಕರು ಇದರಿಂದ ಆವೇಶಗೊಂಡು, ಶಿರಶ್ಚಂದ್ರಮಹಾಪಾತ್ರ, ಬೋದಜಣ್ಣಮಹಾಪಾತ್ರರಮೇಲೆ ಬಿದ್ದರು. ಹತ್ತು ಹನ್ನೆರಡು ಮಂದಿಯ ವಿರುದ್ಧ ಇಬ್ಬರು ಎಷ್ಟುಕಾಲ ಹೋರಾಡಬಲ್ಲರು! ಎಂದು ತಿಳಿದಿದ್ದ ಬಾಲಚಂದ್ರಮಹಾಪಾತ್ರನಿಗೆ ನಿರಾಶೆಯಾಯಿತು. ಶಿರಶ್ಚಂದ್ರಮಹಾಪಾತ್ರನೊಬ್ಬನೇ ಆ ಹತ್ತುಮಂದಿ ದಂಡಾಳುಗಳನ್ನು ಬಲಿ ತೆಗೆದುಕೊಂಡು ಇನ್ನೇನು ಬಾಲಚಂದ್ರಮಹಾಪಾತ್ರನಮೇಲೆ ಬೀಳಬೇಕೆನ್ನುವುದರೊಳಗಾಗಿ, ಬಾಲಚಂದ್ರಮಹಾಪಾತ್ರನ ಸಹಾಯಕ್ಕೆ ಹೊರಗಡೆ ಇದ್ದ ಸೈನಿಕರು ಬಂದು ಶಿರಶ್ಚಂದ್ರಮಹಾಪಾತ್ರರಮೇಲೆ ಬಿದ್ದರು. ಅಧಿಕ ಸಂಖ್ಯೆಯಲ್ಲಿ ಬಂದು ತಮ್ಮಮೇಲೆ ಬಿದ್ದ ಸೈನಿಕರನ್ನು ಹಿಮ್ಮೆಟ್ಟಿಸಲಾರದೆ, ಕಡೆಗೆ ಅವರಿಬ್ಬರೂ ಬಾಲಚಂದ್ರಮಹಾಪಾತ್ರನಿಗೆ ಸೆರೆ ಸಿಕ್ಕಿದರು.

ಸೆರೆಸಿಕ್ಕಿದ ಅವರನ್ನು ಬಂಧಿಸಿ, ಕೂಡಲೇ ಗಜಪತಿಯ ಬಳಿಗೆ ಕರೆದು ಕೊಂಡು ಹೊರಟನು. ಮಹಾ ದಂಡನಾಯಕ ಶಿರಶ್ಚಂದ್ರ ಮಹಾಪಾತ್ರನನ್ನು ಬಾಲಚಂದ್ರ ಮಹಾಪಾತ್ರನು ಮೋಸದಿಂದ ಸೆರೆ ಹಿಡಿದು ಎಲ್ಲಿಗೋ ತೆಗೆದುಕೊಂಡು ಹೋಗುತ್ತಿರುವ ಸುದ್ದಿ ಸೈನಿಕ ಶಿಬಿರದಲ್ಲಿ ಕಾಳ್ಗಿಚ್ಚಿನಂತೆ ಹರಡಿತು. ಶಿರಶ್ಚಂದ್ರ ಮಹಾಪಾತ್ರನ ಮೂಲ ಬಲಕ್ಕೆ ಸೇರಿದ ಸೈನಿಕರು ಬೆಂಗಾವಲಪಡೆಯುವರು ಕೂಡಲೇ ತಮ್ಮ ನಾಯಕನ ರಕ್ಷಣೆಗೆ ಧಾವಿಸಿ ಬಂದರು. ಅವರು ಬಾಲಚಂದ್ರ ಸೈನಿಕರ ಮೇಲೆ ಬಿದ್ದು ಅವರನ್ನು ಸೋಲಿಸಿ, ಅವರಕೈಯಿಂದ ಶಿರಶ್ಚಂದ್ರ ಮಹಾಪಾತ್ರ ಹಾಗೂ ಬೋದಜಣ್ಣ ಮಹಾಪಾತ್ರರನ್ನು ಬಿಡಿಸಿದರು, ಯಾಕೋ ಪರಿಸ್ಥಿತಿ ವಿಪರೀತಕ್ಕೆ ಬಂದಿತೆಂದು, ಹೆದರಿ ನಡೆದ ಎಲ್ಲಾ ಸಂಗತಿಯನ್ನು ಗಜಪತಿಗೆ ತಿಳಿಸಲು, ಅವನು ಸೆರೆಯಾಳುಗಳನ್ನು ಸಂಗಡಿಗರನ್ನು ಅಲ್ಲೇ ಬಿಟ್ಟು ಅರಮನೆಯ ಕಡೆಗೆ ಓಡುತ್ತ ಹೊರಟನು. ಅದನ್ನು ನೋಡಿ ಬೋದಜಣ್ಣ ಮಹಾಪಾತ್ರನು ಮೋಸದಿಂದ ತಮ್ಮನ್ನು ಸೆರೆ ಹಿಡಿಯಲೆತ್ನಿಸಿ ವಿಫಲನಾಗಿ, ಈಗ ತನ್ನ ಕೃತ್ಯ ಬಯಲಾಗುವುದೆಂದು ಹೆದರಿ, ತಮ್ಮಿಂದ ಕಳ್ಳ ತಪ್ಪಿಸಿಕೊಂಡು ಓಡುತ್ತಿರುವನೆಂದು ಭಾವಿಸಿ, ಅವನನ್ನ ಕೈಸೆರೆಹಿಡಿಯುಲು ತನ್ನ ದಳದೊಂದಿಗೆ ಹಿಂಬಾಲಿಸಿದನು. ಒಂದು ನಿಮಿಷದಲ್ಲೇ ಬಾಲಚಂದ್ರ ಮಹಾಪಾತ್ರನು ಬೋದಜಣ್ಣ ಮಹಾ ಪಾತ್ರನ ಸೆರೆಯಾಗಿದ್ದ. ತಾನು ಯಾರನ್ನು ಸೆರೆಹಿಡಿಯಲೆತ್ನಿಸಿದ್ದನೋ ಅವರಿಗೇ ತಾನು ಸೆರೆಸಿಕ್ಕಿದ ಪ್ರಸಂಗ ನೆನೆದು ಬಾಲಚಂದ್ರ ಮಹಾಪಾತ್ರ ನಿಗೆ ತುಂಬಾ ವ್ಯಥೆಯಾಯಿತು. ಅವನು ನಡೆದಿರುವ ಎಲ್ಲಾ ಸಂಗತಿಯನ್ನು ಪ್ರಭುಗಳಿಗೇ ನಿವೇದಿಸಲು ತನ್ನ ಬಳಿಯಲ್ಲಿದ್ದ ಮುದ್ರಿಕೆಯ ಉಂಗುರ ವನ್ನು ಕೊಟ್ಟು ಒಬ್ಬದೂತನನ್ನು ಬೋದಜಣ್ಣ ಮಹಾಪಾತ್ರನಿಗೆ ತಿಳಿಯವಂತೆ ಕಳುಹಿಸಿಕೊಟ್ಟನು.

ಬಾಲಚಂದ್ರ ಮಹಾಪಾತ್ರನು ಮಹಾದಂಡನಾಯಕರಾದ ಶಿರಶ್ಚಂದ್ರ ಮಹಾಪಾತ್ರರನ್ನು ಮೋಸದಿಂದ ಕೈಸೆರೆ ಹಿಡಿಯಲು ಬಂದು ಕಡೆಗೆ ಅವನೇ ಶಿರಶ್ಚಂದ್ರ ಮಹಾಪಾತ್ರರಿಗೆ ಕೈಸೆರೆ ಸಿಕ್ಕಿದ ಸಂಗತಿ ಸೈನಿಕ ಶಿಬಿರದಲ್ಲೆಲ್ಲಾ ಕಾಳ್ಗಿಚ್ಚಿನಂತೆ ಹಬ್ಬಿತು. ಸೈನ್ಯದಪ್ರಮುಖ ಸರದಾರರು,ದಳಪತಿಗಳು ತಮ್ಮ

ತಮ್ಮ ಮಹಾಪಾತ್ರರೊಡನೆ ಶಿರಶ್ಚಂದ್ರ ಮಹಾಪಾತ್ರನ ಶಿಬಿರದ ಮುಂದೆ ನೆರೆದರು—ಏನು ಸಂಗತಿ ಎಂದು ವಿಚಾರಿಸುವ ಸಲುವಾಗಿ. ಅವರು ಅಲ್ಲಿಗೆ ಬರುತ್ತಿದ್ದಂತೆ, ಸೈನಿಕ ಶಿಬಿರದಲ್ಲಿ ಬಾಲಚಂದ್ರ ಮಹಾಪಾತ್ರನ ಸೈನಿಕರಿಗೂ, ಶಿರಶ್ಚಂದ್ರ ಮಹಾಪಾತ್ರನ ಸೈನಿಕರಿಗೂ ವಾಗ್ಯುದ್ಧ ನಡೆದು ಅದು ಅಂತರ್ಯುದ್ಧದಲ್ಲಿ ಪರ್ಯವಸಾನವಾಗದೆ ಎಂಬ ವಾರ್ತೆಯು ಬಂತು. ಈ ವಾರ್ತೆಯನ್ನು ಕೇಳಿದ ಇತರ ಮಹಾಪಾತ್ರರು ತಮ್ಮತಮ್ಮಲ್ಲೇ ಪಕ್ಷಗಳನ್ನು ವಿಂಗಡಿಸಿಕೊಂಡು ಕೆಲವರು ಬಾಲಚಂದ್ರ ಮಹಾಪಾತ್ರನ ಬೆಂಬಲಕ್ಕೆ, ಮತ್ತೆ ಕೆಲವರು ಶಿರಶ್ಚಂದ್ರ ಮಹಾಪಾತ್ರನ ಬೆಂಬಲಕ್ಕೆ ತಮ್ಮ ಸೈನ್ಯಗಳೊಂದಿಗೆ ಹೊರಟರು. ಇದರಿಂದಾಗಿ ಸೈನಿಕ ಶಿಬಿರದಲ್ಲಿ ಶಿರಶ್ಚಂದ್ರ ಮಹಾಪಾತ್ರ ಹಾಗೂ ಬಾಲಚಂದ್ರ ಮಹಾಪಾತ್ರರ ನಡುವೆ ದೊಡ್ಡ ಯುದ್ಧವೇ ನಡೆಯಿತು. ಈ ಸುದ್ದಿಯನ್ನು ಗಜಪತಿಗೆ ವರದಿಮಾಡಲು ಚಾರರು ಅರಮನೆಗೆ ಓಡಿದರು!

ತನ್ನ ಕಡೆಯ ಸೈನಿಕರಿಗೂ, ಬಾಲಚಂದ್ರ ಮಹಾಪಾತ್ರನ ಸೈನಿಕರಿಗೂ ನಡೆಯುತ್ತಿದ್ದ ಹೋರಾಟವನ್ನು ನಿಲ್ಲಿಸಲು ಶಿರಶ್ಚಂದ್ರ ಮಹಾಪಾತ್ರ ಬಹಳ ಹೆಣಗಿದನು. ಕಡೆಗೂ ಅವನ ಪ್ರಯತ್ನ ಸಫಲವಾಯಿತು. ಸೈನಿಕರು ತಮ್ಮತಮ್ಮಲ್ಲೇ ಕಾದಾಡುವುದನ್ನು ತಪ್ಪಿಸಿ, ಉದ್ರೇಕಗೊಂಡ ಸೈನಿಕರನ್ನು ಸೂಕ್ತರೀತಿಯಲ್ಲಿ ಸಮಾಧಾನಗೊಳಿಸಿ, ಪುಂಡು ಸೈನಿಕರ ಕಾವಲಿಗೆ ತಕ್ಕ ಬಲವನ್ನು ನಿಯೋಜಿಸಿ, ಮಹಾಪಾತ್ರರೆಲ್ಲರನ್ನೂ ಸಮ್ಮುಖಕ್ಕೆ ಬರಮಾಡಿಕೊಂಡು ನಡೆದ ಎಲ್ಲಾ ವಿಷಯವನ್ನು ವಿವರವಾಗಿ ತಿಳಿಸಿದನು. ಶಿರಶ್ಚಂದ್ರ ಮಹಾಪಾತ್ರನ ಸಂಯಮ, ಸಹನೆಗಳಿಂದ ಉದ್ರಿಕ್ತರಾಗಿದ್ದ ಮಹಾಪಾತ್ರರು ಶಾಂತಗೊಂಡರು. ನಡೆದ ಸಂಗತಿಯನ್ನು ಕೇಳಿದ ಮೇಲೆ ಶಿರಶ್ಚಂದ್ರ ಮಹಾಪಾತ್ರನ ವಿಷಯದಲ್ಲಿ ಅವರಿಗೆ ಸಹಾನುಭೂತಿ ಉಂಟಾಯಿತು. ಮೋಸದಿಂದ ಅವನನ್ನು ಸೆರೆಹಿಡಿಯಲು ಬಂದ ಬಾಲಚಂದ್ರಮಹಾಪಾತ್ರನು ಇತರ ಮಹಾಪಾತ್ರರ ದೃಷ್ಟಿಯಲ್ಲಿ ತುಂಬಾ ಕೀಳಾಗಿ ಕಂಡನು.

ಈಗ ಮುಂದೆ ಕೈಗೊಳ್ಳಬೇಕಾದ ಕಾರ್ಯಕ್ರಮವೇನೆಂಬುದನ್ನು ಮಹಾಪಾತ್ರರ ಸಭೆಯಲ್ಲಿ ನಿರ್ಧರಿಸಬೇಕಾಯಿತು. ಬಾಲಚಂದ್ರಮಹಾ

ಪಾತ್ರನು ತನ್ನಹಳೆಯ ದ್ವೇಷವನ್ನು ಸಾಧಿಸುವ ಸಲುವಾಗಿ, ಮೋಸದಿಂದ ದೊರಕಿಸಿಕೊಂಡ ರಾಜಮುದ್ರೆಯುಳ್ಳ ಉಂಗುರದ ನೆರವಿನಿಂದ, ಶಿರಶ್ಚಂದ್ರ ಮಹಾಪಾತ್ರ ಹಾಗೂ ಬೋದಜಣ್ಣ ಮಹಾಪಾತ್ರರನ್ನು ಸೆರೆಹಿಡಿಯಲು ಬಂದುದು ಅವರ ದೃಷ್ಟಿಯಲ್ಲಿ ಒಂದು ಮಹಾಪರಾಧವಾಗಿ ತೋರಿತ್ತು. ಬಾಲಚಂದ್ರನ ಅಪರಾಧವನ್ನು ಗಜಪತಿಗಳ ಗಮನಕ್ಕೆ ತಂದು, ಅವನನ್ನು ವಿಚಾರಣೆಗೆ ಒಳಪಡಿಸಿ, ತಕ್ಕ ರೀತಿಯಲ್ಲಿ ಶಿಕ್ಷಿಸುವ ವಿಷಯದಲ್ಲಿ ಮಹಾಪಾತ್ರರಲ್ಲಿ ಬಹುಮಂದಿ ಒಮ್ಮತ ಅಭಿಪ್ರಾಯ ವ್ಯಕ್ತಪಡಿಸಿದರು. ಅದರಂತೆ ತೀರ್ಮಾನವಾಗಿ, ಬಾಲಚಂದ್ರಮಹಾಪಾತ್ರನನ್ನು ಸದ್ಯಕ್ಕೆ ಸೆರೆಮನೆಯಲ್ಲಿ ಇಡಲಾಯಿತು. ಅವನು ಮಾಡಿದ ಮಹಾಪರಾಧದ ಕಲ್ಪನೆ ಗಜಪತಿಗೆ ಬರಲೆಂದು, ಮಹಾಪಾತ್ರರೆಲ್ಲರೂ ಕೂಡಿ ಗಜಪತಿಯೊಂದಿಗೆ ಈ ಬಗ್ಗೆ ವರದಿಮಾಡಲು, ಅರಮನೆಗೆ ಹೊರಟರು. ಅವರು ಬರುತ್ತಿರುವ ವಾರ್ತೆಯೂ ಚಾರರ ಮೂಲಕ ಮುಂದಾಗಿ ಗಜಪತಿಗೆ ವರದಿಯಾಯಿತು !

ಬಾಲಚಂದ್ರಮಹಾಪಾತ್ರನು ಶಿರಶ್ಚಂದ್ರಮಹಾಪಾತ್ರ ಹಾಗೂ ಬೋದಜಣ್ಣಮಹಾಪಾತ್ರರರನ್ನು ಬಂಧಿಸಿ ಕರೆತರುವುದನ್ನೇ ಎದುರು ನೋಡುತ್ತಾ ಅರಮನೆಯ ಚಂದ್ರಶಾಲೆಯಲ್ಲಿ ಕುಳಿತಿದ್ದ ಪ್ರತಾಪರುದ್ರ ಗಜಪತಿಗೆ ಮೊದಲು ಕಾಣಿಸಿಕೊಂಡವನು ಬಾಲಚಂದ್ರಮಹಾಪಾತ್ರನಲ್ಲ! ಅವನು ಕಳುಹಿಸಿಕೊಟ್ಟಿದ್ದ ಚಾರ !

ಆ ಚಾರನು ಶಿರಶ್ಚಂದ್ರಮಹಾಪಾತ್ರನನ್ನು ಬಂಧಿಸಲು ಹೊರಟ ಘಳಿಗೆಯಿಂದ ಇದುವರೆಗೆ ನಡೆದ ಎಲ್ಲ ವಾರ್ತೆಯನ್ನು ವಿವರವಾಗಿ ವರದಿ ಮಾಡಿ, ಗಜಪತಿಯ ಆಜ್ಞೆಯನ್ನು ಜಾರಿ ಮಾಡಲು ಹೊರಟ ಬಾಲಚಂದ್ರ ಮಹಾಪಾತ್ರನೇ ಶಿರಶ್ಚಂದ್ರಮಹಾಪಾತ್ರನು ಸೆರೆಯಲ್ಲಿರುವ ಸಂಗತಿಯನ್ನು ತಿಳಿಸಿ, ಅವನನ್ನು ಬಿಡಿಸಿಕೊಂಡುಬರಲು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಗಜಪತಿಯನ್ನು ಪ್ರಾರ್ಥಿಸಿದನು. ತಾನು ಹೇಳಿದ ಎಲ್ಲ ವಾರ್ತೆ ಸತ್ಯ ಸಂಗತಿಯೆಂದು ಪ್ರಮಾಣಮಾಡಿ ತನ್ನ ಹೇಳಿಕೆಗೆ ಸಾಕ್ಷಿ ಎಂಬಂತೆ ತಾನು ಜತೆಯಲ್ಲಿ ತಂದಿದ್ದ ಮುದ್ರಿಕೆಯ ಉಂಗುರವನ್ನು ಗಜಪತಿಗೆ ಕೊಟ್ಟನು. ಆ ಉಂಗುರವನ್ನು ನೋಡಿದಮೇಲೆ ಆ ದೂತನು ಹೇಳಿದ ಸಂಗತಿ ನಿಜವೆಂದು ಗಜಪತಿಗೆ ದೃಢವಾಯಿತು.

ಆ ದೂತನು ಅಲ್ಲಿಂದ ಹೊರಟುದೇ ತಡ ಮತ್ತೊಬ್ಬ ಚಾರನು ಬಂದು ಗಜಪತಿಗೆ ಪ್ರಣಾಮಮಾಡಿ ನಿಂತುಕೊಂಡನು. ಅವನು ಸೈನ್ಯದಲ್ಲಿ ಆರಂಭವಾಗಿದ್ದ ಹೊಡೆದಾಟವನ್ನು ವರದಿಮಾಡಲು ಬಂದಿದ್ದ. ಶಿರಶ್ಚಂದ್ರ ಮಹಾಪಾತ್ರನಕಡೆಯ ಸೈನಿಕರಿಗೂ, ಬಾಲಚಂದ್ರಮಹಾಪಾತ್ರನಕಡೆಯ ಸೈನಿಕರಿಗೂ ಒಮ್ಮೆಲೇ ವೈಮನಸ್ಸುಂಟಾಗಿ, ಎರಡುಕಡೆಯ ಸೈನಿಕರೂ ತಮ್ಮ ತಮ್ಮ ನಾಯಕರ ರಕ್ಷಣೆಗಾಗಿ, ಕತ್ತಿ ಹಿರಿದು ಯುದ್ಧಮಾಡುತ್ತಿರುವರೆಂದೂ, ಸೈನಿಕ ಶಿಬಿರದಲ್ಲಿ ಹಠಾತ್ತನೆ ಆರಂಭವಾದ ಈ ಅಂತರ್ಯುದ್ಧ ಯಾರಿಂದಲೂ ತಡೆಗಟ್ಟಲು ಸಾಧ್ಯವಿಲ್ಲದ ರೀತಿಯಲ್ಲಿ, ಭಯಂಕರಸ್ವರೂಪ ತಳೆದಿದೆಯೆಂದೂ, ಗಜಪತಿಯೇ ಬಂದು ಸಮಾಧಾನಗೊಳಿಸದೇ ಇದ್ದರೆ, ಎರಡುಕಡೆಯ ಸೈನಿಕರು ವೃಥಾಕಾರಣವಾಗಿ ತಮ್ಮತಮ್ಮಲ್ಲೇ ಕಾದಾಡಿ ಸಾಯುವರೆಂದೂ ವರದಿಮಾಡಿದನು.

ಅವನನ್ನು ಕಳುಹಿಸಿಕೊಟ್ಟು ಗಜಪತಿಯು ಉದ್ರಿಕ್ತ ಸೈನವನ್ನು ಸಮಾಧಾನಗೊಳಿಸಲು ಸಿದ್ಧನಾದ ಇನ್ನೇನು ಹೊರಟುಬರಬೇಕು ಎನ್ನುವುದರಲ್ಲಿ ದಾರುಣವಾದ ವಾರ್ತೆಯೊಂದು ಗಜಪತಿಗೆ ತಿಳಿಯಿತು. ಗಜಪತಿಯನ್ನು ನೋಡುವ ಸಲುವಾಗಿ ಮಹಾಪಾತ್ರರೆಲ್ಲರೂ, ಶಿರಶ್ಚಂದ್ರ ಮಹಾಪಾತ್ರಹಾಗೂ ಬೋದಜಣ್ಣ ಮಹಾಪಾತ್ರರ ನಾಯಕತ್ವದಲ್ಲಿ ಬರುತ್ತಿರುವರೆಂದು ದೂತನೊಬ್ಬನು ಓಡಿಬಂದು ಗಜಪತಿಗೆ ತಿಳಿಸಿದನು. ಅಷ್ಟೆ ಅಲ್ಲ ಮಹಾಪಾತ್ರರು ಬಾಲಚಂದ್ರ ಮಹಾಪಾತ್ರನನ್ನ ಸೆರೆಯಲ್ಲಿಟ್ಟಿರುವರೆಂದೂ, ಅವನನ್ನು ಸೆರೆಯಿಂದ ಬಿಡಿಸಲು ಅವನ ಕಡೆಯ ಮಹಾಪಾತ್ರರು ಮಾಡಿದ ಪ್ರಯತ್ನಗಳೆಲ್ಲ ವಿಫಲಗೊಂಡಿತೆಂದೂ, ಗಜಪತಿಯನ್ನು ನೋಡಲು ಮಹಾಪಾತ್ರರೆಲ್ಲರೂ ಮುಖವನ್ನು ಗಂಟಿಕ್ಕಿಕೊಂಡು, ತಮ್ಮ ನಾಯಕನನ್ನು ಸೆರೆಹಿಡಿಯಲು ಬಂದ ಬಾಲಚಂದ್ರ ಮಹಾಪಾತ್ರನನ್ನು ಬಾಯಿಗೆ ಬಂದಂತೆ ಬೈಯುತ್ತಾ, ಅವಹೇಳನೆ ಮಾಡುತ್ತಾ, ಕೆರಳಿದ ಸಿಂಹಗಳಂತೆ ಬೊಬ್ಬೆಇಡುತ್ತಾ ಬರುತ್ತಿದ್ದಾರೆಂದು ಆ ದೂತನು ತಾನು ಕಂಡುಕೇಳಿದ ಎಲ್ಲ ಸಂಗತಿಗಳನ್ನು ತದ್ವತ್ತಾಗಿ ವರದಿಮಾಡಿದನು.

ಈ ವಾರ್ತೆಯನ್ನು ಕೇಳಿ ಏಕೋ ಗಜಪತಿಗೆ ಇದ್ದ ಉತ್ಸಾಹ ಸರ್‍ರನೆ ಇಳಿದು ಹೋಯಿತು. ಮುಖ ಬಿಳಚಿಕೊಂಡಿತು. ಮೈಕಂಪಿಸಿತು!

ಕಣ್ಣಿಗೆ ಕತ್ತಲೇ ಕವಿಯಿತು. ಬುದ್ಧಿ ಮಂಕಾಯಿತು. ಅವನು ಹಾಗೇ ಆಸನದಲ್ಲಿ ಕುಳಿತು ಕೊಂಡನು. ಭಾರವಾದ ಉಸಿರನ್ನು ಕಷ್ಟದಿಂದ ಬಿಡುತ್ತಾ. ಇದೇ ವೇಳೆಗೆ ಮತ್ತೊಬ್ಬದೂತನು ಕಾಣಿಸಕೊಂಡನು ಅವನು ಎಲ್ಲಕ್ಕಿಂತಲೂ ಭಯಂಕರವಾದ ವಾರ್ತೆಯನ್ನು ತಂದಿದ್ದನು. ಕೋಟೆಯ ಒಳಗೆ ಗಜಪತಿಯ ಸೈನ್ಯದಲ್ಲಿ ಉಂಟಾದ ಅಂತಃಕಲಹ ಅನಾಯಕತೆ ಯನ್ನು ಕೇಳಿದ ಕೃಷ್ಣದೇವರಾಯನು ಸೈನ್ಯಸಮೇತ ಬಂದು ಪೊಟ್ಟನೂರಿನ ಕೋಟೆಗೆ ಮುತ್ತಿಗೆ ಹಾಕಿದನೆಂದು ತಿಳಿಸಿದನು.

ಈ ವಾರ್ತೆಯನ್ನು ಕೇಳಿ ಗಜಪತಿ ಮತ್ತಷ್ಟು ತತ್ತರಿಸಿದನು. ಅವನಿಗೆ ಆ ದೂತನನ್ನು ಹೋಗು ಎಂದು ಹೇಳಲು ವ್ಯವಧಾನ ಉಳಿಯ ಲಿಲ್ಲ. ಅವನಿಗೆ ಅಲ್ಲಿ ಹೆಚ್ಚುಕಾಲ ಕುಳಿತಿರಲು ಆಗದೇಹೋಯಿತು. ಏನನ್ನೋ ಆಲೋಚಿಸಿ, ಗಜಪತಿಯು ಅಲ್ಲಿಂದ ಎದ್ದು ಜಗನ್ಮೋಹಿನಿಯು ಇದ್ದ ಅಂತಃಪುರಕ್ಕೆ ಲಗುಬಿಗಿಯಿಂದ ಹೊರಟುಹೋದನು.

ಮಹಾಪಾತ್ರರೆಲ್ಲರೂ ಅರಮನೆಗೆ ಬಂದು ಗಜಪತಿಯ ಸಂದರ್ಶನ ಕ್ಕಾಗಿ ಕಾದರು. ಎಷ್ಟುಹೊತ್ತಾದರೂ ಗಜಪತಿಯು ಜಗನ್ಮೋಹಿನಿಯ ಅಂತಃಪುರದಿಂದ ಹೊರಗೆ ಬರಲಿಲ್ಲ. ಇದರಿಂದ ಮಹಾಪಾತ್ರರಿಗೆ ತುಂಬಾ ನಿರಾಶೆಯಾಯಿತು. ತಾವು ನೋಡಲು ಬಂದಿರುವ ಸಂಗತಿಯನ್ನು ದಾಸಿಯ ಮೂಲಕ ಅಂತಃಪುರದಲ್ಲಿ ಇರುವ ಗಜಪತಿಗೆ ತಿಳಿಸಿದರು. ಆ ದಾಸಿ ಹಿಂದಿರುಗಿ ಬಂದು ಗಜಪತಿಯು ಜಗನ್ಮೋಹಿನಿಯೊಂದಿಗೆ ಯಾವುದೋ ಆಪ್ತಾಲೋಚನೆ ಮಾಡುತ್ತಿರುವರೆಂದೂ ಇಂದು ಅವರು ಯಾರನ್ನೂ ನೋಡಲು ಇಚ್ಛಿಸುವುದಿಲ್ಲವೆಂದೂ ತಿಳಿಸಿದಳು. ಈ ಮಾತಿನಿಂದ ಮಹಾ ಪಾತ್ರರಿಗೆಲ್ಲ ತುಂಬಾ ಉತ್ಸಾಹಭಂಗವಾಯಿತು. ಅವರು ನಿರ್ವಾಹವಿಲ್ಲದೆ ತಮ್ಮ ಶಿಬಿರಗಳಿಗೆ ತೆರಳಿದರು.

ಮಾರನೆಯದಿನ ಗಜಪತಿಯ ಸಂದರ್ಶನಕ್ಕೆ ಶಿರಶ್ಚಂದ್ರಮಹಾಪಾತ್ರ ಬೋದಜಣ್ಣ ಮಹಾಪಾತ್ರರು ಬಂದಾಗ, ಗಜಪತಿಯು ಅಂತಃಪುರದಲ್ಲಿ ಏಕಾಂತದಲ್ಲಿ ಇರುವುದಾಗಿ ತಿಳಿಯಿತು. ಅವರು ಕೊಂಚಹೊತ್ತು ಕಾದು ಹಿಂದಿರುಗಿದರು.

ಮರುದಿನ ಗಜಪತಿಯು ಭೇಟಿಗೆ ಬಂದಾಗಲೂ ಅವರ ದರ್ಶನ ವಾಗಲಿಲ್ಲ!

ಅದರ ಮಾರನೆಯದಿನ ಅರಮನೆಗೆ ಬಂದಾಗ ಅರಮನೆಯಲ್ಲೆಲ್ಲಾ ಗುಲ್ಲೋ ಗುಲ್ಲು! ಪ್ರತಾಪರುದ್ರ ಗಜಪತಿಯಾಗಲೀ, ಜಗನ್ಮೋಹಿನಿ ಯಾಗಲೀ ಮೂರು ದಿನಗಳಿಂದ ಯಾರಿಗೂ ಕಾಣಿಸಿಕೊಳ್ಳಲಿಲ್ಲವಂತೆ! ಅವರು ಊಟ ತಿಂಡಿಗಳಿಗೂ, ಮತ್ತಿತರ ದೈನಂದಿನ ಕಾರ್ಯಕ್ರಮಗಳಿಗೂ ತಮ್ಮ ಅಂತಃಪುರಗಳಿಂದ ಹೊರಗೆ ತಲೆಯಿಡಲಿಲ್ಲವಂತೆ! ಅವರನ್ನು ಹುಡು ಕಲು ಬಂದ ಅಂತಃಪುರದ ದಾಸಿಗೆ ಅಂತಃಪುರದಲ್ಲೆಲ್ಲೂ ಅವರು ಕಾಣಲಿಲ್ಲ ವಂತೆ! ಅವರು ಯಾವಾಗಲೋ, ಯಾರಕಣ್ಣಿಗೂ ಬೀಳದಂತೆ ಅರಮನೆ ಯಿಂದ ಹೊರಟುಹೋಗಿರುವರಂತೆ!

ಈ ವಾರ್ತೆಯನ್ನು ಕೇಳಿ ಶಿರಶ್ಚಂದ್ರಮಹಾಪಾತ್ರನಿಗೆ ತುಂಬಾ ಅಚ್ಚರಿಯುಂಟಾಯಿತು. ಗಜಪತಿಯ ಈವರ್ತನೆ ಅವನಿಗೆ ಅರ್ಥವಾಗಲಿಲ್ಲ. ಹೊರಗೆ ಶತ್ರುವಿನ ಧಾಳಿ ಸನ್ನಿಹಿತವಾಗಿರುವ ಸಮಯದಲ್ಲಿ ಗಜಪತಿಯು ಎಲ್ಲಿಗೆ ಹೊರಟುಹೋಗಿರುವನೆಂಬುದು ತಿಳಿಯದೆ ತುಂಬಾ ವ್ಯಾಕುಲವುಂ ಟಾಯಿತು. ಗಜಪತಿಯನ್ನು ಅರಮನೆಯಲ್ಲೆಲ್ಲಾ ಹುಡುಕಿದ, ಪಟ್ಟಣ ದಲ್ಲೆಲ್ಲಾ ಹುಡುಕಿದ. ಎಲ್ಲೂ ಗಜಪತಿಯಾಗಲೀ, ಜಗನ್ಮೋಹಿನಿಯಾ ಗಲೀ ಪತ್ತೆಯಾಗಲಿಲ್ಲ ಅವರ ಬಗ್ಗೆ ಯಾವ ಸಮಾಚಾರವೂ ತಿಳಿಯಲಿಲ್ಲ.

ಪೊಟ್ಟನೂರಿನಲ್ಲಿ ಗಜಪತಿಯು ಇಲ್ಲದಿರುವ ಸಂಗತಿ ಎಲ್ಲೆಡೆಯಲ್ಲೂ ಹರಡಿ ಜನ ಕಂಗಾಲಾದರು. ಶತ್ರು ಧಾಳಿ ನಡೆಯಲಿರುವ ಸಂದರ್ಭದಲ್ಲಿ ತಮ್ಮನ್ನು ಶತ್ರುಗಳಿಂದ ರಕ್ಷಿಸುವ ಬದಲು, ಗಜಪತಿಯು ಶತ್ರುಧಾಳಿಗೆ ಹೆದರಿ ಓಡಿಹೋಗಿರುವನೆಂದು ಜನರು ಪರಿಪರಿಯಾಗಿ ಮಾತನಾಡಿ ಕೊಂಡರು. ತಮ್ಮ ಸಾಮ್ರಾಟನೇ ಹೇಡಿಯಂತೆ ಪೊಟ್ಟನೂರನ್ನು ಬಿಟ್ಟು ಎಲ್ಲಿಗೋ ಓಡಿಹೋಗಿ ತಲೆತಪ್ಪಿಸಿಕೊಂಡಿರುವಾಗ ತಾವು ಯಾವ ಪುರುಷಾ ರ್ಥಕ್ಕಾಗಿ ಯುದ್ಧಮಾಡಬೇಕು ಎಂದು ಸೈನಿಕರಲ್ಲಿ ನಿರುತ್ಸಾಹ ಉಂಟಾ ಯಿತು. ಅವರಿಗೆ ದುರ್ಗ ರಕ್ಷಣೆಯಲ್ಲಿ ಶ್ರದ್ಧಾಸಕ್ತಿಗಳು ಕಡಿಮೆಯಾದವು. ಶತ್ರುಗಳನ್ನು ಎದುರಿಸಿ ವೃಥಾ ಪ್ರಾಣ ಬಿಡುವುದಕ್ಕಿಂತ ದುರ್ಗವನ್ನು

ಶತ್ರುಗಳಪಾಲು ಮಾಡುವುದೊಳ್ಳೆಯದೆಂದು ಹಲಕೆಲವು ಮಹಾಪಾತ್ರರು ಹೇಳಲು ಆರಂಭಿಸಿದ್ದರು. ತಮ್ಮನ್ನು ಒಂದುಮಾತು ಕೇಳದೆ, ತಮ್ಮ ನಿಷ್ಠೆಯಲ್ಲಿ ನಂಬಿಕೆ ಇರಿಸದೆ, ಹೇಡಿಯಂತೆ ಓಡಿಹೋಗಿದ್ದ ಗಜಪತಿಯ ವರ್ತನೆಯಿಂದ ಕುಪಿತರಾಗಿ ಮಹಾಪಾತ್ರರಲ್ಲನೇಕರು ಯುದ್ಧಮಾಡಲು ಹಿಂಜರಿದರು. ಪರಿಸ್ಥಿತಿ ಹೀಗಿರುವಾಗ ಕೃಷ್ಣದೇವರಾಯನು ತನ್ನ ಸೈನ್ಯದೊಂದಿಗೆ ಬಂದು ಪೊಟ್ಟನೂರನ್ನು ಮುತ್ತಿದ್ದನು. ದುರ್ಗ ರಕ್ಷಣೆಗಾಗಿ ಶಿರಶ್ಚಂದ್ರಮಹಾಪಾತ್ರ ಹಾಗೂ ಬೋದಜಣ್ಣಮಹಾಪಾತ್ರರು ತಮ್ಮ ಶಕ್ತಿ ಮೀರಿ ಶ್ರಮಿಸಿದರೂ ಅವರ ಪ್ರಯತ್ನ ವಿಫಲವಾಯಿತು. ನಿರುತ್ಸಾಹದಿಂದ ಯುದ್ಧಮಾಡುತ್ತಿದ್ದ ಉತ್ಕಲಸೈನಿಕರು, ವೀರಾವೇಶದಿಂದ ಹೋರಾಡುತ್ತಿದ್ದ ರಾಯನ ಸೈನಿಕರಮುಂದೆ ನಿಲ್ಲಲಾರದೆ ಹೋದರು. ಹೀಗಾಗಿ ಪೊಟ್ಟನೂರು—ಹಾವಿನ ಪೊಟ್ಟರೆಯಂತಿದ್ದ ಪೊಟ್ಟನೂರು ಸುಲಭವಾಗಿ ರಾಯನ ವಶವಾಯಿತು. ರಾಯನ ಇಷ್ಟದಂತೆ ಪೊಟ್ಟನೂರು ಹೆಚ್ಚಿನ ರಕ್ತಪಾತವಿಲ್ಲದೆ, ಹೆಚ್ಚಿನ ಶ್ರಮವಿಲ್ಲದೆ ವಶವಾಯಿತು.

ಇಂತು ಕೃಷ್ಣದೇವರಾಯನು ಮಾಡಿದ ಸಂಚು ಫಲಿಸಿ, ಅವನು ನಿರೀಕ್ಷಿಸಿದ್ದಂತೆ, ಪೊಟ್ಟನೂರು ಸುಲಭವಾಗಿ ರಾಯನ ವಶವಾಗಿತ್ತು.

ಪೊಟ್ಟನೂರು ರಾಯನ ವಶವಾದಮೇಲೆ ಶಿರಶ್ಚಂದ್ರ ಮಹಾಪಾತ್ರನಿಗೆ ತಿಳಿಯಿತು. ಪ್ರತಾಪರುದ್ರ ಗಜಪತಿಯು ಹಠಾತ್ತನೆ ಪೊಟ್ಟನೂರಿನಿಂದ ಏಕೆ ಕಣ್ಮರೆಯಾದನೆಂಬ ಸಂಗತಿ. ಇದುವರೆಗೆ ಕೃಷ್ಣದೇವರಾಯನಿಗೆ ಹೆದರಿ ಅವನು ಪೊಟ್ಟನೂರಿನಿಂದ ಓಡಿಹೋಗಿರಬೇಕೆಂದು ತಿಳಿದಿದ್ದ. ಆದರೆ ಈಗ ವಾಸ್ತವಾಂಶ ಈಗ ಹೊರಬಿದ್ದಿತ್ತು. ಅದನ್ನ ಕೇಳಿ, ಶಿರಶ್ಚಂದ್ರ ಮಹಾಪಾತ್ರನಿಗಾದ ವ್ಯಥೆ ಅಷ್ಟಿಷ್ಟಲ್ಲ. ಆದರೆ ತನ್ನನ್ನು ಶಂಕಿಸಿ ರಾಜ್ಯತೊರೆದ ಗಜಪತಿಯ ದುರ್ದೃಷ್ಟವನ್ನು ಶಪಿಸಿ, ತಿಮ್ಮರಸನ ಚಾಣಕ್ಯತನಕ್ಕೆ ಕೊಡಲಿ ಪೆಟ್ಟು ಹಾಕುವೆನೆಂದು ಪ್ರತಿಜ್ಞೆ ಮಾಡಿದ ಶಿರಶ್ಚಂದ್ರ ಮಹಾಪಾತ್ರ.

೧೫

ಸಿಂಹಾದ್ರಿಯ ನೆತ್ತಿಯಮೇಲೆ ಬರೆಸಿದ್ದ ಶಿಲಾಲೇಖನವನ್ನು ಅಳಿಸಿ ಆ ಮೂಲಕ ಕೃಷ್ಣದೇವರಾಯನ ಕ್ಷಾತ್ರತೇಜಕ್ಕೆ ಮಸಿ ಬಳಿದಮೇಲೆ ನರಹರಿಪಾತ್ರನು ನೇರ ಮಲೆಬೆನ್ನೂರಿಗೆ ಬಂದನು. ದಕ್ಷಿಣಪಥದಲ್ಲಿ ಆವನು ಸಾಧಿಸಬೇಕಾಗಿದ್ದ ಕಾರ್ಯಗಳು ಅನೇಕವಾಗಿದ್ದವು. ದಕ್ಷಿಣ ದೇಶದ ಮಾಂಡಲೇಶ್ವರರನ್ನು ಕೃಷ್ಣದೇವರಾಯನಮೇಲೆ ಎತ್ತಿಕಟ್ಟುವ ದಿಕ್ಕಿನಲ್ಲಿ ಮಾಡಬೇಕಾಗಿದ್ದ ಆನೇಕ ಕಾರ್ಯಗಳು ನರಹರಿಪಾತ್ರನ ಬರವಿಗಾಗಿ ಕಾದು ಕುಳಿತಿದ್ದವು.

ತನ್ನ ಪಾಲಿನ ಕಾರ್ಯ ಮುಗಿಸಿ ಬಂದ ನರಹರಿಪಾತ್ರನು, ಮುಂದಿನ ಮೆಟ್ಟಲನ್ನು ತುಳಿಯಲು ಮಲೇಬೆನ್ನೂರಿಗೆ ಬಂದನು. ಕಾರಣ, ಮಲೇಬೆನ್ನೂರಿನಲ್ಲಿದ್ದ ಆತ್ಮವಿಶ್ವಾಸಿ ವೀರ ವೀರಭದ್ರದೇವನೊಡನೆ ಚರ್ಚಿಸಿ ಅನಿಲಾನಿಲ ಸಂಯೋಗದಿಂದ ಕಾರ್ಯೋನ್ಮುಖನಾಗಲು.

ಎಂತಲೇ, ವೀರಭದ್ರದೇವನನ್ನು ಕಂಡು, ನಡೆದ ಸರ್ವವನ್ನು ಸವಿವರವಾಗಿ ಹೇಳಿದನು—ಕೇಳುತ್ತಿದ್ದಂತೆಯೇ ವೀರಭದ್ರದೇವನಿಗೆ ಅತೀವ ದುಃಖವಾಯ್ತು. ತನ್ನ ತಮ್ಮನೂ ಮತ್ತು ತಾಯಿಯೂ ಕೃಷ್ಣ ದೇವರಾಯನಲ್ಲಿ ಸೆರೆಯಾಳುಗಳಾಗಿರುವುದು ಸಿಡಿಲಪ್ರಹಾರದಂತೆ ಅವನ ವ್ಯಕ್ತಿತ್ವಕ್ಕೆ ಕುಂದು ತಂದಿತ್ತು. ಮೇಲಾಗಿ ತನ್ನ ತಂದೆ ಪ್ರತಾಪರುದ್ರ ಗಜಪತಿ ಮತ್ತು ಪ್ರೀತಿಯ ಸುಕೋಮಲ ಸಹೋದರಿಯರ ಪರಾರಿಯ ಪರಿಣಾಮಕಾರಿಯಾಗಿ ಪ್ರಹರಿಸಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ರಾಯನ

ವಿಜಯಮಾಲೆ—ಅವನ ಕುತ್ತಿಗೆಗೆ ನೇಣುಕಟ್ಟಿದಂತಾಗಿತ್ತು. ಎಂತಲೇ ಕ್ರೋಧೋನ್ಮತ್ತನಾಗಿದ್ದ ವೀರಭದ್ರದೇವ.

ಮೊದಲೇ ಪ್ರತೀಕಾರ ತೃಷೆಯಿಂದ ಜೀಯುತ್ತಿದ್ದ ನರಹರಿಗೆ ಇವನ ಉದ್ವೇಗ, ಕ್ರೋಧ—ಒಡಿಮದ್ದಿಗೆ ಬೆಂಕಿ ತೋರಿದಂತಾಯ್ತು. ಎಂತಲೇ ಹೇಳಿದ.—ಕೃಷ್ಣದೇವರಾಯನನ್ನು ಎಂತಾದರೂ ಮಾಡಿ ಹಿಮ್ಮೆಟ್ಟಿಸಲೇ ಬೇಕೆಂದು ಮತ್ತು ಸೆರೆಯಲ್ಲಿರುವವರನ್ನು ಬಿಡಿಸಲೆತ್ನಿಸಬೇಕೆಂದು. ವೀರ ಭದ್ರದೇವನಿಗೆ ಅದು ಒಮ್ಮೆಲೇ "ಸರಿ" ಎಂದು ಕಂಡುಬಂದರೂ ಕೂಡಲೇ ಅವರಿಗೆ ಅದನ್ನು ಸಾಧಿಸುವ ದಾರಿ ಮಾತ್ರ ದುರ್ಗಮವಾಗಿತ್ತು.

ವೀರರೂ, ಚತುರರೂ ಆದ ಇವರಿಗೆ ಈ ದುರ್ಗಮವಾದ ಸಮಸ್ಯೆ ಯನ್ನು ಬಿಡಿಸುವುದು ಅಷ್ಟು ಕಠಿಣವಾಗಲಿಲ್ಲ. ನರಹರಿಪಾತ್ರನೇ ಸೂಚಿಸಿದ.

'ಕೃಷ್ಣದೇವರಾಯನಿಂದ ಯಾವವಿಧದಿಂದಲಾದರೂ ಯಾವ ರೂಪ ದಿಂದಲಾದರೂ ತೊಂದರೆಗೊಳಗಾಗಿದ್ದ ಅವನ ಸಾಮಂತ ರಾಜರನ್ನು ಎತ್ತಿಕಟ್ಟಿ ವಿದ್ರೋಹವನ್ನು ಆರಂಭಿಸುವುದೆಂದು ಮತ್ತು ಈ ಮಧ್ಯೆ ರಾಯನ ಸೆರೆಯಲ್ಲಿರುವ ಮಹಾರಾಣಿಯವರನ್ನು ಮತ್ತು ಯುವರಾಜನನ್ನು ಸಂಚುಮಾಡಿ ತಪ್ಪಿಸಿಕೊಂಡು ಬರಲೇರ್ಪಡಿಸುವುದೆಂದು.

"ಆಡಿಸ್ವು ಸುಲಭವಾದರೂ ಮಾಡುವುದು ಮಹಾಕಠಿಣ"

—ಸಂಶಯ ಪಿಶಾಚಿಯಿಂದಾವೃತನಾದ ವೀರಭದ್ರದೇವ ಅದರ ಬಗ್ಗೆ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಹೇಳಿದ.

"ಮನವಿದ್ದಲ್ಲಿ ಮಹಾದೇವ. ಮಾಡಿಯೇಮಡಿದೇನು. ಖಂಡಿತ ಕಾರ್ಯಸಾಧಿಸಲೇಬೇಕು. ನಮ್ಮವರು ರಾಜ್ಯಲಕ್ಷ್ಮಿಯಿಂದ ದೂರಾಗಿ ಸೆರೆ ಯಾಳುಗಳಾಗಿರುವಾಗ ಮಾಡದಿದ್ದರೆ ಹೇಡಿಗಳಂತೆ"

—ಎಂದು ಹುರುಪಿನಲ್ಲಿ ನುಡಿದ ನರಹರಿ. ತನ್ನ ಪ್ರತಿಮಾತಿನಲ್ಲೂ ಜೀವಕಳೆಯನ್ನು ತುಂಬುತ್ತಾ

ಕೊನೆಗೆ ನರಹರಿಯು ವಿದ್ರೋಹಕ್ಕೆ ಸಾಮಂತರನ್ನು ಸಂಗ್ರಹಿಸಲು ಸಿದ್ಧವಾಗತಕ್ಕದೆಂದು ನಿರ್ಧರವಾಯಿತು ನರಹರಿ ತನ್ನ ಕಾರ್ಯಕ್ಕೆ ಹೊರಟ.

ಆಟಕ್ಕೆ ತಕ್ಕ ಬೈರೂಪವನ್ನು ಅಳವಡಿಸಿಕ್ಕೊಂಡು ಬೈರಾಗಿಯಾಗಿ, ವ್ಯಾಪಾರಿಯಾಗಿ, ಯಾಂತ್ರಿಕನಾಗಿ, ಮಾಂತ್ರಿಕನಾಗಿ ವಿವಿಧ ದೇಶಗಳನ್ನು ಸುತ್ತಿ, ಕಡೆಗೆ ಶಿವಸಮುದ್ರದ ಮಾಂಡಲೇಶ್ವರ ವೀರಒಡೆಯ. ಯಲಹಂಕ, ಕೆಳದಿ, ಚಿತ್ರದುರ್ಗ, ಹರಪನಹಳ್ಳಿಯ ನಾಯಕರು ಮತ್ತು ಪಾಳೆಯಗಾರರನ್ನು, ಗುತ್ತಿ ಮತ್ತಿತರ ಸಂಸ್ಥಾನೀಕರೂ ಮತ್ತು ಇನ್ನು ಕೆಲವರನ್ನು ತನ್ನ ಕಡೆಗೆ ಬಹು ಪ್ರಯಾಸಪಟ್ಟು ಒಲಿಸಿಕೊಂಡು ವಿದ್ರೋಹ ಬಲವನ್ನು ಬಲಗೊಳಿಸಿದ್ದ. ಮತ್ತೆ ಕೆಲವರು ತಮ್ಮ ಸಹಾನುಭೂತಿಯನ್ನು ತಾಟಸ್ಥ್ಯ ರೀತಿಯಿಂದಿದ್ದು ವ್ಯಕ್ತಪಡಿಸುವುದಾಗಿ ಭರವಸೆ ಇತ್ತರು.

ಇತ್ತ ಕೃಷ್ಣದೇವರಾಯನು ತನ್ನ ದೃಷ್ಟಿಯನ್ನು ಕಟಕಪುರಿಯ ಕಡೆಗೆ ಹರಿಸಿದ್ದನು.

ಇದರ ಇಂಗಿತವನ್ನರಿತ ವೀರಭದ್ರದೇವನು ಕಟಕಪುರಿ ಕೈಬಿಟ್ಟರೆ ಸಂಪೂರ್ಣ ಉತ್ಕಲವೇ ಉರುಳಿದಂತೆ ಎಂದು ಚಿಂತಿಸಿ ಅದಕ್ಕುಪಾಯವಾಗಿ ಕೃಷ್ಣದೇವರಾಯನು ಕಟಕಪುರಿಯ ಮುತ್ತಿಗೆಗೆ ಹೊರಡುವ ವೇಳೆಗೆ ತಾನು ವಿಜಯನಗರದತ್ತ ವಿದ್ರೋಹದ ತಂಡನೊಡನೆ ತ್ವರಿತವಾಗಿ ನುಗ್ಗುವುದು ಎಂದು ನಿರ್ಧರಿಸಿ ಕುಳಿತಿದ್ದ

ಆದರೆ ಅದಕ್ಕಿದ್ದ ಅಡಚಣೆ ಒಂದೇ !

ಸೆರೆಯಲ್ಲಿರುವವರು ಹೊರಬರಬೇಕಾಗಿತ್ತು ! ಕಾರಣ ತನ್ನ ಕ್ರಿಯೆ ಕೃಷ್ಣದೇವರಾಯನಮೇಲೆ ಕೆರಳುವಂತಹ ಪ್ರತಿಕ್ರಿಯೆಯನ್ನುಂಟುಮಾಡಿ ಆದರ ಪ್ರತಿರೂಪವಾಗಿ—ಇವರುಗಳು ಕಷ್ಟಪಟ್ಟಾರೆಂಬ ಭಾವನೆಯಿಂದ ಈ ಕುತ್ತಿನಿಂದ ಕಳೆಯಲೂ ನರಹರಿಯೇ ನಡೆಯಬೇಕಾಯ್ತು ! ಆದರೆ, ಆ ಕೆಲಸವನ್ನು ಶ್ರದ್ಧೆ, ಸಂತಸಗಳಿಂದಲೇ ಮಾಡಲು ಸಿದ್ಧನಿದ್ಧ—ನರಹರಿ. ಕಾರಣ, ತನ್ನ ಶೌರ್ಯವನ್ನು ನಿಷ್ಕಲ್ಮಶತೆಯನ್ನು ಲಕ್ಷ್ಮಿದೇವಿಯ ಇದಿರು ಪ್ರದರ್ಶಿಸಿ ಆಕೆ, ಹಿಂದೆ ತನ್ನ ಬಗ್ಗೆ ತಳೆದಿದ್ದ ಭಾವನೆಯನ್ನು ಕಳೆಯಲು ಅದಕ್ಕೆ ಹಿನ್ನೆಲೆಯಾಗಿ ಪ್ರತಿಫಲವಾಗಿ ಮೆಚ್ಚಿದರಾಣಿ ಮಗಳನ್ನು ತನಗೆ ಮದುವೆಮಾಡಿಕೊಡುವ ಮನ ಮಾಡಬಹುದೆಂದು. ಎಂತಲೇ ವಿಜಯನಗರಕ್ಕೆ ಬಂದಿಳಿದ. ಅರಮನೆಯಲ್ಲಿ ಇಚ್ಛಾಸ್ವಾತಂತ್ರ

ಗಳಾದ ವೀರರಿವರಿಗೆ ಈ ಬಂಧನ ಸ್ವರ್ಣಪಂಜರವಾಗಿತ್ತು. ಮನಃ ಕಷಾಯವಾದರೂ ತಮ್ಮ ಕ್ರೋಧವನ್ನು ವ್ಯಕ್ತಪಡಿಸಲಾಗದೆ ಒಳಗಿರುವ ಆತ್ಮಾಭಿಮಾನಾಗ್ನಿಯಿಂದ ಬೆಂದು ಬಸವಳಿದಿದ್ದರು. ಅವರ ಪಾಲಿಗಿದ್ದ ರಾಜೋಪಚಾರ ಎತ್ತಿನಕೊಂಬಿನ ಮೇಲೆ ಕುಳಿತಿದ್ದ ಸೊಳ್ಳೆಯಂತಾಗಿತ್ತು.

ಸಾಮ್ರಾಜ್ಯವನ್ನು ಸಂರಕ್ಷಿಸುವುದಕ್ಕಿಂತ ಸಾಮ್ರಾಟವನ್ನು ಸುರಕ್ಷಿತ ದಿಂದ ಸಂತೋಷದಿಂದ ಸಾಕಿಕೊಂಡು ಬರುವುದೇ ಉತ್ತಮ ಧರ್ಮ ವೆಂದರಿತಿದ್ದ ಮಹಾರಾಣಿ ತನ್ನ ಪ್ರಾಣಪ್ರಿಯನನ್ನು ಬಹುವಾಗಿ ಪ್ರೀತಿಸು ತ್ತಿದ್ದಳು. ಅಂತೆಯೇ ಅದೇ ನಿರ್ವಾಜ್ಯ ಪ್ರೇಮವನ್ನು ಮಹಾರಾಜ ನಿಂದಲೂ ನಿರೀಕ್ಷಿಸಿದ್ದಳು. ಅದನ್ನರಿತಿದ್ದ ಗಜಪತಿ ಅವಳ ಮನಕ್ಕೆ ನೋವಾಗದಂತೆ ನಡೆಯುತ್ತಿದ್ದ.

ಆದರೆ, ಜಗನ್ಮೋಹಿನಿಯ ವಿವಾಹ ವಿಷಯದಲ್ಲಿ ಮಾತ್ರ ವಿವಾದ ವಾಗಿ—ಮಹಾರಾಣಿಗೆ ಮನನೊಂದು ಕೊಂಡಪಲ್ಲಿಯತ್ತ ಹೊರಟಿದ್ದಳು. ತನ್ನ ಕೋಪವನ್ನು ಅಸಮ್ಮತಿಯನ್ನು ವ್ಯಕ್ತಪಡಿಸಲು,

ದೈವ ಅವಳನ್ನು ಅಲ್ಲಿಯೇ ಅಗಲದೆ ಇರುವಂತೆ ಚಿರವಿರಹಿ ಯನ್ನಾಗಿಸಿತು—ಕೃಷ್ಣದೇವರಾಯನ ಸೆರೆಯಾಳಾಗಿರುವಂತೆ,

ಸ್ತ್ರೀ ಸಹಜವಾದ ಸ್ಥಾನಮಾನ ಐಶ್ವರ್ಯಾದಿಗಳ ಬಲ ಅವಳನ್ನು ಮುತ್ತಿ ಸ್ಫುರದ್ರೂಪಿಯಾದ ಜಗನ್ಮೋಹಿನಿಯನ್ನು ಏನೂ ಇಲ್ಲದ ತಬ್ಬಲಿ ನರಹರಿಗೆ ವಿವಾಹ ಮಾಡುಲು ಅಡ್ಡಿನಿಂತು ಈ ಕಬ್ಬಿಣದ ತೆರೆಯನ್ನೆಳೆ ದಿತ್ತು—ವಿಧಿರೂಪದಲ್ಲಿ.

ಇತ್ತ ಕೃಷ್ಣದೇವರಾಯನು, ಗಜಪತಿಯು ತನ್ನನ್ನು ಅವಮಾನ ಪಡಿಸಿದ್ದಕ್ಕೆ ಪ್ರತಿಜ್ಞೆಮಾಡಿದ್ದುದು ಕರ್ಣಾಕರ್ಣಿತವಾಗಿ ಸೆರೆಯಲ್ಲಿಟ್ಟ ರಾಣಿಯ ಕಿವಿಗೂ ಬಿದ್ದು ಅವಳನ್ನು ಮಹತ್ತಾದ ಆಲೋಚನೆಗೆ ಗುರಿ ಮಾಡಿತ್ತು. ಅದೇ ಯೋಚನೆ ಅವಳನ್ನು ಬಹುವಾಗಿ ಪೀಡಿಸುತ್ತಿತ್ತು.

ಮಹಾರಾಣಿಯ ಆಲೋಚನೆ ಇಂತಾದರೆ ಯುವಕ ಯುವರಾಜ ನಾದ ರಾಮಚಂದ್ರ ದೇವನ ಆಲೋಚನಾರೀತಿಯೇ ಬೇರೆಯದಾಗಿತ್ತು.

ಸ್ವಭಾವತಃ ವೀರನಾದ ಅವನು ತನ್ನ ತೋಳಬಲಪ್ರದರ್ಶನಕ್ಕಾಗಿ ಹಾತೊರೆಯುತ್ತಿದ್ದ. ಆದರೆ ವಿಧಿ ಅವನನ್ನು ಇಲ್ಲಿ ತಂದು ಕಟ್ಟಿಹಾಕಿತ್ತು.

ಗಜಪತಿಯು ಗತಿಯನ್ನು ಕೇಳಿದಾಗಿನಿಂದ ಅವನ ಕ್ರೋಧ ಕೆರಳಿ ಕೆಂಡಾಮಂಡಲವಾಗಿತ್ತು.

ಆದರೆ ಏನುಮಾಡಲೂ ಶಕ್ತನಾಗಿರಲಿಲ್ಲ, ಕಾರಣ ಅಧೀನತೆ !

ಈ ಅಧೀನತೆ ತಪ್ಪಿದರೆ.... .... ....ತಪ್ಪಿದರೆ ಎಂದು ಉದ್ವೇಗ ಉದ್ರೇಕಗಳಿಂದ ಪರಿತಪಿಸುತ್ತಿದ್ದನು.

ಅದೇ ವೇಳೆಗೆ ಸರಿಯಾಗಿ ನರಹರಿಯೂ ಅದೇ ಪ್ರಯತ್ನವನ್ನು ನಡೆಸುತ್ತಿದನು.

ರೋಗಿ ಬಯಸಿದುದೂ ವೈದ್ಯಹೇಳಿದುದೂ ಸರಿಯಾಗಿತ್ತು ಆದರೆ ಅವರ ಯೋಚನೆಯ ರೊಟ್ಟಿ ಜಾರಿ ತುಪ್ಪಕ್ಕೆ ಬೀಳಬೇಕಾಗಿತ್ತು.

ಅದನ್ನು ನಿರ್ವಿಘ್ನವಾಗಿ ನೇರವೇರಿಸಲು ನರಹರಿ ನಿರತನಾಗಿದ್ದ. ಅದರ ಪ್ರತೀಕವಾಗಿ ಮೊದಲನೆಯ ಶುಭದ ನಾಂದಿಯಾಗಿ ನರಹರಿ ತಾನು ಈ ಕಾರ್ಯಕ್ಕಾಗಿ ಬಂದಿರುವ ಸಮಾಚಾರವನ್ನು ಓರ್ವ ವೃದ್ಧೆಯ ಮೂಲಕ ಕಳುಹಿಸಿಕೊಟ್ಟ—ಹೊನ್ನಿನ ಆಸೆಯ ಮಿಗವಾಗಿ ವೃದ್ಧೆ ಕಾರ್ಯನಿರ್ವಹಿಸಲಾಸಕ್ತಳಾಗಿ ಬಂದು—ಹೇಳಿದಳು.

ಇಂತಹ ಸಮಾಚಾರದ ಬಗ್ಗೆ ಅತ್ಯುತ್ಸುಕಳಾಗಿದ್ದ ಲಕ್ಷ್ಮೀದೇವಿಗೆ ಆ ವೃದ್ಧೆಯ ವಾಕ್ಕು ಕೇಳಿ ಆನಂದದ ಅಲೆಯಮೇಲೆ ಮಲಗಿದಂತಾಗಿತ್ತು ಹೀಗೆ ಕೆಲವು ದಿನ ಕಳೆದಮೇಲೆ ಅವರ ಬಿಡುಗಡೆಯ ಬಗ್ಗೆ ಈ ವೃದ್ಧೆಯ ಮುಖಾಂತರ ವಿಚಾರ ವಿನಿಮಯ ಮಾಡಿಕೊಂಡು ಮುಂದಿನ ತಮ್ಮ ನಡವಳಿಕೆಗಳನ್ನು ಸರಿಪಡಿಸಿಕೊಂಡರು.

ಮೌನಗೌರೀವ್ರತ ಅವರಿಗೆ ಆ ಸಮಯಕ್ಕೆ ಆಸರೆಯಿತ್ತಿತು. ಮೌನ ಗೌರೀವ್ರತವನ್ನು ಆಚರಿಸಲು ನಿರ್ಧರಿಸಿ ಸೆರೆಮನೆಯ ಅಧಿಕಾರಿಗಳಿಗೆ ತಿಳಿಸಲಾಯ್ತು. ಅದಕ್ಕೆ ಬೇಕಾಗುವ ಪೂಜಾಸಾಮುಗ್ರಿಯಾದ ಹಣ್ಣು, ಹೂ, ಮಂಗಳದ್ರವ್ಯ, ಪೂಜಾಸಾಮುಗ್ರಿ ಇತ್ಯಾದಿಗಳು ಬ್ರಾಹ್ಮಣ ಮುತ್ತೈದೆಯರಿಗೆ ಕೊಡಲು ಅವಶ್ಯಕವಸ್ತುಗಳು, ವಡೆವೆ ಇತ್ಯಾದಿಗೂ ರಾಣಿಯ ಅಪೇಕ್ಷೆಯಂತೆ ಕಳುಹಿಸಲ್ಪಟ್ಟವು.

ಎಂದೂ ಏನನ್ನೂ ಆಶಿಸದಿದ್ದ ಈಕೆಯ ಆಕಾಂಕ್ಷೆಗೆ ಭಂಗಬಾರದಂತೆ ಸರ್ವರೀತಿಯಿಂದಲೂ ವ್ಯವಸ್ಥಿತವಾಗಿತ್ತು.

ಶುಭ ಮಂಗಳವಾರ ಮೌನವಾಗಿಯೇ ಪೂಜೆ ಆರಂಭವಾಯ್ತು. ಪ್ರಾತಃಕಾಲವೇ ಸೂರ್ಯೋದಯಕ್ಕೆ ಮುಂಚೆ ಎದ್ದು ತುಂಗಭದ್ರೆಯ ಸ್ನಾನ ಅನಂತರ ಹತ್ತರವರೆಗೆ ಪೂಜೆ—ಪೂಜೆಯಾದನಂತರ ದಾನಧರ್ಮ ಕಾರ್ಯಗಳು ಅನಂತರ ಲಘು ಆಹಾರ ಸ್ವೀಕಾರ. ರಾತ್ರಿ ದೈವಪ್ರೀತ್ಯರ್ಥ ವಾಗಿ ಉಪವಾಸ.

ಹೀಗೆಯೇ ಮೂರು ವಾರಗಳು ಸಾರೋದ್ಧಾರವಾಗಿ ಸುಗಮವಾಗಿ ಸಾಗಿತು. ರಾಣಿ ಲಕ್ಷ್ಮೀಬಾಯಿಯ ಬಗ್ಗೆ ಜನಕ್ಕೆ ಸಂಪೂರ್ಣ ಗೌರವ ಇದರಿಂದ ಉಂಟಾಯಿತು.

ಕಡೆಯ ಮಂಗಳವಾರ—ಮೌನಗೌರೀವ್ರತ ಮುಕ್ತಾಯವಾಗುವ ದಿನ. ಅದಕ್ಕಾಗಿ ಭರದಿಂದ, ಉತ್ಸಾಹದಿಂದ ಸಿದ್ಧತೆಗಳು ಸಾಗಿದವು.

ಭರದಿಂದ ಸಿದ್ಧತೆಗಳು ಇತ್ತಲೂ ಸಾಗಿದವು !

ಇಂದೂ ಎಂದಿನಂತೆ ಮಹಾರಾಣಿ ಸ್ನಾನಕ್ಕೆ ಹೊರಟಿದ್ದಳು. ಆದರೆ ಎಂದಿನ ನಿಷ್ಠೆಯಿಂದಲ್ಲ—ಮತ್ತೊಂದು ಮಹದಾಶಯದ ನಿರೀಕ್ಷಣೆಯಲ್ಲಿ—ನಿರ್ಧಾರದಂತೆ.

ಇಂದು ಸ್ನಾನಕ್ಕೆ ಸ್ವಲ್ಪ ಹೆಚ್ಚು ಸೆಳೆತವಿರುವೆಡೆಗೆ ಹೋದರು. ಹೋದರು—ಹೊರಟೇ ಹೋದರು !

ಆದರೆ ಅವರೊಡನೆ ನಿತ್ಯ ಬರುತ್ತಿದ್ದ ಪರಿಚಾರಕಿಗೆ ಕೇಳಿ ಬಂದದ್ದು 'ದುಢುಂ' ಎಂಬ ಶಬ್ದ, ಮತ್ತೆ ಅವಳ ಪರಿವಾರಕ್ಕೆ ಬರುತ್ತಿದ್ದವರ ಕಿವಿಗೆ ಈ ಪರಿಚಾರಿಕೆಯ ಚೀತ್ಕಾರ—'ರಾಣಿಯವರು ಕಾಲುಜಾರಿದರು' 'ಉಳಿಸಿ' ಎಂಬ ಏಕಪ್ರಖರವಾದ ಆರ್ತಸ್ವರ.

ಸೈನಿಕರು ಈಜುಬಿದ್ದು—ಶ್ರಮಪಟ್ಟು ಹೊಳೆಯಿಂದ ಶವವನ್ನು ಎಳೆದುತಂದರು. ಆದರೆ ಅವರ ನಿಷ್ಠೆ ವ್ಯರ್ಥವಾಗಿತ್ತು.

ತಂದುದನ್ನು ಸೂಕ್ಷ್ಮವಾಗಿ ಪರೀಕ್ಷಿಸಿದಾಗ ಅದು ಮಹಾರಾಣಿಯ ಶವವಾಗದೆ ಅವರ ರೂಪನ್ನು ಕೆತ್ತಿದ್ದ ಮರದ ತುಂಡಾಗಿತ್ತು !

ಅಲ್ಲಿದ್ದವರನ್ನು ದಿಗ್ಭ್ರಮೆಗೊಳಿಸಿತ್ತು ! ಅವರ ಕುತೂಹಲವನ್ನು ಕೆರಳಿಸಿತ್ತು ! ಕೆಲವರ ಕ್ರೋಧಕ್ಕೂ ಅವಕಾಶವಿತ್ತಿತ್ತು !

ಇದು ದೊರೆತದ್ದರಿಂದ ಹಲವರು ಹಲಬಗೆ ಊಹಿಸಲು ಅವಕಾಶ

ಮಾಡಿಕೊಟ್ಟಿತ್ತು. ಕೆಲವರು ರಾಣಿಯ ಚಲನವಲನದ ಬಗ್ಗೆ ತ್ವರಿತವಾಗಿ ಗೂಢಚಾರರನ್ನು ಅಟ್ಟಬೇಕೆಂದು ಸೂಚಿಸಿದರು.

ಅಂತೆಯೇ ಕೆಲವರು ಗೂಢಚಾರರು ಅವಳನ್ನು ಹುಡುಕಲು ಹೊರಟರು.

ರಾಣಿ ಲಕ್ಷ್ಮೀಬಾಯಿ ನರಹರಿಪಾತ್ರನ ಯೋಜನೆಯಂತೆ ನೀರಿನಲ್ಲಿ ಕೊಚ್ಚಿಹೋದಂತೆ ನಟಿಸಿ, ಸ್ನಾನಘಟ್ಟಕ್ಕೆ ತನ್ನ ಜೊತೆಯಲ್ಲಿ ಬಂದಿದ್ದವರನ್ನು ಮೋಸಗೊಳಿಸಿ—ನರಹರಿಪಾತ್ರನು ನಿಯಮಿಸಿದ್ದ ದೋಣಿಯ ಮೂಲಕ ಶತ್ರುಶಿಬಿರದಿಂದ ನದಿಯ ಮತ್ತೊಂದು ಕಡೆಗೆ ಹೊರಟಿದ್ದಳು.

## ೧೬

ದೋಣಿಯು ಸುರಕ್ಷಿತವಾಗಿ ನಿರೀಕ್ಷಿಸಿದ್ದ ಸ್ಥಳವನ್ನು ಮುಟ್ಟಿತು. ಆದರೆ, ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ಕಾಲವನ್ನು ತೆಗೆದುಕೊಂಡಿತ್ತು. ಕಾಲ ಸಾವಕಾಶವಾದದ್ದರಿಂದ ನರಹರಿಪಾತ್ರನಿಗೆ ಅನುಮಾನಾಸ್ಪದವಾಗಿ ಮನಸ್ಸು ಕೋಲಾಹಲವಾಗಿತ್ತು.

ಆದರೆ, ಅಂಬಿಗ ಮರಗಳ ಮರೆಯಲ್ಲಿ ಹೊರಗಿನವರಿಗೆ ದೋಣಿಯ ಚಲನವಲನ ಕಾಣದಂತೆ ತರಬೇಕಾಗಿದ್ದರಿಂದ ಸಾವಕಾಶವಾಗಿತ್ತು.

ದೋಣಿಯಿಂದ ಮಹಾರಾಣಿಯನ್ನು ಸುರಕ್ಷಿತವಾಗಿ ತಂದೊಪ್ಪಿಸಿದ ಅಂಬಿಗನಿಗೆ ಪ್ರಪ್ರಥಮವಾಗಿ ಕೃತಜ್ಞತೆ ಸೂಚಿಸಿ ಅವನಿಗೆ ಅಧಿಕವಾಗಿ ಸಂಭಾವನೆ ಕೊಟ್ಟು, ಮಹಾರಾಣಿಯವರ ಪಾದಗಳಿಗೆರಗಿದ—ನರಹರಿ.

ಆನಂದಾಶ್ರುಗಳು ಧಾರಾಕಾರವಾಗಿ ನರಹರಿಯ ಶಿರದಮೇಲೆ ಬಿದ್ದಿತು. ರಾಣಿ ಅವನನ್ನು ಎತ್ತಿ ನಿಲ್ಲಿಸಿದಳು. ಕೃತಜ್ಞತೆಯನ್ನು ಕಣ್ಣು ಪ್ರತಿಬಿಂಬಿಸುತ್ತಿದ್ದವು.

ಎಷ್ಟು ಸುರಕ್ಷಿತವಾಗಿ ಬಂದು ಸೇರಿಕೊಂಡರೋ ಅಷ್ಟೆ ಅಪಾಯವೂ ಅವರನ್ನು ಕಾದಿತ್ತು—ಪ್ರತಿ ಕ್ಷಣದಲ್ಲೂ ಆದಕ್ಕಾಗಿ ಅಪಾಯವನ್ನೆದುರಿಸಲು ಯಾವರೀತಿಯ ಉಪಾಯವನ್ನಾದರೂ ಮಾಡಿ ಪಾರಾಗಬೇಕಾಗಿತ್ತು.

ಇದೆಲ್ಲವನ್ನರಿತಿದ್ದ ನರಹರಿ ಪೂರ್ವಭಾವಿಯಾಗಿಯೇ ಎಲ್ಲವನ್ನೂ ಏರ್ಪಡಿಸಿದ್ದ—

ದೋಣಿಯಿಂದಿಳಿದು ದೋಣಿಯನ್ನು ಮರಗಳ ಮಧ್ಯೆ ಅಡಗಿಸಿ ಮರ ಗುಡ್ಡಗಳ ನಡುವೆ ಯಾರಿಗೂ ಸುಳಿವು ಸಿಕ್ಕದಂತೆ ಸಾಗಿದರು. ತಪಸ್ವಿಗಳಲ್ಲದೆ ಮತ್ತಾರೂ ಅಲ್ಲಿ ಹೆಚ್ಚಾಗಿ ವಾಸಿಸಿರಲಿಲ್ಲ. ಅಪರೂಪವಾಗಿ ಹಳ್ಳಿಗರು ಅಲ್ಲಿ ಅಡ್ಡಾಡುತ್ತಿದ್ದರು. ಇಂತಹ ನಿರ್ಜನಪ್ರದೇಶ ಅವರಿಗೆ ಅನುಕೂಲವೇ ಆಗಿ ಪರಿಣಮಿಸಿತ್ತು. ಅಂಜನಾದ್ರಿಯ ಬೆಟ್ಟಗಳ ಸಾಲು—ಸುಗ್ರೀವಖಿಲ್ಲೆ, ವಾಲಿಯಭಂಡಾರ, ಸೀತೆಯ ಸೆರಗು ಮುಂತಾದ ಬೆಟ್ಟಗಾಡಿನ ಪ್ರದೇಶಗಳು ಅವರಿಗೆ ಅಪ್ರತ್ಯಕ್ಷವಾಗಿ ಆಶೀರ್ವಾದವಾಗಿದ್ದವು.

ಆ ದಾರಿಯಲ್ಲೇ ಸುಮಾರು ನೂರು ಗಜದೂರ ನಡೆದರು. ಅಲ್ಲಿಯೇ ತಪಸ್ವಿಗಳೋರ್ವರ ಆಶ್ರಮ. ನರಹರಿಪಾತ್ರ ಹೊರಗೆ ಯಾರೂ ಇಲ್ಲದಿರುವುದನ್ನರಿತು ಧೈರ್ಯತಂದುಕೊಂಡು ಒಳಕ್ಕೆ ನಡೆದು, ಒಳಗಿದ್ದ ಸನ್ಯಾಸಿಗಳಿಗೆ ಕೂಲಂಕಷವಾಗಿ ಎಲ್ಲವನ್ನು ವಿವರಿಸಿ ಆಶ್ರಯಬೇಡಿ ಪ್ರಾಣಭಿಕ್ಷೆ ನೀಡಬೇಕೆಂದು ಬೇಡಿದ.

ದಯಾಮಯರಾದ ಅವರು, ಅವರುಗಳನ್ನು ಸಂರಕ್ಷಿಸಲು ಆಶ್ವಾಸನವಿತ್ತರು—ತಾನು ರಾಮಚಂದ್ರ ದೇವನನ್ನು ಇಲ್ಲೇ ಬಂದು ಸಂಧಿಸಲು ತಿಳಿಸಿದ್ದ. ದೈವಬಲದಿಂದ ಅವರೂ ಒಪ್ಪಿ ಆಶ್ರಯ ನೀಡಿದುದು ಸರ್ವ ರೀತಿಯಲ್ಲೂ ಉತ್ತಮವಾಗಿತ್ತು.

ಆದರೆ ಮುಂದಿನ ಘಟನೆಗಳು ಮಾತ್ರ ಬಿರುಗಾಳಿಯಂತೆ ಹೆಮ್ಮರಗಳನ್ನು ತಲಕೆಳಗು ಮಾಡಿದ್ದವು. ತರಗೆಲೆಗಳು ಮಾತ್ರ ಉಳಿಯಬಹುದಾಗಿತ್ತು.

ರಾಮಚಂದ್ರದೇವ ! —ಉಳಿದು ಬರಬೇಕಾಗಿದ್ದ ಯುವರಾಜ. ಉಳಿದು ವಿಜಯನಗರದ ಕೋಟೆಯಿಂದ ತಪ್ಪಿಸಿಕ್ಕೊಂಡು ನಡೆದು ಬಂದಿದ್ದ. ಈಕಡೆ ಮೊದಲೇ ನರಹರಿ ಮಹಾರಾಣಿ ರಾಮಚಂದ್ರದೇವರು ನಿರ್ಧರಿಸಿದ್ದಂತೆ ಮಹಾರಾಣಿ ತನ್ನ ಪಾಲಿನ ಕರ್ತವ್ಯ ಮಾಡಿ ಸುರಕ್ಷಿತಳಾದಳು. ಆದರೆ ಯುವರಾಜ ಮಾತ್ರ ದುಡುಕಿದ. ನಿರ್ಧರಿಸಿದ್ದ ಸ್ಥಳಕ್ಕೆ ನಡೆದು ಹೋದರೆ ಅಪಾಯವಾದೀತೆಂದು ಬಗೆದು, ತನ್ನ ದಾರಿಗೆ ಎದುರಾಗಿ ಬರುತ್ತಿದ್ದ ರಾವುತನೋರ್ವನ ಮೇಲೆರಗಿ ಅವನನ್ನು ಕೆಡವಿ ಆ

ಕುದುರೆಯ ಮೇಲೇರಿ ಹೊರಡಲು ನಿಶ್ಚಯಿಸಿದ. ಅಂತೆಯೇ ಮಾಡಿಯೂ ಮಾಡಿದ.

ನೆಲಕ್ಕುರುಳಿದ ರಾವುತನ ಆರ್ತನಾದ ಹಿಂದಿದ್ದ ಹಲವು ರಾವುತರನ್ನು ಆಹ್ವಾನಿಸಿತ್ತು. ಸ್ಥಳಕ್ಕೆ ಬಂದ ರಾವುತರುಗಳ ಇದಿರು ರಾಮಚಂದ್ರದೇವ ಹೋರಾಡಲಾರದೆ ಮತ್ತೆ ಸೆರೆ ಸಿಕ್ಕಿದ್ದ—ದುಡುಕಿನ ಪ್ರತಿಫಲದಿಂದ.

ನರಹರಿ ನಿರೀಕ್ಷಿಸುತ್ತಿದ್ದ ಗೂಢಚಾರ ತಂದ ವರದಿಯನ್ನು ಕೇಳಿ ಸ್ಥಂಭೀಭೂತನಾಗಿ ತನ್ನನ್ನು ಶಪಿಸಿಕೊಂಡ ನರಹರಿ.

ಇಲ್ಲೇಯಿದ್ದರೆ ಅಪಾಯವಾಗಬಹುದೆಂದು ಊಹಿಸಿ ಬೇರೆಡೆಗೆ ಬದಲಾಗಲು ಬಯಸಿದ.

ಸಾವು ಬದುಕುಗಳ ಹೋರಾಟ ನಡೆದಿತ್ತು—ಮುಂದೆ !

ತಪ್ಪಿಸಿಕೊಂಡಿದ್ದ ರಾಣಿಯ ಬೆನ್ನಟ್ಟಿ ಬಂದ ಸೈನಿಕರು ನರಹರಿ ಪಾತ್ರ ಹುದುಗಿಸಿದ್ದ ದೋಣಿಯನ್ನು ಪತ್ತೆಮಾಡಿದ್ದರು. ಅದರಿಂದಾಗಿ ಅವರುಗಳು ಇಲ್ಲೇ ಅಡಗಿರಬಹುದೆಂದು ಊಹಿಸಲು ಶಕ್ಯವಾಯಿತು.

ಎಂತಲೇ ಅವರಿದ್ದ ಆಶ್ರಮಕ್ಕೇ ಬಂದು ಹೊರಗಿದ್ದ ಹುಡುಗನನ್ನು ವಿಚಾರಿಸಿ—ಗುರುಗಳನ್ನು ವಿಚಾರಿಸಲು ಬಂದಿದ್ದರು. ಕಾದು ಕುಳಿತಿದ್ದು ಪೂಜೆ ಇತ್ಯಾದಿಗಳನ್ನು ಮುಗಿಸಿ ಬಂದ ಗುರುಗಳಿಗೆ ನಮಸ್ಕರಿಸಿ ನಿಂತರು. ಪಾದಕ್ಕೆರಗಿದವರನ್ನು ಆಶೀರ್ವದಿಸಿ ಕುಶಲವನ್ನು ಪ್ರಶ್ನಿಸಿದರು—ಗುರುಗಳು ಶಾಂತವದನರಾಗಿ.

ಕೈಕಟ್ಟಿ ನಿಂತಿದ್ದ ಸೈನಿಕರು ನಡೆದಿದ್ದ ವಿದ್ಯಮಾನಗಳನ್ನು ವರ್ಣಿಸಿ—ಅವರ ಆಶ್ರಯದಲ್ಲಡಗಿರಬಹುದೆಂಬ ಸಂಶಯದಿಂದ ಬಂದುದಾಗಿ ತಿಳಿಸಿದರು.

ಎಲ್ಲವನ್ನು ಆಲಿಸಿದ ಗುರುಗಳು 'ನಮ್ಮ ಆಶ್ರಮದಲ್ಲಿ ಅಂತಹವರು ಯಾರೂ ಬಂದಿಲ್ಲ. ನಮ್ಮ ಮಾರ್ಗದಲ್ಲೂ ನಾವು ಕಂಡಿಲ್ಲ. ಇತ್ತ ಯಾರ ಸುಳಿವೂ ಇಲ್ಲವಲ್ಲ.'

—ಎಂದರು ಗುರುಗಳು ನಿರ್ವಿಕಾರ ಸ್ವರದಿಂದ.

"ಗುರುಗಳು ಮನ್ನಿಸಬೇಕು. ಕಾರ್ಯಗೌರವ ನಮ್ಮನ್ನು ಈ ಮಾತನ್ನಾಡಲು ಪ್ರೇರೇಪಿಸುತ್ತಿದೆ—ಅಜ್ಞರಾದ ನಮ್ಮನ್ನು ಪ್ರಾಜ್ಞರಾದ ತಾವು ತಪ್ಪು ತಿಳಿಯಬಾರದು. ನೀವುಗಳು ಒಮ್ಮೆ ತಮ್ಮ ಕುಟೀರವನ್ನು ಒಳಗಡೆ ನೋಡಲು ಅವಕಾಶ ಕೊಡಬೇಕು."

—ದೈನ್ಯದಿಂದ ವ್ಯಾವಹಾರಿಕವಾಗಿ ನುಡಿದ ದಳನಾಯಕ.

"ಆಗಬಹುದು ನೋಡಿಕೊಳ್ಳಿ" ಎಂದರು ಗುರುಗಳು ನಿರ್ವಾಹವಿಲ್ಲದೆ—ಒಳಗೆಲ್ಲ ಪರೀಕ್ಷಿಸಿ ಇಲ್ಲವೆಂದು ನಿರ್ಧರಿಸಿಕೊಂಡು ಇನ್ನೊಂದು ಕೋಣೆಯನ್ನು ಹುಡುಕಲು ಹೊರಟಾಗ ಗುರುಗಳು ನುಡಿದರು ನಿರ್ದಾಕ್ಷಿಣ್ಯವಾಗಿ—

"ಅದು ನನ್ನ ಪೂಜಾಗೃಹ. ನೀವು ಒಳಗೆ ಬಂದು ಪರೀಕ್ಷಿಸಲು ಇಚ್ಛಿಸಿದರೆ ಮಡಿಯುಟ್ಟು ಪರೀಕ್ಷಿಸಬಹುದು."

—ಕೆಂಡದ ಬಿಸಿಯಿತ್ತು ಅವರ ಮಾತಿನಲ್ಲಿ. ನಿರ್ವಾಹವಿಲ್ಲದೆ ದಳನಾಯಕ ಹೇಳಿದ—

"ಅಪರಾಧವನ್ನು ಕ್ಷಮಿಸಿ—ಬರುತ್ತೇವೆ" ಎಂದು. "ಹೋಗಿಬನ್ನಿ. ದೇವರು ನಿಮಗೆ ಒಳ್ಳೆಯದನ್ನು ಮಾಡಲಿ."

—ಎಂದು ಅನುಗ್ರಹಿಸಿದರು ಗುರುಗಳು. ದೀರ್ಘ ನಿಟ್ಟುಸಿರೊಂದು ಹೊರಬಂತು!

ಒಳಗಿನಿಂದಲೂ ಅದೇರೀತಿಯ ಭಾವನೆಯ ಬಿಸಿ—ಗಾಳಿ ಬೀಸಿತ್ತು ಹೊರಟುಹೋದ ದಳನಾಯಕನ ಕರುಳೂ ಕತ್ತರಿಸುತ್ತಿತ್ತು.

ಅವನೂ ನಿಟ್ಟುಸಿರ್ಗರೆಯುತ್ತಿದ್ದ!

ಒಬ್ಬರದು ಕರ್ತವ್ಯ ಪಾಲನೆಯ ರೂಪಾದರೆ—ಮತ್ತೊಬ್ಬರದು ಜೀವನದ ಉಳಿವಾಗಿತ್ತು—ಮಗದೊಬ್ಬರದು ಕಾರ್ಯಗೌರವದ ಹೊರೆಯಾಗಿತ್ತು.

ದೇವರ ಹಿಂದೆ ಅವಿತು ಎಲ್ಲವನ್ನು ಕೇಳಿ ತಲ್ಲಣಿಸಿ ತಲೆದೂಗಿದ್ದರು. ಮಹಾರಾಣಿ ಮತ್ತು ನರಹರಿ ಪಾತ್ರ. ಅವರು ಹೊರಹೊರಟೊಡನೆ ಯೆ

ಇವರುಗಳೂ ಈಚೆಗೆ ಬಂದರು. ಮಾತನಾಡಿ ಗುರುಗಳಿಗೆ ಕೃತಜ್ಞತೆಯನ್ನರ್ಪಿಸಲು.

ಮಾತನಾಡುವ ಮುಂಚೆಯೇ ಅವರ ಕರುಳು ಬಾಯಿಗೆ ಬಂದಿತ್ತು. ಗುರುಗಳೂ ಗರಬಡಿದವರಂತೆ ಗರುಡಗಂಬದಂತೆ ನಿಂತರು.

ಒಂದೇ ಘಳಿಗೆ ಪುನಶ್ಚ ಪ್ರಜ್ಞೆಯನ್ನು ಪಡೆದರು—

ಹೊರಗೆ ಕೇಳಿಬಂದ ಕುದುರೆಗಳ ಖುರಪುಟದ ಧ್ವನಿ ಅವರ ಕುತ್ತಿಗೆಗಳಿಗೆ ತುತ್ತಾಗಿ ಕಂಡು, ನೇಣುಹಗ್ಗದಿಂದ ಪಾರಾದಂತಾಗಿತ್ತು ಧ್ವನಿ ಮಾಯವಾದಾಗ—

ಇಬ್ಬರೂ ಗುರುಗಳ ಪಾದಕ್ಕೆರಗಿ—ತಮ್ಮಪ್ರಾಣವನ್ನುಳಿಸಿಕೊಟ್ಟು ದಕ್ಕೆ ಅವರಿಗೆ ಕೃತಜ್ಞತೆಯನ್ನು ವ್ಯಕ್ತಪಡಿಸಿ ಇನ್ನು ಇಲ್ಲಿರುವುದು ತರವಲ್ಲ ವೆಂದು ತಿಳಿದು ಗುರುಗಳ ಆಶೀರ್ವಾದವನ್ನು ಪಡೆದು ಹೊರಹೊರಟರು— ಪೊಟ್ಟನೂರಿನಕಡೆಗೆ.

ಮಧ್ಯೆ ಅನೇಕ ಹಳ್ಳಿಗಳಲ್ಲಿ ತಂಗಿ, ಪೊಟ್ಟನೂರಿನ ಕಡೆಗೆ ಕಷ್ಟ ವನ್ನು ಲೆಕ್ಕಿಸದೆ ಹೊರಟಿದ್ದರು—ದಿನದ ಕೆಲಸ ಮುಗಿದ ಕುದುರೆ ಮನೆಗೆ ಓಡುವ ಓಟದಂತೆ—

ಆದರೆ ವಿಧಿಯರಾದ್ರತೆ ಅವರನ್ನು ಇನ್ನೂ ಕೆಣಕುತ್ತಿತ್ತು. ತಲ್ಲಣಿಸಿ ತಣ್ಣಗಾಗಿತ್ತು. ಅವರ ಬಿಸಿರಕ್ತ—ಕಷ್ಟಗಳ ಸಂಕೋಲೆಯ ನೇಣು ಇವರನ್ನು ಇನ್ನೂ ಎಳೆಯುತ್ತಿತ್ತು.

ಹಳ್ಳಿಯೊಂದರಲ್ಲಿ ಇವರು ತಂಗಿದಾಗ, ವಿಜಯನಗರದ ಗೂಢಚಾರರ ಬಳಗ ಅಲ್ಲೇ ಇತ್ತು. ಹೊಸದಾಗಿ ಬಂದಿದ್ದ ಇವರುಗಳನ್ನು ಅನುಮಾನದ ಮೇಲೆ ಇವರ ಚಲನದ ಬಗ್ಗೆ ಗಮನವಿಟ್ಟು ಪರೀಕ್ಷಿಸುತ್ತಿದ್ದರು.

ಒಮ್ಮಿಂದೊಮ್ಮೆಲೇ ಬಂದು, ಹೊಸದಾಗಿ ಬಂದಿದ್ದ ಈ ಇಬ್ಬರನ್ನು ಬಂಧಿಸಿ ಕೃಷ್ಣದೇವರಾಯನಿಗೊಪ್ಪಿಸಲು ಕೊಂಡೊಯ್ದರು.

ಅನಿರೀಕ್ಷಿತವಾಗಿ ಒದಗಿಬಂದಿದ್ದ ಈಘಟನೆ ಅವರುಗಳನ್ನು ಅತ್ಯಂತ ಖೇದಪಡಿಸಿತ್ತು. ಬೆಂಕಿಯ ಮೇಲಿಟ್ಟ ಬಾಳೆಯ ಎಲೆಯಂತೆ—ಕಂದಿದರು ಅವರು. ಬೆಂದು ಬಸವಳಿದಿದ್ದರು—ಅವರ ಶ್ರಮ ಕುಂಬಾರನಿಗೊಂದು ವರ್ಷ—ಕೋಲಿಗೊಂದು ನಿಮಿಷವೆಂಬಂತಾಗಿತ್ತು.

ಆದರೆ ಅವರು ನಿರೀಕ್ಷಿಸಿದ್ದು ಈರೀತಿಯಾದರೆ—ಆದದ್ದು ಬೇರೆ ಯಾಯ್ತು ? ನಾನೊಂದು ನೆನೆದರೆ—ತಾನೊಂದು ನೆನೆವುದು.

ನಾನಿತ್ತಲೆಳೆದರೆ—ತಾನತ್ತಲೆಳೆವುದು—ಎಂಬಂತೆ ದೈವ ಅವರಿಗೆ ಬೆಂಬಲಿಸಿತ್ತು.

ಅದೇ ಮಾರ್ಗವಾಗಿ ಗಜಪತಿಯನ್ನು ಅರಿಸಿಕ್ಕೊಂಡು ಅಲೆಯು ಯುತ್ತಿದ್ದ ಶಿರಶ್ಚಂದ್ರನೂ ದೈವವಶಾತ್ ಅದೇ ಹಳ್ಳಿಯಲ್ಲಿಗೆ ಬಂದ. ಮಹಾರಾಣಿ ಮತ್ತು ನರಹರಿಪಾತ್ರನನ್ನು ಕೊಂಡೊಯ್ಯುತ್ತಿದ್ದುದನ್ನು ಕಂಡು, ಕೆರಳಿ—ಅವರ ಬೆಂಗಾವಲಿಗೆ ಹೋಗುತ್ತಿದ್ದ ಕೆಲ ಸೈನಿಕರ ಮೇಲೆರಗಿ—ಸೋಲಿಸಿ—ಮಹಾರಾಣಿ ಮತ್ತು ನರಹರಿಯನ್ನು ಕುತ್ತಿನಿಂದ ಪಾರುಮಾಡಿದ್ದ—ಶಿರಶ್ಚಂದ್ರ—

ಈ ಘಟನೆ ಶಿರಶ್ಚಂದ್ರ—ನರಹರಿಯನ್ನು ಭದ್ರ ಬಾಂಧವ್ಯವನ್ನು ಬೆಳೆಸಿಕೊಳ್ಳುವ ಸಹಾಯಕವಾಯ್ತು—

ಒಂದೇ ನಾವೆಯಲ್ಲಿ ತೇಲುತ್ತಿದ್ದ ಅವರು ಒಂದಾದರು—ಎಲ್ಲರೂ ಪೊಟ್ಟನೂರಿನತ್ತ ಧಾವಿಸಿದರು—ವಿಜಯನಗರದ ಗಡಿಯನ್ನು ಸುರಕ್ಷಿತವಾಗಿ ದಾಟಿ—

ಅಲ್ಲಿ !

ಪೊಟ್ಟನೂರಿನ ಕೋಟೆಯಮೇಲೆ—! ಹೂವು, ಹಾವಾಗಿತ್ತು ಸಾವಿರ ಸಿಡಿಲುಗಳು ಒಟ್ಟಿಗೇ ಅವರಮೇಲೆ ಎರಗಿದಂತಾಗಿತ್ತು—ಕಣ್ಣು ಕೋರೈಸಿ, ಉರುಳಿಬೀಳುನಂತಾಯ್ತು. ಆಸರೆಯೆಂದು, ಆಸಕ್ತಿಯಿಂದ ಒಂದೆಡೆಯೇ ಬರಿದಾಗಿ ಅವರ ಪಾಲಿಗೆ ವಿಷವರ್ಷ ಕರೆದಂತಾಗಿತ್ತು !

ಆನೋಟ! ಪೊಟ್ಟನೂರಿನ ಕೋಟೆಯಮೇಲೆ ಹಾರಾಡುತ್ತಿದ್ದ ವಿಜಯನಗರದ ಗರುಡಧ್ವಜ ಒಂದು ಕ್ಷಣವೂ ಅವರನ್ನು ನಿಲ್ಲಗೊಡದೆ, ಕಟಕಪುರಿಯತ್ತ ಧಾವಿಸುವಂತೆ ಮಾಡಿತು.

# ೧೭

ಪೊಟ್ಟನೂರನ್ನು ಗೆದ್ದ ಕೃಷ್ಣದೇವರಾಯ ಅಲ್ಲಿ ಗಜಪತಿ ಮತ್ತು ಜಗನ್ಮೋಹಿನಿ ಮುಂತಾದವರಿಗಾಗಿ ಬಹಳವಾಗಿ ಹುಡುಕಿಸಿದನು. ಆದರೆ ಅವನ ಪ್ರಯತ್ನಕ್ಕೆ ಪ್ರತಿಫಲ ದೊರೆಯಲಿಲ್ಲ, ಅವರ ಚಲನವಲನಗಳ ಬಗ್ಗೆ ಊಹಾವಸತಿಗಳು ಮಾತ್ರ ಬರುತ್ತಿದ್ದವು. ಅವರುಗಳು ಕಟಕಪುರಿಯಲ್ಲಿ ಅಡಗಿರಬಹುದೆಂದು—

ಕಟಕಪುರಿಯ ಮೇಲೆ ಏರಿ ಹೋಗಲು ಆಸಕ್ತನಾಗಿದ್ದರೂ, ಉತ್ಸಾಹನಾಗಿದ್ದರೂ ರಾಯನು ಈಗ ಹಾಗೆಮಾಡಲಿಚ್ಛಿಸದೆ ಪೊಟ್ಟನೂರಿನಲ್ಲಿಯೇ ತನ್ನ ವಿಜಯೋತ್ಸವವನ್ನು ಆಚರಿಸಲು ನಿಶ್ಚಯಿಸಿದನು. ಇದರಿಂದಾಗಿ ದಣಿದ ಸೈನಿಕರಿಗೆ ಅಲ್ಪ ವಿಶ್ರಾಂತಿ ಕೊಟ್ಟಂತಾಗುವುದಲ್ಲದೆ ಎಲ್ಲರೂ ತಮ್ಮ ಜಡತೆಯನ್ನು ಕಳೆದುಕೊಂಡು ಮುಂದಿನ ಯುದ್ಧಕ್ಕೆ ಸಂಪೂರ್ಣಸಿದ್ಧರಾಗಿರಲೂ ಉತ್ತಮವಾಗಿತ್ತು.

ವಿಜಯೋತ್ಸವ ಸಮಾರಂಭ, ಸಾಮ್ರಾಟ ಕೃಷ್ಣದೇವರಾಯನೇ ಸ್ವತಃ ಆಚರಿಸುವ ಹಬ್ಬ—ಒಡನಾಡಿಗಳಿಗೆ ಹಬ್ಬ. ವೀರರಿಗೆ ತಕ್ಕ ಸನ್ಮಾನ ಇದರಿಂದಾಗಿ ವಿಜಯದ ಸಮಾರಂಭ ಅತ್ಯಂತ ಯಶಸ್ವಿಯಾಗಿ ನಡೆಯಲು ಏರ್ಪಾಟಾಯಿತು.

ವಿಜಯದ ಸಂಕೇತವಾಗಿ ಪ್ರಥಮತಃ ಸುಮಾರು ಹದಿನೆಂಟು ಅಡಿಗಳ ವಿಜಯಸ್ತಂಭ ನಿರ್ಮಾಣವಾಯಿತು. ಸೈನಿಕದಳದವರಿಗೆ ಅವರವರಿಗೆ ತಕ್ಕಂತೆ ಬಹುಮಾನ ವಿನಿಯೋಗವೂ ಆಯ್ತು. ಅಗ್ರ ಪಂಕ್ತಿಯ

ಬಹುಮಾನ ಮರ್ಯಾದೆಗಳೊಡನೆ ಪೆಮ್ಮಸಾನಿ ರಾಮಲಿಂಗ, ರಂಗಪತಿ ರಾಜು ಮತ್ತು ಗೋವಿಂದರಾಜು ಮತ್ತು ಧನಂಜಯ ಇವರಿಗೆ ಕೊಡಲ್ಪಟ್ಟಿತು.

ಸ್ವಯಂಶಕ್ತಿಯಿಂದ ಸಾಮರ್ಥ್ಯದಿಂದ ಅತ್ಯಂತ ಶ್ರದ್ಧಾಭಕ್ತಿಗಳಿಂದ ಸೇವೆಮಾಡಿ ಮುಂದೆ ಬಂದ ಮೈಸೂರಿನ ತರುಣ ಸಾಮಾನ್ಯ ಸೈನಿಕನಿಂದ ದಳಪತಿ ಸ್ಥಾನವನ್ನು ಗಳಿಸಿದ್ದ ಧನಂಜಯನನ್ನು, ಸ್ವಯಂ ರಾಯನೇ ಮುಕ್ತ ಕಂಠದಿಂದ ಹೊಗಳಿ ಅವನ ಸೇವೆಯನ್ನು ಪ್ರಶಂಸಿಸಿದನು. ಅದಕ್ಕೆ ತಕ್ಕಂತೆ ಅವನಿಗೆ ಬಹುಮಾನಗಳನ್ನು ಕೊಟ್ಟು ಹಾಸನದ ಕೆಲವು ಗ್ರಾಮಗಳನ್ನು ವೀರಮಾನ್ಯವಾಗಿ ಕೊಟ್ಟನು. ಇದಲ್ಲದೆ ಐದು ಮದದಾನೆ ಐನೂರು ಜಾತ್ಯ ಅಶ್ವಗಳು ಮತ್ತು ನವರತ್ನ ಖಚಿತ ಕಠಾರಿಯನ್ನು ಕೈಗಿತ್ತು ಆಶೀರ್ವದಿಸಿದನು.

ಬೆಟ್ಟಗೊಂಡನಹಳ್ಳಿ ಎಂಬ ಗ್ರಾಮವನ್ನು ಅವನ ಹೆಸರಿನಿಂದಲೇ ನಾಮಕರಣಮಾಡಿ ಧನಂಜಯಪುರವೆಂದು ಹೆಸರಿಸಿದನು. ಆದರೆ, ಇವನ್ನೆಲ್ಲ ಪಡೆದ ಧನಂಜಯ ಮತ್ತೊಂದು ಕನಸು ಕಾಣುತ್ತಿದ್ದ! ಅವನು ಈ ರೀತಿ ಮುಂದೆ ಬರಲು ಹುರಿದುಂಬಿಸಿದ ತನ್ನ ತಂದೆಯನ್ನು ಕಾಣುತ್ತಿದ್ದ ಅವನ ತಂದೆ!

ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಸಣ್ಣ ಸಂಸ್ಥಾನದ ಒಡೆಯನಾಗಿದ್ದ ರಾಯ ಒಡೆಯ. ಉಮ್ಮತ್ತೂರಿನಮೇಲೆ ತನ್ನ ಅರಸು ಕೃಷ್ಣದೇವರಾಯ ದಂಡೆತ್ತಿ ಬಂದಾಗ ವೀರನಂತೆ ಹೋರಾಡಿ ಕಾಲು ಕಳೆದುಕೊಂಡು ಹಿಂದಿರುಗಿದ್ದ ಯುದ್ಧದಲ್ಲಿ. ಅವನ ಗಂಡುಗಲಿತನಕ್ಕೆ ಮೆಚ್ಚಿ ಕೃಷ್ಣದೇವ ರಾಯನು ಸಣ್ಣ ಸಂಸ್ಥಾನಾಧಿಪತಿಯನ್ನಾಗಿ ಮಾಡಿದ್ದ. ಆದರೆ ರಾಯ ಒಡೆಯನಿಗೆ ತೃಪ್ತಿಯಾಗಲಿಲ್ಲ.

ಇನ್ನೂ ಹೆಚ್ಚಿನ ಸೇವೆ ಮಾಡಲೆಂದು ತನ್ನ ಮಗನನ್ನು ಸಿದ್ಧಪಡಿಸಿ, ರಾಯನ ಸೈನ್ಯಕ್ಕೆ ಸೇರಿಸಿದ್ದ ರಾಜ ಒಡೆಯ. ಇದರಿಂದಾಗಿ ಅವನ ಕೀರ್ತಿಗೆ ಕಳೆ ಬಂದಿತ್ತು—ತಂದೆ ಕಂಡ ಕನಸನ್ನು ನನಸು ಮಾಡಿದ್ದ ಧನಂಜಯ. ಅವರನ್ನು ನೆನೆದು ಸರ್ವಗೌರವವನ್ನು ಅವರಿಗರ್ಪಿಸಿದುದು ಅಚ್ಚರಿಯಲ್ಲ!

ಅಂದಿನ ವಿಶೇಷ ಸಭೆಯಲ್ಲಿ ಕೃಷ್ಣದೇವರಾಯನು ಧನಂಜಯನನ್ನು ಆಹ್ವಾನಿಸಿದ್ದ !

ಮಲೆಬೆನ್ನೂರಿನ ಕಡೆಯಿಂದ ಬರುತ್ತಿದ್ದ ವಾರ್ತೆಗಳ ಒಡಕು ಶಬ್ಧ ಅವನನ್ನು ಯೋಚನೆಗೆ ಈಡುಮಾಡಿತ್ತು.

ಸೆರೆಸಿಕ್ಕಿದ್ದ ಗಜಪತಿಯ ಮಗ ವೀರಭದ್ರದೇವನನ್ನು ಸನ್ಮಾನಿಸಿ ಮಲೆಬೆನ್ನೂರಿನ ಮಂಡಲೀಕನನ್ನಾಗಿ ನಿಯಮಿಸಿದ್ದ ರಾಯ. ಅದರದು ಹಾವಿಗೆ ಹಾಲೆರೆದಂತಾಗಿತ್ತು. ರಾಯನ ಔದಾರ್ಯಕ್ಕೆ ಋಣಿಯಾಗದೆ ತನ್ನ ಛಲವನ್ನೇ ಸಾಧಿಸಲು ಹೊರಟಿದ್ದ ವೀರಭದ್ರದೇವ ವಿದ್ರೋಹದ ಚಳು ವಳಿಗೆ ಬೆಂಬಲಿಗನಾಗಿ, ಏಕೆ ಪ್ರಮುಖನಾಗಿಯೇ ನಿಂತು ರಾಯನನ್ನು ತೀವ್ರವಾಗಿ ಕೆರಳಿಸಿದ್ದ.

ಇದರ ಮೇಲೆ ಇತ್ತೀಚೆಗೆ ನಡೆದಿದ್ದ ರಾಣಿ ಲಕ್ಷ್ಮೀಬಾಯಿ ಮತ್ತು ರಾಮಚಂದ್ರದೇವರ ಪರಾರಿ, ಮತ್ತೆ ಸಿಕ್ಕಿಬಿದ್ದ ರಾಣಿಯನ್ನು ಮತ್ತು ನರಹರಿಪಾತ್ರನನ್ನು ಸಂರಕ್ಷಿಸಿದ ವಿಚಾರ, ಅವನನ್ನು ಬಹ-ವಾಗಿ ಯೋಚನೆ ಗೀಡುಮಾಡಿತ್ತು.

ಎಂತಲೇ ರಾಯನೂ ತಾನೇ ಯೋಚಿಸಿ ವೀರಭದ್ರದೇವನನ್ನು ನಿರ್ಧರಿಸಿ ನಿಗ್ರಹಿಸಿ ಧನಂಜಯನನ್ನು ಆ ಕಾರ್ಯಕ್ಕೆ ನಿಯಮಿಸಲು ನಿರ್ಧರಿಸಿದ್ದ. ಕಾರಣ ನಿಷ್ಠ ಧನಂಜಯನು ವೀರನಾಗಿದ್ದರಿಂದ ಅವನಿಗೆ ಅಂತರಂಗದಲ್ಲಿ ನಾಲ್ಕು ಮಾತು ಹೇಳಿ ಕಾರ್ಯವನ್ನು ನಿರ್ವಹಿಸಿಯೇ ಬರಬೇಕೆಂದು ಆಜ್ಞಾಪಿಸಿದ್ದ. ರಾಯನ ತಂದೆ ತಾಯಿಯರನ್ನು ನೋಡುವ ನೆವದಿಂದ ಬೀಳ್ಕೊಡಲು ಸಾಧ್ಯಮಾಡಿಕೊಂಡ.

ತಂದೆ ತಾಯಿಯರನ್ನು ನೋಡಲು ಒಯಸಿದ್ದ ಧನಂಜಯನನ್ನು ರಾಯನು ಹೃತ್ಪೂರ್ವಕವಾಗಿ ಬೀಳ್ಕೊಟ್ಟಿದ್ದ ! ಅವನ ಪ್ರಯಾಣಕ್ಕೆ ಸರ್ವಾನುಕೂಲ ಕಲ್ಪಿಸಿಕೊಟ್ಟ,

ರಾಯನಿಂದ ಬೀಳ್ಕೊಂಡು ಧನಂಜಯ ತನ್ನ ಊರಿನತ್ತ ಹೊರಟು ತಂದೆತಾಯಿಯರನ್ನು ಕಂಡು, ತಾನು ಸಾಧಿಸಿದ ಸರ್ವವನ್ನು ಸವಿವರ ವಾಗಿ ಅವರಿಗೆ ಹೇಳಿ ಅವರ ಆನಂದಕ್ಕೆ ಮತ್ತು ಹೆಮ್ಮೆಗೆ ಕಾರಣನಾದ. ಅವರ ಆಶೀರ್ವಾದ ಹೃತ್ಪೂರ್ವಕವಾಗಿತ್ತು ಅವನ ಮೇಲೆ.

ಕಾರ್ಯಗೌರವದಿಂದ ಅಲ್ಲಿ ನಿಲ್ಲದೆ ಕಾರ್ಯೋನ್ಮುಖನಾದ ಧನಂಜಯ ಮಿತ ಪರಿವಾರದೊಡನೆ.

ಪರಿವಾರದವರೂ ಗಿರಾಕಿಗಳ ವೇಶದಲ್ಲಿ ಧನಂಜಯನಿಗೆ ನಡೆದ ವಿದ್ಯಮಾನಗಳನ್ನು ತಿಳಿಸುತ್ತಿದ್ದರು.

ಇತ್ತ ವೀರಭದ್ರದೇವನು ನರಹರಿಪಾತ್ರನಿಂದ ಬಂದ ವರ್ತಮಾನದ ಪ್ರಕಾರ ರಾಮಚಂದ್ರದೇವ ಇನ್ನೂ ಸೆರೆಯಲ್ಲಿರುವನೆಂದೂ, ರಾಣಿಮಾತ್ರ ಹೊರಬರಲು ಅವಕಾಶವಾಯಿತೆಂದೂ ತಿಳಿದು ಉದ್ವಿಗ್ನಗೊಂಡಿದ್ದ.

ರಾಯನು ವಿಜಯಸ್ಥಂಭ ನಿರ್ಮಿಸಿದ್ದು ಇವನ ತಲೆಯ ಮೇಲೆ ಕಲ್ಲು ಎತ್ತಿಹಾಕಿದಷ್ಟು ಕ್ರೋಧವನ್ನುಂಟುಮಾಡಿತ್ತು.

ಎಂತಲೇ, ತನ್ನ ವಿದ್ರೋಹದ ಚಳುವಳಿಗೆ ಬೆಂಬಲಿಗರಾದ ಚಿತ್ರದುರ್ಗದ ಮತ್ತಿ ತಿಮ್ಮಣ್ಣನಾಯಕ, ಉಮ್ಮತ್ತೂರಿನ ಮಲ್ಲರಾಯನ ಮಗ ರಾಜ ಒಡೆಯ, ಕೆಳದಿಯ ಚೌಡಪ್ಪನಾಯಕರು ಮತ್ತಿತರ ಸಣ್ಣ ಪುಟ್ಟ ಸಂಸ್ಥಾನಾಧಿಪತಿಗಳನ್ನು ಒಂದೆಡೆ ಸೇರಿಸಿ ಮುಂದಿನ ಕಾರ್ಯರಂಗವನ್ನು ನಿಶ್ಚಯಿಸಲು ಆಹ್ವಾನಿಸಿದ್ದ.

ವಿದ್ರೋಹದ ತಂಡದವರೂ ವೇಷಧಾರಿಗಳಾಗಿ ಮಲೆಬೆನ್ನೂರಿಗೆ ಬಂದಿದ್ದರು, ವಿಚಾರ ಮಥನ ಮಾಡಲು. ಇವರುಗಳ ವೈಯಕ್ತಿಕ ದ್ವೇಷ ರಾಯನ ಮೇಲೆ ಕತ್ತಿ ಕಟ್ಟುವಂತೆ ಮಾಡಿತ್ತು.

ನಿಶ್ಚಿತ ವೇಳೆಗೆ ಸರ್ವರೂ ಸೇರಿ, ವೀರಭದ್ರದೇವನೇ ಮೊದಲು ದಂಗೆ ಎದ್ದು ತನ್ನ ಸ್ವಾತಂತ್ರ್ಯತೆಯನ್ನು ಘೋಷಿಸುವುದೆಂತಲೂ ಅನಂತರ ವಿಜಯನಗರದತ್ತ ನುಗ್ಗಿ, ಕೃಷ್ಣದೇವರಾಯನನ್ನು ಸೋಲಿಸಿ, ಸೆರೆಯಲ್ಲಿರುವ ರಾಮಚಂದ್ರದೇವನನ್ನು ಬಿಡಿಸಿ ಮತ್ತು ಕೃಷ್ಣದೇವರಾಯ ತಮ್ಮಂದಿರಲ್ಲಿ ಒಬ್ಬನನ್ನು ರಾಯನ ಸ್ಥಾನಕ್ಕೆ ನೇಮಿಸುವುದೆಂತಲೂ ನಿಷ್ಕರ್ಷೆಯಾಯ್ತು. ವೀರಭದ್ರದೇವನು ದಂಗೆ ಎದ್ದಂದೇ ಇತರ ವಿದ್ರೋಹ ವರ್ಗದವರೂ ಅವರನ್ನು ಕೂಡಿಕೊಂಡು ಸಾಧಿಸುವುದೆಂದು ಅಂಗೀಕೃತಕಾರ್ಯವಾಗಿ ದಂಗೆಯನ್ನು ಉದ್ಘೋಷಿಸುವ ದಿನವೂ ಗೊತ್ತು ಮಾಡಲ್ಪಟ್ಟಿತು. ಹಾಗೆ ನಿರ್ಧರಿಸಿದನಂತರ ಅವರುಗಳು ತಮ್ಮತಮ್ಮೆಡೆಗಳಿಗೆ ಹೊರಟರು.

ಈ ಕಾರ್ಯಕ್ರಮವೂ ಅಲ್ಲಿ ಇಲ್ಲಿ ಸುತ್ತಾಡಿ ವಿಷಯ ಸಂಗ್ರಹಿಸು

ತ್ತಿದ್ದ ಧನಂಜಯನ ವಿಚಾರ ಕಿವಿಗೆ ಬಿತ್ತು. ಚಲನವಲನಗಳನ್ನು ಸೂಕ್ಷ್ಮವಾಗಿ ವೀಕ್ಷಿಸುತ್ತಿದ್ದ ಅವರಿಗೆ, ಇದು ಸಿಕ್ಕಿದ್ದು ಉತ್ತಮವೇ ಆಯ್ತು. ಎಂತಲೇ ಧನಂಜಯನಿಗೂ ವರದಿ ಮಾಡಿಬಿಟ್ಟರು.

ಪರಿಸ್ಥಿತಿ ವಿಷಮವಾಯಿತೆಂದರಿತ ಧನಂಜಯ ಕೂಡಲೆ ತನ್ನ ಭಟರನ್ನು ಕರೆಸಿ ಕಾರ್ಯೋನ್ಮುಖನಾದನು. ಬಳ್ಳಿಯಲ್ಲೆ ಬಾಡಿಸುವುದು ಒಳಿತೆಂದು,

ಮೊದಲೇ ವೀರಭದ್ರದೇವನ ಬಂಧನದಾಜ್ಞೆಯನ್ನು ತಂದಿದ್ದ ಧನಂಜಯನಿಗೆ ಅವನನ್ನು ಬಂಧಿಸಲು ಅವನಿಗೆ ಏನೂ ಅಪಾಯವಿರಲಿಲ್ಲ. ಆದರೂ ಹೆಚ್ಚಿಗೆ ಯಾವುದಕ್ಕೂ ಅವಕಾಶ ಕೊಡದೆ ಅರಮನೆಗೆ ಹೋಗಿ, ಕಾವಲು ಭಟರನ್ನು ಮತ್ತು ವೀರಭದ್ರದೇವನನ್ನು ಬಂಧಿಸಿ ಕೃಷ್ಣದೇವರಾಯನೆಡೆಗೆ ಕರೆದೊಯ್ದನು.

ರಾಯನಿಗೆ ಕಾರ್ಯಸಾಧನೆಯ ವಿಚಾರವನ್ನು ಧನಂಜಯನೇ ಪೊಟ್ಟನೂರಿಗೆ ಹೋಗಿ ತಿಳಿಸಿದಾಗ, ವೀರಭದ್ರದೇವನನ್ನು ನೋಡಲೂ ಇಚ್ಛಿಪಡದೆ ಸೆರೆಯಲ್ಲಿಡಲು ಅಜ್ಞಾಪಿಸಿದನು. ಹಾಗೂ ಅವನನ್ನು ಹಿಡಿದು ತಂದ ಧನಂಜಯನನ್ನು ಹೊಗಳಿ ಬೀಳ್ಕೊಟ್ಟನು. ರಾಯನಿಗೆ ಸಂತಸ, ಖೇದಗಳು ಒಮ್ಮೆಲೆ ಆಯಿತು ಈ ಘಟನೆಯಿಂದ.

ದಂಗೆ ಏಳಲು ನಿಶ್ಚಯವಾದ ದಿನ ಉಳಿಕೆ ವಿದ್ರೋಹದ ತಂಡ ವೀರಭದ್ರನ ಆರಂಭವನ್ನು ನಿರೀಕ್ಷಿಸಿದರು ತಾವು ದಂಗೆ ಏಳಲು.

ಆದರೆ, ನಡೆದ ಸಂಗತಿಗಳನ್ನರಿತು ಗತ್ಯಂತರವಿಲ್ಲದೆ ರಾಯನೊಡನೆಯೇ ತಮ್ಮ ಹೆಚ್ಚಿನ ಆಪ್ತತೆಯನ್ನು ವ್ಯಕ್ತಪಡಿಸಿ ತಮ್ಮ ಘನತೆಯನ್ನು ಕಾಪಾಡಿಕೊಂಡರು.

ಅದೇವೇಳೆಗೆ ಶರನ್ನವಾರಾತ್ರಿ ಆರಂಭವಾಗಿತ್ತು. ವಿಜಯಗಳ ಮೇಲೆ ವಿಜಯವನ್ನು ಸಾಧಿಸಿದ್ದ ರಾಯನಿಗೆ ನವರಾತ್ರಿಯನ್ನು ವಿಜೃಂಭಣೆಯಿಂದ ಆಚರಿಸಬೇಕೆಂದು ಆಸೆಯಾಯಿತು.

ಆತನ ಮಾತಿನ ಪ್ರಕಾರವಾಗಿ ಪೊಟ್ಟನೂರು ಮದುವಣಗಿತ್ತಿಯಂತೆ ಕಾಂತಿಯುಕ್ತಳಾಗಿ ಶೋಭಿಸಿದಳು. ಎಲ್ಲ ಮನರಂಜನೆಯ ಕಾರ್ಯಕ್ರಮವೂ ಏರ್ಪಾಟಾಗಿತ್ತು. ವಿಶೇಷವಾಗಿ ಅರಮನೆಯ ಹೊರವಲಯದಲ್ಲಿ ಖಡ್ಗ ವಿದ್ಯಾಪ್ರದರ್ಶನವೇರ್ಪಟ್ಟಿತ್ತು.

ವೀರಭದ್ರದೇವನ ಪಾಲಿಗೆ ಮಾತ್ರ ಎಲ್ಲವೂ ವಿಷದುಣಿಸಾಗಿತ್ತು. ತನ್ನ ಆಶಯ, ಚಲ, ಬಲ, ಪ್ರತಿಜ್ಞೆ ಎಲ್ಲವೂ ಮಣ್ಣುಪಾಲಗಿತ್ತು. ಜೀವನದಲ್ಲಿ ಆತ ಇನ್ನಾವ ಬಯಕೆಯನ್ನು ಈಡೇರಿಸಿಕೊಳ್ಳಲೂ ಶಕ್ತನಾಗಿರಲಿಲ್ಲ.

ಹಾಲು ಕುಡಿವ ಹುಲಿಯಾಗುವ ಬದಲು ಬೇಟೆಗೆ ಬಲಿಯಾಗುವುದೇ ಒಳಿತೆಂಬ ಭಾವನೆ ಅವನಲ್ಲಿ ಮೂಡಿತ್ತು.

ಎಂತಲೇ ಖಡ್ಗ ಪ್ರದರ್ಶನವಿದೆ ಎಂದರಿತಾಗಿ ಆತ ಬಹಳವಾಗಿ ಸಂತೋಷಪಟ್ಟಿದ್ದ.

ತನ್ನ ಚಮತ್ಕಾರ ಪ್ರದರ್ಶನ ಮಾಡಬಯಸಿ ತನ್ನ ಶೌರ್ಯವನ್ನು ಪ್ರದರ್ಶಿಸಬಯಸಿದ್ದ ವೀರನಂತೆ! ಕ್ರಾಂತಿಗೆ ಮುನ್ನಬರುವ ಶಾಂತಿಯಂತಿತ್ತು ಅವನ ಹೃದಯ, ವ್ಯಕ್ತಿತ್ವ.

ಅವನು ಕಷ್ಟಪಟ್ಟು ಪ್ರದರ್ಶನಕ್ಕೆ ಅನುಮತಿ ದೊರಕಿಸಿಕೊಂಡಿದ್ದ, ಧನಂಜಯ ಮುಂತಾದ ತರುಣ ವೀರರನ್ನೊಲಿಸಿ, ಒಪ್ಪಿಸಿಕ್ಕೊಂಡು ಅವರ ಮೂಲಕ ತಿಮ್ಮರಸನನ್ನೊಪ್ಪಿಸಿಕೊಂಡಿದ್ದ ಆದರೆ ರಾಯನಿದಿರು ತಿಮ್ಮರಸನ ಮಾತು ನಿಷ್ಪ್ರಯೋಜಕವಾಗಿ, ರಾಯನು ಸಂಶಯಪಟ್ಟು ಅಪರಾಧಿಗೆ ಖಡ್ಗವನ್ನುಪಯೋಗಸಲು ಅನುಮಾನಿಸಿದಾಗ ತಿಮ್ಮರಸನ ಜಾಣ್ಮೆ ರಾಯನನ್ನೊಪ್ಪಿಸಲು ಸಾಧಕವಾಯ್ತು.

ತಾನು ಯಾವುದೇ ಕಾರಣದಿಂದಲೂ ಖಡ್ಗವನ್ನು ದುರುಪಯೋಗಪಡಿಸುವುದಿಲ್ಲವೆಂತಲೂ, ಖಡ್ಗ ಪ್ರದರ್ಶನಕ್ಕೆ ಮಾತ್ರ ಉಪಯೋಗಿಸುತ್ತೇನೆಂತಲೂ ವೀರಭದ್ರದೇವ ಪ್ರಮಾಣ ಪತ್ರ ಬರೆದಿತ್ತಾಗ ಮಾತ್ರ ಇನ್ನಾವ ದಾರಿಯೂ ಕಾಣದೆ ರಾಯನು ಒಪ್ಪಿಗೆ ಕೊಟ್ಟಿದ್ದ.

ಅಂದಿನ ಸಂಜೆ! ಖಡ್ಗವಿದ್ಯಾ ಪ್ರದರ್ಶನವನ್ನೀಕ್ಷಿಸಲು ಹೊರವಲಯದಲ್ಲಿ ಸಹಸ್ರಾರು ಸಂಖ್ಯೆ. ಇತ್ತ ವೀರರ ಕತ್ತಿಯ ಖಳ-ಖಳ ನಾದ. ರಾಯನು ಆಸನಾರೂಢನಾದ. ಪ್ರದರ್ಶಿತರಿಗೆ ಹುರುಪುಂಟಾಯ್ತು. ಮೊದಲು ಜಟ್ಟಿಗಳ ಕುಸ್ತಿಯಾದನಂತರ ಧನುರ್ವಿದ್ಯಾ ಪ್ರದರ್ಶನ, ಅಂತರ ವೀರಭದ್ರ ತನ್ನ ಸರದಿ ತೆಗೆದುಕೊಂಡ.

ಸಿಡಿಲುಗಳ ಸೀಳಿನಂತೆ ಎರಗಿತ್ತು ಅವನು ಝಳಪಿಸಿದ ಖಡ್ಗದ ಬೆಳಕು. ಮೊದಲು ತನ್ನ ಮೇಲೆರಗಿದ ಇಪ್ಪತ್ತು ಜನ ಸೈನಿಕರನ್ನು ಹಿಮ್ಮೆಟ್ಟಿಸಿ ಭೇಷ್, ಭಲೆ ಎನ್ನಿಸಿಕೊಂಡ.

ಎರಡೂ ಕೈಗಳಲ್ಲಿ ಖಡ್ಗ ಹಿಡಿದು ತನ್ನೆಡೆಗೆ ಎಸೆಯುತ್ತಿದ್ದ ಕಲ್ಲುಗಳನ್ನು ತಡೆದು ಸಂರಕ್ಷಿಸಿಕೊಂಡ.

ಹೊಡೆಯಲು ಬಂದವರ ಕತ್ತಿಯ ಹಿಡಿಯನ್ನೇ ಬೇರ್ಪಡಿಸಿ ಎಲ್ಲರೂ ನಗುವಿನ ಕಡಲಿನಲ್ಲೋಲಾಡುವಂತೆ ಮಾಡಿದ.

ಕೂದಲನ್ನು ಖಡ್ಗದಿಂದ ಛೇದಿಸಿ ದಿಙ್ಮೂಢರನ್ನಾಗಿಸಿದ. ಹೀಗೆ ಅನೇಕ ವೇಳೆ ಅನೇಕ ವಿಧದಲ್ಲಿ ತನ್ನ ಚಾತುರ್ಯವನ್ನು ಪ್ರದರ್ಶಿಸಿ ಎಲ್ಲರೂ ಅವನನ್ನು ಹೊಗಳುವಂತೆ ಮಾಡಿದ.

ಇನ್ನೊಂದೇ ಅವನ ಚಾತುರ್ಯ !

ಜನರನ್ನು ದುಃಖ ಸಾಗರದ ಸಮುದ್ರದಲ್ಲದ್ದಿದ್ದ ಸಾಹಸ ! ಒಮ್ಮೆ ರಂಗವನ್ನೆಲ್ಲಾ ಸುತ್ತಿ ಮಧ್ಯೆಬಂದು ನಿಂತು ವೀರೋನ್ಮತ್ತನಂತೆ ರುದ್ರ ನಾಟ್ಯವಾಡಿದ. ಶಾಂತವದನನಾಗಿ ಒಮ್ಮೆ ಖಡ್ಗವನ್ನು ಚುಂಬಿಸಿ, ಕೈ ಮುಗಿದ !

ಕತ್ತಿನ ಸುತ್ತಲೂ ತಿರುಗಿಸುತ್ತಾ ತಿರುಗಿಸುತ್ತಾ ಒಮ್ಮೆ ವೀರಗಲ್ಲಿನಂತೆ ನಿಂತ ವೀರಭದ್ರದೇವ.

ಕಾರ್ಯ ಮಿಂಚಿತ್ತು. ಕೈಲಿದ್ದ ಖಡ್ಗ ಛಳೀರ್ ಎಂದು ಕೆಳಗೆ ಬಿದ್ದಾಗಲೇ ಜನಕ್ಕೆ ಅರಿವು.

ನೋಟ ! ಆ ರುದ್ರ ಭಯಂಕರ ನೋಟ !

ರುಂಢವಿಲ್ಲದ ಮುಂಡ ರಕ್ತಸ್ನಾನಮಾಡಿದಂತೆ ಕೆಂಪಗೆ ನೋಡಿದವರ ಕಣ್ಣು ಕೋರೈಸುವಂತೆ ಕಗ್ಗಲ್ಲಿನಂತೆ ನಿಂತಿದೆ.

ರಾಯ ಕೂತಲ್ಲಿಂದಲೇ ಚೀತ್ಕರಿಸಿದ. ಜನ ಅಯ್ಯೋ ಎಂದು ಅಳಹತ್ತಿದರು. ತಿಮ್ಮರಸನ ಮುಖ ಕಪ್ಪಿಟ್ಟಿತು. ಧನಂಜಯಾದಿಗಳು ತಲೆತಗ್ಗಿಸಿದರು. ಯಾರೂ ಏನೂ ಮಾಡುವಂತಿರಲಿಲ್ಲ.

ಹಾಲು ಕುಡಿವ ಹುಲಿಯಾಗದೆ, ಬೇಟೆಗೆ ಬಲಿಯಾಗದೆ, ವೀರ ಮರಣವನ್ನಾಲಂಗಿಸಿ ಎಲ್ಲರ ಹೃದಯವನ್ನು ಆಕ್ರಮಿಸಿದ ವೀರ ವೀರ ಭದ್ರದೇವ. ಧನ್ಯ ವೀರಭದ್ರದೇವ.

ಚುಂಬನ! ಮೃತ್ಯುಚುಂಬನ ಮಾಡಿದ.

ನವರಾತ್ರಿಯ ಕೊನೆಯ ರಾತ್ರಿ ಕಾಳರಾತ್ರಿಯಾಗಿತ್ತು.

೧೮

ಪೊಟ್ಟನೂರನ್ನು ಬಿಟ್ಟು, ತನ್ನ ಅಂಗಗಳಾದ ಮಹಾಪಾತ್ರರುಗಳನ್ನು ಅನುಮಾನದಿಂದ ತೊರೆದು, ಯುದ್ಧರಂಗಕ್ಕೆ ಹೋಗದೆ ಹಿಮ್ಮೆಟ್ಟಿ, ಕಟಕ ಪುರಿಯತ್ತ ತನ್ನ ಕುಮಾರಿಯೊಡನೆ ಬಂದು ನಿಂತಿದ್ದ—ಪ್ರತಾಪರುದ್ರ ಗಜಪತಿ. ಸುರಂಗಮಾರ್ಗದ ಮೂಲಕ.

ತನ್ನ ಚಲನವಲನಗಳನ್ನು ಅತ್ಯಂತ ರಹಸ್ಯವಾಗಿಡಲಾಶಿಸಿ, ತಾನು ಅರಮನೆಯಿಂದ ಹೆಚ್ಚಿಗೆ ಹೊರಬರುತ್ತಲೇ ಇರಲಿಲ್ಲ. ಕಾರಣ, ತನ್ನ ಇರುವು ಶತ್ರುಗಳಿಗೆ ಗೊತ್ತಾಗಿ ಅವರು ಇಲ್ಲಿಗೂ ಬಂದು ಮುತ್ತಿ ತನ್ನನ್ನು ಹಿಂಸೆಪಡಿಸಿ ಕಷ್ಟಕ್ಕೀಡುಮಾಡುವ ಭಯ, ಅವನು ಹೀಗಿರಲು ಅವಶ್ಯಕ ವಾಗಿತ್ತು.

ಎಂತಲೇ ಗಜಪತಿ ತನ್ನ ಪುತ್ರಿ ಜಗನ್ಮೋಹಿನಿಯೊಡನೆಯೇ ಸದಾ ಕಾಲವೂ ಕಾಲ ಕಳೆಯುತ್ತಿದ್ದ. ಯೋಚನೆಯ ರಾಕ್ಷಸ ಅವನನ್ನು ಆಕ್ರಮಿಸಿದಾಗ ಮುಂದಿನ ಬಗ್ಗೆ ಮುಂಬೆಳಕನ್ನು ಚೆಲ್ಲಿ ನಂಬಿಕೆಯ ಆಯುಧದಿಂದ ನಿವಾರಿಸುತ್ತಿದ್ದಳು. ಇವಳಲ್ಲದೆ ಸಂತೋಷದ ಹೊಳೆ ಹರಿಯುತ್ತಿದ್ದಾಗ ತನ್ನ ನಗೆಯ ಜೇನಿನ ಸವಿಯನ್ನು ಬೆರೆಸುತ್ತಿದ್ದಳು. ತಿರಸ್ಕಾರ ತನ್ನ ಬಗ್ಗೆಯೇ ಬಂದಾಗ, ವೀರಪುತ್ರಿಯಂತೆ ವಿವೇಕವಾಣಿಯಿಂದ ಬೆಂಬಲಿಗಳಾಗಿ ಹುರಿದುಂಬಿಸುತ್ತಿದ್ದಳು. ಹೀಗೆ, ಪುತ್ರಿಯಾಗಿ, ಸ್ನೇಹಿತೆಯಾಗಿ, ಗುರುವಾಗಿ, ವಿವಿಧರೀತಿ ಅವನಿಗೆ ನೆರವಾಗಿದ್ದಳು.

ಹೀಗೆ, ಬಾಳು ಬರಡಾಗಿ, ನೊಂದು, ಬೆಂದು, ಬಸವಳಿದು, ಭಂಗ ಪಟ್ಟು, ಬಾಳ ಮರಳುಗಾಡಿನಲ್ಲಿದ್ದ ಗಜಪತಿಯ ಬಾಳಿಗೆ ಜಗನ್ಮೋಹಿನಿ ಜೀವರಸವಾಗಿ—ನೀರಿನೂಟೆಯಂತಿದ್ದಳು.

ಉತ್ಕಲದ ರಾಜ್ಯಲಕ್ಷ್ಮಿಯನ್ನು ತನ್ನ ತೋಳಬಲದಿಂದ ಮೆರೆಸುವ ಕನಸು ಕಾಣುತ್ತಿದ್ದ ಗಜಪತಿ.

ಹೀಗೆ ಕಾಲಯಾಪನೆಯಾಗುತ್ತಿದ್ದಾಗ ಒಂದು ದಿನ ಗಜಪತಿಯ ಜೀವನದಲ್ಲಿ ನವೋದಯವಾಗಿತ್ತು—ಸಂಗಮವಾಗಿ.

ಇತ್ತಲಾಗಿ ಕೃಷ್ಣದೇವರಾಯನು ಸೆರೆಯಿಂದ ತಪ್ಪಿಸಿಕೊಂಡು ಬಂದ ತಂಡ, ಪೊಟ್ಟನೂರಿನತ್ತ ಧಾವಿಸಿ ಬಂದಿದ್ದ ಜನ, ಅರೆಕ್ಷಣವೂ ಅಲ್ಲಿ ನಿಲ್ಲ ಲವಕಾಶವಿಲ್ಲದೆ ಕಟಕಪುರಿಯತ್ತ ನಡೆದು ಬಂದಿದ್ದರಷ್ಟೆ—ಗಜಪತಿಯ ಇರುವು ಇಲ್ಲಿಯೇ ಇರಬಹುದು ಎಂದು ಊಹಿಸಿ.

ಹಾಗೆ ಬಂದವರು ನೇರವಾಗಿ ಹೋಗಿ ಗಜಪತಿಯನ್ನು ಕಾಣಲಾರದೆ ಮೊದಲು ನರಹರಿಪಾತ್ರ ಮತ್ತು ರಾಣಿ ಲಕ್ಷ್ಮೀದೇವಿ ಗಜಪತಿಯನ್ನು ಕಾಣಲು ಬಂದಿದ್ದರು. ಆದರೆ ಗಜಪತಿಯೇ ಅವರುಗಳನ್ನು ಗುರುತಿಸು ವುದು ಕಷ್ಟವಾಗಿತ್ತು—ಕಾರಣ, ನರಹರಿಪಾತ್ರ ತನ್ನ ರೂಪನ್ನು ಮರೆಸಿ ಕೊಂಡಿದ್ದ—ಗಡ್ಡ ಮೀಸೆಗಳ ಮರೆಯಲ್ಲಿ.

ನರಹರಿಪಾತ್ರನನ್ನು ಕೂಡಲೆ ಕಂಡುಹಿಡಿದುಕೊಂಡಳು ಕುವರಿ ಜಗನ್ಮೋಹಿನಿ.

"ಅಪ್ಪಾಜಿ, ಯಾರಿವರು ಗಡ್ಡದ ಸನ್ಯಾಸಿಗಳು—ಗುರುತಿಸಿದಿರಾ ?" ಹಾಸ್ಯ, ಸಂತೋಷ ತುಂಬಿ ತುಳುಕುವ ಧ್ವನಿಯಲ್ಲಿ ಪ್ರಶ್ನಿಸಿದಳು ಗಜಪತಿಯತ್ತ ನೋಡಿ. ತಬ್ಬಿಬ್ಬಲಾದ ಗಜಪತಿ ಸೂಕ್ಷ್ಮವಾಗಿ ವೀಕ್ಷಿಸಿ ದಾಗ ಅವನ ಗುರುತು ಪತ್ತೆಯಾಗಿ 'ನರಹರೀ' ಎಂದು ಕೂಗಿದ ಉದ್ವೇಗದಿಂದ.

ತನ್ನನ್ನು ಕಂಡು ಗುರುತಿಸಿದ ಗಜಪತಿಯ ಪಾದಕ್ಕೆರಗಿದ ನರಹರಿ ಪಾತ್ರ. ಅವನ ಜತೆಯಲ್ಲಿದ್ದ ಹೆಂಗಸನ್ನು ನೋಡಿ ಸಂಶಯದಿಂದ ಪ್ರಶ್ನಿಸಿದ ಗಜಪತಿ.

"ಈಕೆ ಯಾರು ನರಹರಿ ?" ಕುತೂಹಲಿಯಾಗಿ ಕೇಳಿದ ಗಜಪತಿ.

"ಜೀವನದ ಅರ್ಧಭಾಗವನ್ನು ಜತೆಯಲ್ಲಿಯೇ ಸವೆಸಿ, ಸುಖದುಃಖಗಳನ್ನು ಒಟ್ಟಿಗೇ ಎದುರಿಸಿದ—ಬಾಳ ಗೆಳತಿಯನ್ನು ಮರೆಯಲೆಂತು ಪ್ರಭು." ಪ್ರತಿಪದದಲ್ಲೂ ತುಂಬು ಅರ್ಥವನ್ನು ತುಂಬಿ ತಿಳಿಸಿದ ನರಹರಿ.

ಅವನ ಮಾತು ಮುಗಿಯುವ ವೇಳೆಗೇ ಅವಕುಂಠನವತಿಯಾಗಿದ್ದ ಲಕ್ಷ್ಮೀದೇವಿ ತನ್ನ ಬುರುಕಿಯನ್ನು ಸರಿಸಿದಳು.

ರಾಜಲಕ್ಷ್ಮಿಯಂತೆ ರಾರಾಜಿಸುತ್ತಿದ್ದ ಸುಂದರವದನದಲ್ಲಿ ದುಃಖದರಿದ್ರಲಕ್ಷ್ಮಿಯು ನೆಲೆಸಿ ತಾಂಡವವಾಗಿರುವ ವದನವನ್ನು ವೀಕ್ಷಿಸಿ ವಿವರ್ಣನಾದ ಗಜಪತಿ.

ರಾಣಿ, ಗಜಪತಿಯ ಪಾದಗಳಿಗೆರಗಿ ತನ್ನ ದುಃಖಾಶ್ರುಗಳಿಂದ ಅವನ ಪಾದವನ್ನು ತೊಳೆದಳು. ರಾಣಿಯನ್ನು ಎತ್ತಿ ನಿಲ್ಲಿಸಿದ—ಗಜಪತಿಯಾಂತ್ರಿಕವಾಗಿ.

ಈ ಅನಿರೀಕ್ಷಿತ ಸಂತಸದ ಅಲೆ ಅವನನ್ನು ಭಾವ ಸಮಾಧಿಸ್ತನನ್ನಾಗಿಸಿತ್ತು—ಯಾರೂ ಯಾವ ಮಾತನ್ನು ಆಡಲು ಶಕ್ತರಾಗಿರಲಿಲ್ಲ—ಸಮಯದ ಔಚಿತ್ಯವನ್ನರಿತ ಜಗನ್ಮೋಹಿನಿಯ ಪ್ರವೇಶ ಅವರನ್ನು ಜಾಗೃತಗೊಳಿಸಿತು.

ಕೃಷ್ಣದೇವರಾಯನ ಕಪಿಮುಷ್ಟಿಯಿಂದ ಕಷ್ಟಪಟ್ಟು ಮರಳಿ ಮಡದಿಯನ್ನು ದೊರಕಿಸಿಕೊಟ್ಟ ನರಹರಿಯನ್ನು ಬಹುವಾಗಿ ಹೊಗಳಿದನು ಗಜಪತಿ.

ಮಗಳತ್ತ ಮೊಗವೆತ್ತಿ ನೋಡಿದ ಮಾತೆ ಸೂಜಿಗಲ್ಲಿನಿಂದೆಳೆದ ಕಬ್ಬಿಣದಂತೆ ಅವಳ ಬಳಿಸಾರಿ ಬರಸೆಳೆದು ಬಿಗಿದಪ್ಪಿ ತನ್ನ ಹೃದಯದಲ್ಲಡಗಿದ್ದ ಹಲಕಾಲದ ಕಷ್ಟ-ಸುಖಗಳನ್ನು ಹೇಳಿಕೊಳ್ಳುವಂತೆ—ಮಮತೆಯ ಅಮೃತ ಸೇಚನೆಯ ರೂಪಾಗಿ ಮುತ್ತಿಟ್ಟಳು. ಬಹುಕಾಲದ ಅವರ ಅಗಲಿಕೆ ಇದರಿಂದ ಬೆಸೆದಂತಾಯ್ತು.

ಈ ಅವಕಾಶವನ್ನು ಕಲ್ಪಿಸಿಕೊಟ್ಟ ನರಹರಿಪಾತ್ರನನ್ನು ಬಹುವಾಗಿ ಹೊಗಳಿದಳು ಲಕ್ಷ್ಮೀಬಾಯಿ. ಅವಳ ಒಂದೊಂದು ಹೊಗಳಿಕೆಯ ವಾಕ್ಕು ಜಗನ್ಮೋಹಿನಿಯಮೇಲೆ ಮಹತ್ಪರಿಣಾಮವನ್ನುಂಟುಮಾಡಿತ್ತು. ಅಂಗೈಗೆ ಆಕಾಶವನ್ನು ದೊರಕಿಸಿಕೊಟ್ಟಷ್ಟು ಆನಂದವಾಗಿತ್ತು ಅವಳಿಗೆ.

ಸಮಾಗಮದ ಉದ್ವೇಗ ಕಡಿಮೆಯಾದಾಗ ನರಹರಿಪಾತ್ರ ತನ್ನ ಉಳಿದ ಕಾರ್ಯವನ್ನು ನಿರ್ವಹಿಸಲು ನಿರ್ಧರಿಸಿದ. ಅದಕ್ಕಾಗಿ ಗಜಪತಿಯ ಅನುಮತಿಯನ್ನು ಅಪೇಕ್ಷಿಸಿದ.

"ಮಹಾಪ್ರಭುಗಳ ಅಪ್ಪಣೆಯಾದರೆ ನಮ್ಮನ್ನು ನಮ್ಮ ಕಷ್ಟಕಾಲದಲ್ಲಿ ಸಂರಕ್ಷಿಸಿ ಇಂದಿನ ಆನಂದಕ್ಕೆ ಕಾರಣರಾದ ಹಿರಿಯ ವ್ಯಕ್ತಿ, ಹಿರಿಯ ಜೀವ ಓರ್ವರನ್ನು ತಮ್ಮೆಡೆಗೆ ಕರೆತರಬಯಸುತ್ತೇನೆ."

—ವಿನಯ ತುಂಬಿದ ಧ್ವನಿಯಲ್ಲಿ ಕೇಳಿದ ನರಹರಿ.

"ನಮ್ಮ ಕಷ್ಟಕಾಲದಲ್ಲಿ—ನಮ್ಮ ಇಂದಿನ ಸಂತಸಕ್ಕೆ ಕಾರಣರಾದ ಅವರನ್ನು ನೋಡಲು ನನ್ನ ಅಭ್ಯಂತರವಿಲ್ಲ. ನೋಡುವ ಭಾಗ್ಯವೂ ನನ್ನದಲ್ಲವೆ? ಆದರೆ ಅವರ ನಿಷ್ಠೆಯ ಬಗ್ಗೆ ನಮ್ಮ ಅನುಮಾನ ಮಾತ್ರ ನಿಶ್ಚಿತವಾಗಿ 'ಕರೆದುಕೊಂಡು ಬಾ' ಎಂದು ಹೇಳಲು ಅಡ್ಡಿಯಾಗಿದೆಯಲ್ಲ."

—ಎಂದ ಗಜಪತಿ ತನ್ನ ಇರುವು ಎಲ್ಲಿ ಬಯಲಾಗಿ ಶತ್ರು ಆಹ್ವಾನಕ್ಕೆ ಅವಕಾಶವಾಗುವುದೋ ಎಂಬ ಭಯಮಿಶ್ರಿತ ಸ್ವರದಲ್ಲಿ.

"ಶಿರಶ್ಚಂದ್ರಮಹಾಪಾತ್ರರ ನಿಷ್ಠೆಯ ಬಗ್ಗೆ ನನಗಾಗಲೀ, ತಮಗಾಗಲೀ ಸಂಶಯವಿಲ್ಲವೆಂಬ ಅಂಶ ನಿರ್ವಿವಾದವಾದುದೆಂದು ತಿಳಿದಿದ್ದೇನೆ."

—ನಿರ್ಧಾರ ಧ್ವನಿಯಲ್ಲಿ ದೃಢವಿಶ್ವಾಸದಿಂದ ವಿವರಿಸಿದ ನರಹರಿ, ಶಿರಶ್ಚಂದ್ರಮಹಾಪಾತ್ರ!

ಕಾದ ಸೀಸದ ರಸವನ್ನು ಕಿವಿಯಲ್ಲಿ ಗಿಡಿದಂತಾಯ್ತು ಗಜಪತಿಗೆ. ಹಿಂದಿನ—ಅಂದಿನ, ಆ ನೆನವು ಮರಕಳಿಸಿ ಮುಳಿದ ಪರಶಿವನಂತಾದ ಗಜಪತಿ. ಕಣ್ಣು ಕಿಡಿ ಕಾರಹತ್ತಿತು. ಕ್ರೋಧದ ಹೊಳೆ ಬೆಂಕಿಯಾಗಿ ನರನರದಲ್ಲೂ ಹರಿದು ಬೆವರಿತು. ಉನ್ಮತ್ತನಂತೆ—ಉರಿಯುವ ಉರಿನಾಲಗೆಯಂತೆ ಉಸುರಿದ.

"ಆ ಮಹಾಪಾಪಿಯನ್ನು, ಮಿತ್ರದ್ರೋಹಿಯನ್ನು ಮುಖದರ್ಶನ ಮಾಡುವುದೆ. ನಂಬಿಸಿ, ಮಹಾದಂಡನಾಯಕನನ್ನಾಗಿ, ನನ್ನ ಸಂರಕ್ಷಣೆ ಮಾಡಲು ಪ್ರಮಾಣ ವಚನಮಾಡಿ, ಶತ್ರುಗಳಿಗೆ ಬೆಂಬಲಿಗನಾಗಿ, ಆಸೆಯ ಪಿಶಾಚಿಗೆ ಮಿತ್ರಾಗಿ ನನ್ನನ್ನು ಈ ದುರ್ಗತಿಗೆಳೆದ ದುರುಳನ ದರ್ಶನವೆ?

ಯಾರನ್ನು ತನ್ನ ಹೃದಯಾಂತರಾಳದಿಂದ ನಂಬಿ ನೆಚ್ಚಿದ್ದೆನೋ ಅವನೇ ತಿರುಗಿ ಬಿದ್ದು, ಪರಾಶ್ರಯಕ್ಕೆ ಬಿದ್ದು, ತನ್ನನ್ನು ದರಿದ್ರ ನಂತೆಪರದಾಡಲು ಅವಕಾಶಮಾಡಿದನೋ, ಆ ಹಿತಶತ್ರುವಿನ ಹಾಳುಮುಖ ದರ್ಶನ ಯೋಗ್ಯವೇ ?

ಆತನೇನಾದರೂ ಇಂದಿನ ನನ್ನ ಆನಂದಕ್ಕೆ ಯಾವ ರೀತಿಯಿಂದ ಲಾದರೂ ಕಾರಣನಾಗಿದ್ದರೆ ನಾನು ಪಟ್ಟ ಆನಂದ—ನನಗೆ ವಿಷದುಣಿಸನ್ನು ಬಡಿಸಿದಂತೆ—ಬರಸಿಡಿಲಿನಂತೆ ಬೊಬ್ಬೆ ಇಟ್ಟು ಘರ್ಜಿಸಿದ ಗಜಪತಿ—ಶಿರಶ್ಚಂದ್ರನ ಹೆಸರು ಕೇಳಿದೊಡನೆಯೇ !

ಎಲ್ಲವನ್ನು ಕೇಳುತ್ತಾ ನಿಂತಿದ್ದ ನರಹರಿಯ ಕಣ್ಣು ತೇವವಾಗಿತ್ತು. ಅವನ ಬದಿಯಲ್ಲಿ ಗಜಪತಿಗೆ ಮರೆಯಾಗಿ ನಿಂತಿದ್ದ ವ್ಯಕ್ತಿಯ ಮುಖ ಗಂಭೀರವಾಗಿ ನಿಶ್ಚಲವಾಗಿತ್ತು.

ನರಹರಿಯೇ ನುಡಿದ ನಿರ್ಧಾರ ಸ್ವರದಿಂದ.

"ಅಪ್ಪಾಜಿ ಸಾವಧಾನದಿಂದ ಲಾಲಿಸಬೇಕು. ಶಿರಶ್ಚಂದ್ರಮಹಾ ಪಾತ್ರರ ಬಗ್ಗೆ ತಾವಾಡಿದ ಮಾತುಗಳು ಬಹು ಕ್ರೂರವಾಗಿವೆ—ಸತ್ಯ ಸಂಗತಿಗೆ ದೂರವಾದ ಅವುಗಳು ನಿಶ್ಯನಾದ ಸೇವಕನನ್ನು ಕೆರಳಿಸುವಂತಿದೆ. ಆದರೆ, ವಿಧಿಯ ವಿಕಟಾಟ್ಟಹಾಸದ ವೈಭವ ಮೆರೆಯುತ್ತಿರುವಾಗ ಎಂತಹ ಮನುಜನಾದರೂ ಇಂತಹ ಮಾತುಗಳನ್ನು ಕೇಳಬೇಕಾಗುತ್ತದೆ—ಎಂಬುದು ಸಾಧಾರಣವಾದ ಅಂಶ. ಅನುಭವದ ಬೆಲೆ ಅವರಿಗೆ ಅರಿವು ಮೂಡಿಸುತ್ತದೆ. ಆದರೆ ಮಾತನಾಡುವ ಭರದಲ್ಲಿ ವಿಧಿಯು ಕೈಗೊಂಬೆ ಯಾದರೂ, ವಿವೇಚನಾಶಕ್ತಿಯಿಂದ ವರ್ತಿಸುವುದು, ವೀರರ, ಸಾಮ್ರಾಟರ ಉತ್ತಮ ಗುಣ. ಅಂತಹ ಗುಣವುಳ್ಳ ನೀವು ಈ ಮಾತನ್ನಾಡಿದ್ದರೂ ಅದು ನನ್ನ ಪಾಲಿಗೂ, ಶಿರಶ್ಚಂದ್ರರ ಪಾಲಿಗೂ ಹಿರಿಯರು ಮಾಡಿದ ಆಶೀರ್ವಾದದಂತೆ ಎಂದು ನಾವು ತೆಗೆದುಕೊಳ್ಳುತ್ತೇವೆ—ಅವಧರಿಸಬೇಕು"

—ಎಂದು ಶಿರಶ್ಚಂದ್ರಮಹಾಪಾತ್ರನೊಡನೆ ಗಜಪತಿಯ ಕಾಲುಗಳಿಗೆರಗಿದ ನರಹರಿ—ಮತ್ತೆ ಮುಂದುವರೆದು—

ತಮ್ಮಗಳೊಡನೆ ಶಿರಶ್ಚಂದ್ರ ಪಟ್ಟಶ್ರಮ—ತಮ್ಮನ್ನುಳಿಸಿದುದು—ಅಲೆವಲೆದು ಕಂಗಾಲಾಗಿದ್ದುದು ಎಲ್ಲವನ್ನೂ ವಿವರವಾಗಿ ವಿವರಿಸಿದಾಗ

ಪ್ರಸನ್ನತೆಯ ಹಾದಿಯಲ್ಲಿದ್ದ ಗಜಪತಿ.

ಸಮಯವನ್ನರಿತ ಶಿರಶ್ಚಂದ್ರ ಮತ್ತೊಮ್ಮೆ ಪ್ರಣಾಮಗಳನ್ನು ಸಲ್ಲಿಸಿ ಅರಿಕೆ ಮಾಡಿಕೊಂಡ.

"ಮಹಾ ಸಾಮ್ರಾಟರು ಸೇವಕನೋರ್ವನಮೇಲೆ ಇಷ್ಟು ಕೋಪ ಗೊಂಡಿರುವುದು ನನ್ನ ದುರಾದೃಷ್ಟ. ನನ್ನಬಗ್ಗೆ ಸಂಶಯ ತಳೆದು ನನ್ನನ್ನು ತೃಣಕ್ಕಿಂತ ಕಡೆಯಾಗಿ ಕಂಡು ಮಾತನಾಡಿದ್ದೀರಿ. ಆದರೆ, ನಿಮ್ಮ ಹೃದಯ ಮಾತ್ರ ನಿಮ್ಮ ಮಾತನ್ನೇ ಒಪ್ಪುತ್ತಿಲ್ಲವೆಂದು ನಾನು ಹೇಳಬಯ ಸುತ್ತೇನೆ.

ರಾಯನ ಕುತಂತ್ರದಿಂದ ತಾವು ಪೊಟ್ಟನೂರನ್ನು ಬಿಟ್ಟು, ನಾವು ತಮ್ಮನ್ನು ಕಾಣಲು ಬಂದಾಗ ಮಾತನಾಡಲೂ ಅವಕಾಶ ಕೊಡದೆ ನಮ್ಮ ಗಳಬಗ್ಗೆ ತಪ್ಪು ಅಭಿಪ್ರಾಯ ತಳೆದು ನಮ್ಮನ್ನು ತಬ್ಬಲಿಗಳಂತೆ ಮಾಡಿದು ದಲ್ಲದೆ, ನಮ್ಮನ್ನು ತಮ್ಮ ಮಾತುಗಳ ಚಾಟಿಯಿಂದ ಹೊಡೆದು ಶಿಕ್ಷಿಸಿ ದ್ದೀರಿ- ದೇಹ ದಣಿದಿದ್ದರೂ ಆತ್ಮ ತಣಿದಿದೆ. ಕೊನೆ ಗಳಿಗೆಯಲ್ಲಾ ದರೂ ದಣಿಯ ಪಾದದಲ್ಲಿ ನನ್ನ ಅಳಲನ್ನು ತೋಡಿಕೊಳ್ಳುವ ಅವಕಾಶ ಒಂತಲ್ಲಾ ಎಂಬ ಸಂತೋಷ ತೊಡಿಸಿದ ನನ್ನ ಮೈ, ಮನಗಳಿಗೆ ವಜ್ರ ಕವಚವನ್ನು ತೊಟ್ಟಂತಾಗಿದೆ—ನನ್ನ ಆತ್ಮ ಪರಿಶುದ್ಧವಾಗಿದೆ. ನನ್ನ ಸ್ವಾಮಿಯ ಇದಿರು ನನ್ನ ನಿಷ್ಠೆಯಬಗ್ಗೆ ನಾನೇ ನುಡಿಯಲಾರೆ.

ಎಂದಿದ್ದರೂ ನಾನು ನಿಮ್ಮ ಸೇವಕ, ಮನ ಬಂದಂತೆ ನಡೆದುಕೊ ಳ್ಳಲು ಸಿದ್ಧನಿದ್ದೇನೆ. ಆದರೆ ನನ್ನದೊಂದೇ ಬೇಡಿಕೆ—ಕೊನೆ ಘಳಿಗೆ ವರೆಗೂ ತಮ್ಮ ಊಳಿಗದ ಆಳಾಗಿಯಾದರೂ ಸೇವೆಮಾಡಿ ಸಾಯಬೇಕೆಂದಿ ದ್ದೇನೆ. ಅಷ್ಟು ದಯಪಾಲಿಸಿ ಕೃತಾರ್ಥನನ್ನಾಗಿ ಮಾಡಿ.

ನನ್ನ ದೇಹದ ಪ್ರತಿ ಭಾಗವನ್ನು ಕತ್ತರಿಸಿ ನನ್ನಲ್ಲಿ ಕೃತಘ್ನತೆಯ ಕಪ್ಪಿದ್ದರೆ ನನ್ನನ್ನು ತುಂಡರಿಸಿ ತಮ್ಮ ಬೇಟೆನಾಯಿಗಳಿಗೆ ಊಟಮಾಡಿಸ ಬಹುದು. ಮಿಕ್ಕಿದ್ದು ಸ್ವಾಮಿಯ ಇಚ್ಛೆ.

—ಎಂದು ನಿಶ್ಚಲನಾಗಿ, ನಿರ್ವಿಕಾರನಾಗಿ, ನಿರ್ಭರವಾದ ಹೃದಯ ದಿಂದ ಹೊರಹೊಮ್ಮಿದ ಮಾತುಗಳನ್ನು—ನುಡಿಸಿದ.

ನರಹರಿಪಾತ್ರನ ಕಣ್ಣು, ಶಿರಶ್ಚಂದ್ರಮಹಾಪಾತ್ರನ ಉದ್ವೇಗವೂ ಹೇಳಲಸದಳವಾಗಿತ್ತು.

ಗಜಪತಿಯಾದರೋ ಗರಬಡಿದವನಂತೆ ಗಂಭೀರವಾಗಿದ್ದ.

ಅವನ ಮನಸ್ಸಿನಲ್ಲಿದ್ದ ಕ್ರೋಧ, ಸಂಶಯದ ಕೊಳೆ, ಶಿರಶ್ಚಂದ್ರನ ನಿರ್ಮಲ ಜಲದಿಂದ ತೊಳೆಯಲ್ಪಟ್ಟಿತ್ತು.

ಎಂತಲೇ ಗಂಭೀರವಾಗಿ ನುಡಿದ ಗಜಪತಿ.

"ಶಿರಶ್ಚಂದ್ರರೇ, ದುರದೃಷ್ಟಶಾಲಿಗಳು ನಾವೇ ವಿನಾ ನೀವಲ್ಲ. 'ಬಲ ವಿಲ್ಲದವನನ್ನು ನೆಲವೆದ್ದು ಬಡಿಯಿತೆಂಬಂತೆ ನಮ್ಮ ಸ್ಥಿತಿಯಾಯ್ತು. ವಿವೇಕಶೂನ್ಯನಾಗಿ, ನಂಬಿದವರಿಗೆ ಮೋಸಮಾಡಿ ನಾನೂ ದುರ್ನಾಮ ಹೊಂದಿದುದಲ್ಲದೆ ನಿಮ್ಮನ್ನು ನಿರ್ಗತಿಕರನ್ನಾಗಿಸಿದ ಮಹಾ ಪಾಪ ನಮ್ಮ ತಲೆಯ ಮೇಲಿದೆ—ನಿಮ್ಮ ನಿಷ್ಠೆಯ ಬಗ್ಗೆ ಸಂಶಯಪಟ್ಟುದ್ದು. ನಮ್ಮನ್ನು ಕ್ಷಮಿಸಿ ತಮ್ಮ ಸ್ನೇಹ ಹಸ್ತವನ್ನು ನಮಗೆ ಮತ್ತೊಮ್ಮೆ ನೀಡಿ ನಮ್ಮನ್ನು ಕೃತಾರ್ಥರನ್ನಾಗಿಸಿದರೆ ಧನ್ಯ. ಅವಕಾಶ ಅನಿರೀಕ್ಷಿತವಾದರೂ ತಮ ದಿಂದ ಜ್ಯೋತಿಗೆ, ಮಬ್ಬಿನಿಂದ ದಿಬ್ಬಕ್ಕೆ ಮುಂದುವರೆಯುವ ಶುಭ ಸಮಾ ರಂಭ. ಇಂದಿನಿಂದ ನಾವು ಒಂದೇ ಆತ್ಮದಂತೆ. ನಮ್ಮ ಬಿರುನುಡಿಗಳಿಗೆ ಕ್ಷಮೆ ಇರಲಿ."

ಎಂದು ದೀನನಾಗಿ ದೈನ್ಯದಿಂದ ಬೇಡಿದ ಗಜಪತಿ.

ಆವೇಶಪೂರ್ಣನಾಗಿದ್ದ ಶಿರಶ್ಚಂದ್ರ ಮತ್ತೊಮ್ಮೆ ಅವರ ಪಾದಮುಟ್ಟಿ ಪ್ರತಿಜ್ಞೆಮಾಡಿದ. ನರಹರಿಯೂ ಸೇರಿಸಿದ ಧ್ವನಿ ಅವರುಗಳನ್ನು ಅಮರ ಲೋಕಕ್ಕೆಳೆದೊಯ್ದಿತ್ತು. ದಿಗ್ವಿಜಯ ಮಾಡಿದವರಂತೆ ಮೆರೆದರು. ಸರ್ವರೂ ಒಂದಾಗಿ. ಜಯ ಉತ್ಕಲ ಮಾತೆ ! ಜಗನ್ಮಾತೆ ! ಎಂಬ ಧ್ವನಿ ಅವರ ಹೃದಯದಲ್ಲಿ ಪ್ರತಿಧ್ವನಿಸುತ್ತಿತ್ತು.

ಅಂದು ಅವರ ಬಾಳಲ್ಲಿ ಮಂಗಳೋದಯವಾಗಿತ್ತು. ಅಂದೇ ಶಿರಶ್ಚಂದ್ರಮಹಾಪಾತ್ರನು ಮತ್ತೆ ಸೇನಾನಾಯಕನಾದ! ಕಟಕಪುರಿಯನ್ನು ಶಿರಶ್ಚಂದ್ರ ಹಸ್ತಕ್ಕೊಪ್ಪಿಸಿದಂತಾಯ್ತು !

ಕೃಷ್ಣದೇವರಾಯನಾದರೋ ಅನುಮಾನದಿಂದ ಕಟಕಪುರಿಯಲ್ಲಿ ತನ್ನ ಗೂಢಚಾರರನ್ನು ಇಟ್ಟಿದ್ದನು.

ಇಲ್ಲಿ ನಡೆದ ಸಕಲ ವಿದ್ಯಮಾನಗಳೂ ರಾಯನಿಗೆ ವಿವರವಾಗಿ ತಿಳಿಯಿತು—ಅವನ ಚಾರರ ಮೂಲಕ ಕೂಡಲೇ ಸೈನ್ಯಸಮೇತನಾಗಿ ಕಟಕಪುರಿಯ ಕಡೆಗೆ ನುಗ್ಗಿದ ಕೃಷ್ಣದೇವರಾಯ.

ವೈರಿಯ ಆಗಮನ ವಾರ್ತೆಯಿಂದ ಅಲ್ಪಸ್ವಲ್ಪವೂ ಅಲುಗಾಡಲಿಲ್ಲ ಗಜಪತಿ. ಕಟಕಪುರಿಯ ಕೋಟೆ ವಜ್ರದ ಕೋಟೆ ಇದ್ದಂತೆ. ಇರುವೆಯೂ ಒಳಬರದಂತೆ ಭದ್ರ ಬುನಾದಿಯಮೇಲೆ ಉತ್ಕಲದ ಹಿಂದಿನ ರಾಜರು ಅದನ್ನು ನಿರ್ಮಿಸಿದ್ದರು.

ದುರ್ಭೇದ್ಯವಾದ ಆ ಕೋಟೆಯನ್ನು—ಶಿರಶ್ಚಂದ್ರನಂತಹ ವೀರಾಗ್ರಣಿಯ ರಕ್ಷಣೆಗೆ ಬಿಟ್ಟಂದಿನಿಂದ ನಿರಾತಂಕವಾಗಿದ್ದ ಗಜಪತಿ

ಆದರೂ, ಕೋಟೆಯ ಅಗಳ್ತೆಗಳಿಗೆ ಮಹಾನದಿಯ ನೀರು ತುಂಬಿಸಿ ಶತ್ರುಗಳು ಒಳಬರದಂತೆ ಅಡ್ಡಗಟ್ಟಿದ್ದ.

ಯುದ್ಧ ಆರಂಭವಾಯಿತು.

ಕೋಟೆಯ ಸುತ್ತಲೂ ಸರ್ಪಕಾವಲಿಡಿಸಿ—ಶಸ್ತ್ರಸಜ್ಜಿತ ಸೈನಿಕರನ್ನು—ಪಟುಭಟರನ್ನು ಕೋಟೆಯ ಕಾವಲಿಗೆ ಆರಿಸಿಕೊಂಡಿದ್ದ.

ಇಂತಾಗಿ ಅನೇಕ ಕಾಲಗಳು ಕೃಷ್ಣದೇವರಾಯನ ಸೇನೆ—ಬಂಡೆಯ ಮೇಲೆ ಮಳೆಗರೆದಂತೆ ವ್ಯರ್ಥ ಶ್ರಮಪಡುತ್ತಿದ್ದರು.

ಇಷ್ಟು ಭದ್ರಾಸನಾರೂಢನಾಗಿದ್ದರೂ ಗಜಪತಿಗೆ ಮಾತ್ರ ಅದೃಷ್ಟ ಒಲಿದಿರಲಿಲ್ಲ.

ತಿಮ್ಮರಸನ ರೂಪಿನಲ್ಲಿ ಗಜಪತಿಯ ಭದ್ರಬುನಾದಿಯನ್ನು ಅಲುಗಾಡಿಸಿತ್ತು.

ಕಟಕಪುರಿಯ ಉತ್ತರ ಕೋಟೆ ಶಿಥಿಲವಾಗಿದ್ದ ಅಂಶವನ್ನು ಹೇಗೋ

ಸಂಗ್ರಹಿಸಿದ್ದ ತಿಮ್ಮರಸ—ತನ್ನ ಹೆಚ್ಚು ಸೈನ್ಯವನ್ನು ಆ ದಿಕ್ಕಿಗೇ ಕಳುಹಿಸಿದ.

ನಿರ್ಭೀತ ನಿರ್ಭಯರಾಗಿ ಗಜಪತಿಯ ಸೈನಿಕರು ಒಂದು ದಿನ ರಾತ್ರಿ ನಿದ್ರಿಸುತ್ತಿದ್ದಾಗ — ಅದರ ಸದವಕಾರ ಸದುಪಯೋಗಪಡಿಸಕೊಂಡಿದ್ದ ತಿಮ್ಮರಸ.

ಅಗಳ್ತಿಯ ನೀರಿನ ಮಧ್ಯೆ ಮದದಾನೆಗಳನ್ನು ನುಗ್ಗಿಸಿಕ್ಕೊಂಡು ಸಕಲ ಸೈನಿಕ ಬಲದೊಡನೆ ಉತ್ತರ ದಿಕ್ಕಿನ ಕೋಟೆಯನ್ನು ಮುತ್ತಿದ.

ಗಜಪತಿಯು ಸೈನಿಕರಿಗೆ ರಣಮಾರಿಯಂತೆ ಮುನ್ನುಗ್ಗಿ ಬರುತ್ತಿದ್ದ ರಾಯನ ಸೈನ್ಯ ಪ್ರವಾಹವನ್ನು ಕಂಡು ಕುರಿಯಂತಾದರು.

ಆದರೂ ಉಕ್ಕಿನಾಳುಗಳಾದ ಅವರು ರಾಯನ ಸೈನ್ಯಕ್ಕೆ ತೀವ್ರವಾದ ಯುದ್ಧವನ್ನೇ ಕೊಟ್ಟರು.

ವಿಜಯೋನ್ಮಾದದಲ್ಲಿ ಮೆರೆದು, ಬೊಬ್ಬಿರಿದು ಬಿಚ್ಚುಗತ್ತಿಯೊಡನೆ ಬರುತ್ತಿದ್ದ ರಾಯನಸೈನಿಕರಿದಿರು ಅವರಬಲ ಕುಗ್ಗುತ್ತಾಬಂತು. ಇದರಿಂದ ಧೈರ್ಯ ರಾಯನ ಸೈನ್ಯಕ್ಕೆ ಇಮ್ಮಡಿಯಾಯ್ತು.

ರಣಮಾರಿಗೆ ರಸದೌತಣವನ್ನುಣಬಡಿಸಿದರು. ರಾಯನ ಸೈನಿಕರು ಆ ವೇಳೆಗೆ ತಿಮ್ಮರಸ ತನ್ನ ಮದದಾನೆಗಳ ಮೂಲಕ ಉತ್ತರದ ಕೋಟೆಯ ಬಾಗಿಲನ್ನು ತೆರೆದಿದ್ದ. ತಡೆದು ನಿಲ್ಲಿಸಿದ್ದ ನೀರು, ತಡೆ ತೆಗೆದೊಡನೆಯೇ ನುಗ್ಗುವಂತೆ, ಬೆಟ್ಟದಮೇಲಿಂದ ಹರಿದನದಿಯಂತೆ ವಿಜಯೋನ್ಮಾದದೊಡನೆ ನುಗ್ಗಿತು—ರಾಯನ ಸೈನ್ಯ ಕಟಕಪುರಿಯ ಕೋಟೆಯ ಮೇಲಕ್ಕೆ.

ಶಿರಶ್ಚಂದ್ರಮಹಾಪಾತ್ರ ರಣರಂಗದಲ್ಲಿ ಮಡಿದ! ಈ ದುರ್ವಾರ್ತೆ ಕೇಳಿ ಹಲವರ ಹೃದಯಕ್ಕೂ ಹಾಲಾಹಲವಾಗಿ ಹೋಯಿತು.

ಗಜಪತಿಯ ಸೈನ್ಯ ದಿಕ್ಕಾಪಾಲಾಗಿ ಪ್ರತಿಭಟಿಸಲೂ ಶಕ್ತಿಕುಂದಿ ಸುಮ್ಮನಾದರು.

ಈ ವಾರ್ತೆ ಅರಮನೆಗೆ ಮುಟ್ಟುವ ವೇಳೆಗೇ ಅರಮನೆಯ ಮೇಲ್ವಿಚಾರಕನಾಗಿ ರಕ್ಷಕನಾಗಿದ್ದ ನರಹರಿಪಾತ್ರ ಅಂತಃಪುರಕ್ಕೆ ಧಾವಿಸಿ ಗಜಪತಿ, ಜಗನ್ಮೋಹಿನಿ ಮತ್ತು ಲಕ್ಷ್ಮೀದೇವಿಯರನ್ನು ತಲೆತಪ್ಪಿಸಿಕೊಳ್ಳಿರೆಂದು ಪ್ರೇರೇಪಿಸಿದ.

ಆದರೆ ಅಷ್ಟುಹೊತ್ತಿಗಾಗಲೇ ಹೊರಗಿನಿಂದ ರಾಯನ ಸೈನ್ಯದ ವೀರೋನ್ಮಾದ ಕೇಳಿಬರುತ್ತಿತ್ತು. ಗಜಪತಿಯ ಕೆಲವು ಸೈನಿಕರ ಪ್ರತಿಭಟನೆಯ ಪ್ರತಿಧ್ವನಿ ಕತ್ತಿಯ ಖಳಖಳ ನಾದದಲ್ಲೂ, ಸಾವಿನ ಚೀತ್ಕಾರದಲ್ಲೂ, ಗೆದ್ದವನ ಆಟಾಟೋಪದಲ್ಲಿಯ ಪರ್ಯವಸಾನವಾಗಿತ್ತು.

ಇಂತಹ ಸಮಯದಲ್ಲೂ ತಲೆತಪ್ಪಿಸಿಕೊಳ್ಳಲು ಪ್ರತಿಭಟಿಸಿದ ಗಜಪತಿ. ಆದರೆ ಅನಿವಾರ್ಯವಾಗಿ, ಬಲವಂತದಿಂದ ಒಪ್ಪಿ ಕಾರ್ಯೋನ್ಮುಖನಾದ.

ಸುರಂಗದಲ್ಲಿ ಸುರಕ್ಷಿತವಾಗಿ ಸಾಗಿಹೋಗಲು ಈರ್ವರು ಬೆಳಕು ತೋರಲು ಸೇವಕರು ಮುಂದುವರೆದರು. ಅವರನ್ನು ಹಿಂಬಾಲಿಸಿದರು ಗಜಪತಿ—ಲಕ್ಷ್ಮೀದೇವಿ ಮತ್ತು ಜಗನ್ಮೋಹಿನಿ.

ಜಗನ್ಮೋಹಿನಿಯ ಮುಖವನ್ನು ನೋಡಿ ನೊಂದು ನರಹರಿ ನುಡಿದ.

"ಬದುಕಿ ಬಂದರೆ ನಿನ್ನನ್ನು ಶೀಘ್ರದಲ್ಲಿಯೇ ನೋಡುತ್ತೇನೆ. ದೈವ ನಿಯಮ ಮೀರಲಾರರೂ ಶಕ್ತರಲ್ಲ. ವೀರನಂತೆ ಹೋರಾಡಿ ಬದುಕಿದರೆ ಸಂಧಿಸುವೆ. ಜಗದ್ರಕ್ಷಕ ಆ ರಕ್ಷೆಯನ್ನು ನೀಡಲಿ. ಭಯಪಡಬೇಡ ಭದ್ರೆ."

—ಎಂದು ಸಮಾಧಾನಪಡಿಸಿ ಬೀಳ್ಕೊಟ್ಟ ನರಹರಿ.

"ಸುರಂಗದೆಡೆಯಿದ್ದ ಅವನಿಗೆ ಉಪ್ಪರಿಗೆಯಮೇಲಿನ ಗದ್ದಲ ಕೇಳಿ ಬಂದು ಸುರಂಗದ ಮಾರ್ಗವನ್ನು ಭದ್ರಪಡಿಸಿ ಉಪ್ಪರಿಗೆಗೆ ಧಾವಿಸಿದ."

ಗೋವಿಂದರಾಜನು ಅಂತಃಪುರದಲ್ಲಿ ಜಗನ್ಮೋಹಿನಿಗಾಗಿ ಅರಸಿ, ನಿರಾಶನಾಗಿ ಬಂದಿದ್ದ, ತನ್ನ ಕಾರ್ಯ ಸಫಲಗೊಳಿಸಲು—

ಆದರೆ—ಅವನಿಗೆ ಅಡ್ಡಿಯಾಗಿ ನಿಂತಿದ್ದ ನರಹರಿಪಾತ್ರ........

ಕ್ರೋಧ ಉಕ್ಕಿ ಹರಿಯಿತು! ವೀರರೀರ್ವರೂ ಯುದ್ಧಸನ್ನದ್ಧರಾದರು. ಈ ವೀರರ ಕತ್ತಿಗಳ ಸಮ್ಮಿಲನದಿಂದ ಹೊರಬರುತ್ತಿದ್ದ ಖಳೀರ್ ಎಂಬ ಶಬ್ದ ಸಾಮಾನ್ಯರ ಹೃದಯವನ್ನು ಇರಿಯುವಂತಿತ್ತು.

ಮದಗಜಗಳಂತೆ, ಹಸಿದ ಹುಲಿಗಳಂತೆ, ವೀರಾವೇಶದಿಂದ ಸೆಣಸಿದರು ವೀರರೀರ್ವರೂ.

ವಿಧಿ ನಿಷ್ಕರಿಸಲೇಬೇಕಾಯ್ತು! ಕೊನೆಗೂ ವಿಧಿ ಮೋಸ ಮಾಡಿತು!

ತನ್ನ ಶಕ್ತಿಸಾಮರ್ಥ್ಯಗಳನ್ನೆಲ್ಲ ಸೇರಿಸಿ ಗೋವಿಂದರಾಜನನ್ನು ಹೊಡೆಯಲು ನುಗ್ಗಿದ ನರಹರಿಯು ಏಟು ತಪ್ಪಿ ಮುಗ್ಗರಿಸಿದ.

ಗೋವಿಂದರಾಜು ಗೆದ್ದ ! ವಿಜಯಧ್ವಜವನ್ನು ನೆಟ್ಟ ! ಮುಗ್ಗರಿಸಿ ಬಿದ್ದ ನರಹರಿಯ ಹೃದಯವನ್ನು, ತನ್ನ ಕತ್ತಿಯಿಂದ ಇರಿದ ಗೋವಿಂದ ರಾಜು—ನೆಲ ರಕ್ತದ ಮಡುವಾಯಿತು.

ವೀರ ನರಹರಿ ವೀರನಂತೆ ಹೋರಾಡಿ ವಿಧಿಯ ವಿಲಾಸಕ್ಕೆ ಬಲಿ ಯಾಗಿದ್ದ—ರಕ್ತದ ಮಡು ಗೋವಿಂದರಾಜುವಿನ ಕ್ರೋಧಕ್ಕೆ ಸಾಕ್ಷಿ ಯಾಗಿತ್ತು.

“ಭದ್ರೆ! ಭಯಪಡಬೇಡ. ಕೂಡಲೇ ನಿನ್ನನ್ನು ಕೂಡಿಕೊಳ್ಳುತ್ತೇನೆ” ಎಂದು ಆಶ್ವಾಸನವಿತ್ತ ನೆನಪು ಅವನನ್ನು ಅಲಗಿನ ಇರಿತಕ್ಕಿಂತ ಮಿಗಿಲಾಗಿ ಇರಿದಿತ್ತು !

ವೀರನ ಮಾರಣಹೋಮ ಸಾಂಗವಾಗಿ ಸಾಗಿತ್ತು ! ವಿಜಯನಗರ ದವರ ವಿಜಯದ ಸಂಕೇತವಾಗಿ.

ಆದರೆ ನರಹರಿಯ ಮುಖ ಮಾತ್ರ ಬಾಡಿರಲಿಲ್ಲ.

## ೨೦

ಗಜಪತಿಗೆ ಜಗನ್ಮೋಹಿನಿಯ ಸಲಹೆ ಸಂಪೂರ್ಣವಾಗಿ ಒಪ್ಪಿಗೆಯಾಗಿರಲಿಲ್ಲ. ಕೃಷ್ಣದೇವರಾಯನನ್ನು ಉತ್ಕಲದಿಂದ ಹೊರಗೆ ಕಳುಹಿಸುವ ವಿಷಯದಲ್ಲಿ ಜಗನ್ಮೋಹಿನಿ ಹೇಳಿದ ಮಾತು ಒಪ್ಪಿಗೆಯಾಗಿತ್ತು. ಕೃಷ್ಣದೇವರಾಯನನ್ನು ಉತ್ಕಲದಿಂದ ನಿರ್ಗಮಿಸುವಂತೆ ಮಾಡಲು ಜಗನ್ಮೋಹಿನಿಯನ್ನು ವಿವಾಹಮಾಡಿಕೊಡುವುದೇ ಸೂಕ್ತದಾರಿ ಎಂದು ತೋರಿತ್ತು. ನರಹರಿಪಾತ್ರನ ಸಾವಿನೊಂದಿಗೆ ಕೃಷ್ಣದೇವರಾಯನು ಜಗನ್ಮೋಹಿನಿಯನ್ನು ವಿವಾಹವಾಗುವುದಕ್ಕೆ ಇದ್ದ ದೊಡ್ಡ ಪ್ರತಿಬಂಧಕ ನಿವಾರಿಸಲ್ಪಟ್ಟಿತ್ತು. ನರಹರಿಯ ಸಾವಿನಿಂದ ಕೃಷ್ಣದೇವರಾಯನ ಮಾರ್ಗ ನಿಷ್ಕಂಟಕವಾಗಿತ್ತು.

ಜಗನ್ಮೋಹಿನಿ ನರಹರಿಪಾತ್ರನನ್ನು ಪ್ರಾಣಕ್ಕಿಂತ ಅತಿಶಯವಾಗಿ ಪ್ರೀತಿಸುತ್ತಿದ್ದಳು ನಿಜ. ಅವನನ್ನೇ ತ್ರಿಕರಣಪೂರ್ವಕವಾಗಿ ಪತಿ ಎಂಬುದಾಗಿ ಭಾವಿಸಿದ್ದಳು. ಜಗನ್ಮೋಹಿನಿಯ ಸುಖವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಈ ವಿವಾಹಕ್ಕೆ ಗಜಪತಿಯು ಸಮ್ಮತಿಸಿದ್ದನು. ನರಹರಿಪಾತ್ರನು ಎಲ್ಲ ರೀತಿಯಲ್ಲೂ ಜಗನ್ಮೋಹಿನಿಗೆ ತಕ್ಕ ವರನೆಂದು ಗಜಪತಿಯ ಕಲ್ಪನೆ ಇತ್ತು. ಎಂತಲೇ ಅವರ ವಿವಾಹಕ್ಕೆ ಅವನು ಚಡಪಡಿಸುತ್ತಿದ್ದನು. ದೈವದ ಮನಸ್ಸಿಗೆ ಈ ವಿವಾಹ ಬಂದಿರಲಿಲ್ಲವೆಂದೇ ನರಹರಿಪಾತ್ರನೊಂದಿಗೆ ಜಗನ್ಮೋಹಿನಿಯ ವಿವಾಹವಾಗುವುದಕ್ಕೆ ಮಹಾರಾಣಿ ವಿರೋಧ ವ್ಯಕ್ತಪಡಿಸಿದ್ದಳು. ಈಗ ಮಹಾರಾಣಿಯ ಸಮ್ಮತಿಯೂ ದೊರಕಿತ್ತು. ನರಹರಿ

ತೆಯ ಸಂಪರ್ಕ. ಶುದ್ಧ ಮುಗ್ಧ ಹೃದಯರಾದ ಈ ಜನ ಗಜಪತಿಗೆ ಬಹುವಾಗಿ ನೆರವಿತ್ತರು. ಎತ್ತರದಲ್ಲಿದ್ದ ಪೂಜಾಮಂದಿರವೊಂದನ್ನು ಸಂಪೂರ್ಣವಾಗಿ ಸ್ವಚ್ಛಮಾಡಿಕೊಟ್ಟು ಗಜಪತಿಯ ವಾಸಕ್ಕೆ ಬಿಟ್ಟು ಕೊಟ್ಟಿದ್ದರು. ಅವರುಗಳ ಊಟ, ವಸತಿ ಇತ್ಯಾದಿಗಳನ್ನು ಸಂಪೂರ್ಣ ನಿರ್ವಹಿಸುತ್ತಿದ್ದರು ಹಳ್ಳಿಯ ಜನ. ಆದರೆ ನರಹರಿಪಾತ್ರನ ಬಗ್ಗೆಯೂ, ವೀರಭದ್ರದೇವನಬಗ್ಗೆಯೂ ಯಾವರೀತಿಯ ವರ್ತಮಾನವೂ ಬಾರದಿದ್ದ ಮಾತಾಪಿತೃ ಹೃದಯ ತಲ್ಲಣಿಸುತ್ತಿತ್ತು.

ಇದನ್ನರಿತ ಆ ಹಳ್ಳಿಯ ಯುವಕನೋರ್ವ ಕಟಕಪುರಿಯತ್ತ ವಿಷಯ ಸಂಗ್ರಹಣೆ ಮಾಡಿಬರಲು ಹೊರಟ.

ಬಂದ ಅವನು ಇವರೆಲ್ಲರ ಹೃದಯಕ್ಕೂ ಸಿಡಿಲಿನೇಟನ್ನೇ ಹೊಡೆಯುವ ವರ್ತಮಾನವನ್ನು ತಂದ.

ನರಹರಿಪಾತ್ರನ ಮರಣವನ್ನರಿತ ಜಗನ್ಮೋಹಿನಿ ಮೂರ್ಛಾಕ್ರಾಂತಳಾದಳು. ವೀರಭದ್ರದೇವನ ಮರಣವನ್ನರಿತ ಲಕ್ಷ್ಮೀದೇವಿ ಭ್ರಮೆತಪ್ಪಿ ಬಿದ್ದುಬಿಟ್ಟಳು.

ಇತ್ತ ದರಿ, ಅತ್ತ ಪುಲಿ ಎಂಬಂತಾಯ್ತು ಗಜಪತಿಗೆ. ಅತ್ತ ಮಕ್ಕಳ ಮರಣವಾರ್ತೆಯ ಬರಸಿಡಿಲಿಗೆ ತುತ್ತಾಗಿದ್ದುದಲ್ಲದೆ, ಇತ್ತ ಜೀವಂತವಾಗಿದ್ದೂ ಕಷ್ಟವನ್ನರಿಯದ ಈ ಹೃದಯಗಳ ಕಷ್ಟವನ್ನು ಕಣ್ಣಾರ ಕಂಡು ಅನುಭವಿಸಬೇಕಾಗಿತ್ತು. ಒಮ್ಮೆ ತನ್ನ ಬಗೆಗೇ ತನಗೆ ಹೇಸಿಗೆಯಾಗುತ್ತಿದ್ದರೂ ಪರಿಸ್ಥಿತಿ ಗಂಡುಗಲಿಯಾದ ಗಜಪತಿಯ ಕಣ್ಣಿನಲ್ಲೂ ನೀರೂರುವಂತೆ ಮಾಡಿತು.

ಶೈತ್ಯೋಪಚಾರ ಮಾಡಿ, ಪತ್ನೀ ಪುತ್ರಿಯರನ್ನು ಎಚ್ಚರಿಸಿದ. ಜಗನ್ಮೋಹಿನಿಯ ಕಣ್ಣುಗಳು ಕಂದರ್ಪನನ್ನು ದಹಿಸಲು ತೆಗೆದ ಮಾಹೇಶ್ವರನ ಉರಿಗಣ್ಣಿನಂತೆ ಉರಿ ಕಾರುತ್ತಿತ್ತು.

ಅಣ್ಣನ ಮರಣವಾರ್ತೆಯನ್ನು ಕೇಳದಿದ್ದ ಹೆಣ್ಣು ಹೃದಯಕ್ಕೆ ಅದನ್ನು ಕೇಳದಾಗ ಉರಿಯಾರಿ, ಕಣ್ಣುಗಳು ಯಾವುದೋರೀತಿಯ ತಿರಸ್ಕಾರದ ಹೊಳಪನ್ನು ಪ್ರಕಾಶಗೊಳಿಸಿತು.

ಹೆಣ್ಣು ! ಹೆಣ್ಣಿನ ಕಣ್ಣಿನ ಪ್ರಕಾಶ !

"ಒಲಿದರೆ ನಾರಿ ಮುನಿದರೆ ಮಾರಿ"

ರೌದ್ರಿಯೂ ಹೌದು ಸೀತೇಯೂ ನಿಜ.

ಅದರಲ್ಲೂ ಕ್ಷಾತ್ರ ತೇಜಸ್ಸುಳ್ಳ ಜಗನ್ಮೋಹಿನಿಯಂತಹ ಹೆಣ್ಣು ಹುಲಿಗಳು. ಹಸಿದ ಹೆಣ್ಣು ಹುಲಿಯ ಕೈಗೆ ಸಿಕ್ಕಿದ ಹುಲ್ಲೆಯಂತೆ! ನರಹರಿ ಪಾತ್ರನ ಸಾವು ಅವಳನ್ನು ಕಾಳಿಯನ್ನಾಗಿಸಿತ್ತು! ಮೊದಲೇ ತಂದೆಯ ರಾಜ್ಯಾಪಹಾರದಿಂದ ಬೆಂದಿದ್ದ ರೋಷದ ಬೆಂಕಿಗೆ—ಈ ಘಟನೆ ಸಾಣೆ ಹಿಡಿದಂತಾಗಿತ್ತು. ಅದಾದಮೇಲೆ ಅಣ್ಣನ ಅಂತ್ಯ ಅವಳನ್ನು ಅದಾವುದೋ ಅನಿರ್ದಿಷ್ಟ ನಿರ್ಧಾರ ಮಾಡಲು ಅವಕಾಶಮಾಡಿಕೊಟ್ಟಿತು.

ಎಂತಲೇ ಕಂಬನಿ ಕರೆಯುತ್ತಿದ್ದ ಕಣ್ಣುಗಳಲ್ಲಿ ಕಾಲಾಗ್ನಿಯ ಲಾವಾ ರಸ ಮೂಡಿ ಹರಿದು ಮಾಯವಾಗಿತ್ತು.

ತನ್ನ ಬಗೆಗೆ—ತನ್ನವರ ಬಗೆಗೆ ಅಂತಿಮ ನಿರ್ಧಾರಕ್ಕೆ ಬಂದ ತೃಪ್ತಿಯೂ ಅದರಲ್ಲಿ ಪ್ರತಿಸ್ಪಂದನವಾಗುತ್ತಿತ್ತು.

ಹೂವಿನ ಕಂಪನ್ನು ಬೀರುವ ಹೆಣ್ಣಿನ ಹೃದಯ ದಾವಾಗ್ನಿಯ, ಕಾಲಾಗ್ನಿಯ ಆವಾಸಸ್ಥಾನವಾಯ್ತು.

ಅವಳ ಹೃದಯ ವಜ್ರಕಠೋರವಾಯ್ತು. ಅವಳ ಮೊಗದಲ್ಲಿ ತೃಪ್ತಿಯ ನಗೆ ತೇಲಿಬಂತು. ಕಣ್ಣುಗಳಲ್ಲಿ ಹರಿಯುತ್ತಿದ್ದ ನೀರು ನಿಂತು,

ಎಂತಲೇ ದುಃಖಿಸುತ್ತಿದ್ದ ತಂದೆಯ ಬಳಿ ಸಾರಿ, ಧೀರ ಗಂಭೀರ ಧ್ವನಿಯಿಂದ ಹೇಳಿದಳು.

"ಅಪ್ಪಾಜಿ, ಉತ್ಕಲದ ಮಹಾ ಮಾತೆಯ, ವೀರಮಾತೆಯ ಗರ್ಭದಲ್ಲಿ ಹುಟ್ಟಿ, ಆಕೆಯ ಪವಿತ್ರತೆಗೆ ಮಸಿಬಳಿಯುವಂತಹ ಹೇಡಿಗಳನ್ನು ಹೆರಲಿಲ್ಲ ವೀರಮಾತೆ. ಅವಳ ಪುತ್ರರಾದದ್ದೋ ವೀರರಂತೆ ಧೀರಯೋಧರಂತೆ ಮೆಟ್ಟಿ ಬರಲೆತ್ನಿಸುತ್ತಿದ್ದ ವೈರಿಗಳನ್ನು ಕೊನೆಯ ಉಸಿರಿರುವವರೆಗೂ ಅಸುರರಂತೆ ಹೋರಾಡಿ ಹಿಮ್ಮೆಟ್ಟಿಸಿ ಉತ್ಕಲದ ಕೀರ್ತಿಯನ್ನು ವಿಜಯದ ವೈಜಯಂತಿಗೇರಿಸಿದ್ದಾರೆ—ಅವರ ಜೀವನ ಉತ್ಕಲದ ಭವಿಷ್ಯದ ಚರಿತ್ರೆಯಲ್ಲಿ ಜಾಜ್ವಲ್ಯಮಾನವಾಗಿ ನಿಲ್ಲತಕ್ಕವು.

ಅವರುಗಳ ಬಾಳು ಧೃವತಾರೆಯಂತೆ, ಅಡಿಯ ಮುಂದಿಡೆ ಸ್ವರ್ಗವೆಂಬಂತೆ ಸರ್ವರೂ ಸ್ವರ್ಗದಲ್ಲಿ ಸುಖವಾಗಿದ್ದಾರೆ. ಅವರ ಬಗ್ಗೆ ನಾವುಗಳು ಕಂಬನಿ ಮಿಡಿಯುವುದಾಗಲೀ, ಅವರುಗಳಿಗೆ ಅಶ್ರು ಭಾಷ್ಪವನ್ನರ್ಪಿಸುವುದಾಗಲೀ ಅವರಿಗೆ ನಾವು ಅನ್ಯಾಯಮಾಡಿದಂತೆ, ಅವಮಾನಮಾಡಿದಂತೆ ಕಠಾರಿಯ ಏಟಿನಿಂದ, ಈಟಿಯ, ಭರ್ಜಿಯ ತಿವಿತದಿಂದ, ಖಡ್ಗದ ನಿಷ್ಕರುಣೆಯಿಂದ ರಕ್ತಸ್ನಾನಮಾಡಿ ಬಲಿದಾನ ಮಾಡಿ ಮಡಿದ ಹುತಾತ್ಮರಿಗೆ, ನಾವು ನಾಡ ಒಡೆಯರು ಕಣ್ಣೀರ ತರ್ಪಣ ಬಿಡುವುದೇ ?—ಎಂದಿಗೂ ತರವಲ್ಲ.

ರಕ್ತಕ್ಕೆ ರಕ್ತವೇ ಶಾಂತಿ. ರಕ್ತ ತೃಷಾತುರರಾಗಿ, ವೈರಿಗಳ ರಕ್ತ ಸಮುದ್ರದಲ್ಲಿ ನಮ್ಮ ಕೈಗಳನ್ನದ್ದಿ ತೊಳೆದು, ಆ ರಕ್ತ ಪ್ರವಾಹದಲ್ಲಿ ಮಡಿದವರಿಗೆ ತರ್ಪಣ ಕೊಡಬೇಕು. ರಕ್ತ ತರ್ಪಣ ! ರಕ್ತ ತರ್ಪಣದಿಂದಲೇ ಅವರ ಆತ್ಮಶಾಂತಿ ...

ಉತ್ಕಲಮಾತೆಯ ಹೆಣ್ಣುಸಂತಾನ ಇತರ ಹತ್ತು ಗಂಡುಗಳಿಗೆ ಸಮ, ಅವರಿಗೆ ಭಯ ! ಹ್ಹ .....ಹ್ಹ .... ಹ್ಹ. ಭಯವಿಲ್ಲ.

ಛಲ ! ಛಲ ! ಛಲ ! ರಕ್ತ ತರ್ಪಣದ ಛಲ.

ಯಾರ ರಕ್ತದಾಹ ಇಷ್ಟು ಲಕ್ಷಾಂತರ ಸಂಖ್ಯೆಯ ನಿರಪರಾಧಿಗಳ ಕಂಬನಿ ಮಿಡಿಸಿದೆಯೋ, ಯಾರ ರಾಜ್ಯದಾಹ ಇಷ್ಟು ಸಹಸ್ರಾರು ವೀರರನ್ನು ನೆಲಸಮ ಮಾಡಿದೆಯೋ, ಯಾರು ಅನ್ಯರ ವೃದ್ಧಿಗೆ ಕಿಚ್ಚು ಹಚ್ಚಿ ಇಂದು ನಕ್ಕು ನಲಿದು ಕುಣಿದಾಡುತ್ತಿದ್ದಾರೋ, ಯಾರ ರಾಕ್ಷಸೀ ದಾಹ, ಪೈಶಾಚಿಕ ತೃಷೆ ನಮ್ಮನ್ನು ಈ ಗತಿಗೆಳೆದಿದೆಯೋ ಅವರ ರಕ್ತ ! ರಕ್ತ ತರ್ಪಣ—ನನ್ನ ಕಣ್ಣು ಮುಂದೆಯೇ ಪ್ರೇತವಾಗಿದ್ದಾರೆ ! ಅವರು ! ಅವರು ! ಹ್ಹ..........ಹ್ಹ..........ಹ್ಹ

" ಅಪ್ಪಾಜಿ, ನನ್ನದೊಂದು ಕೊನೆಯ ಕೋರಿಕೆ ಇದೆ. ನೀವು ನಡೆಸಿಕೊಡುವಿರಾ "

—ಪಿಶಾಚಿಗ್ರಹ ಪೀಡಿತಳಾದವಳಂತೆ ಕೇಳಿದಳು ಜಗನ್ಮೋಹಿನಿ.

" ಹೇಳಮ್ಮ ನಿನ್ನ ಕೋರಿಕೆ ಏನೆಂದು—ಇಚ್ಛೆ ಏನೆಂದು ಕೇಳಲು ನಿಶ್ಶಕ್ತ ನಿರ್ಭಾಗ್ಯನಾಗಿರುವ ನನ್ನನ್ನು ನೀನೇ ಕೇಳಬೇಕು ಮಗು ಖಂಡಿತ ಹೇಳಮ್ಮ "

—ಬೆಪ್ಪಾಗಿ, ಹದ್ದು ಎರಗಿ ಬಿಟ್ಟ ಹಾವಿನಂತೆ ಹೇಳಿದ ಗಜಪತಿ. "ನಿಶ್ಶಕ್ತ.......... ನಿರ್ಭಾಗ್ಯ.......... ಅಪ್ಪಾಜಿ ನೀವಲ್ಲ. ಉತ್ಕಲದ ಹೆಸರನ್ನು ಸರಿದವರೂ ಹೇಡಿಗಳಲ್ಲ. ನನ್ನ ಆಶೋತ್ತರವನ್ನೀಡೇರಿಸಿ ಕೊಡುತ್ತೇನೆಂದು ಜಗನ್ನಾಥನಮೇಲೆ ಆಣೆ ಇಟ್ಟು ಹೇಳಿ"

—ಹುಚ್ಚಿಯಂತೆ ಅರಚಿದಳು ರಾಜಪುತ್ರಿ.

"ಎಂದು ನಿನ್ನ ಮಾತಿಗೆ ಇಲ್ಲವೆಂದಿರುವೆ? ಎಂದು ಮಾತಿಗೆ ತಪ್ಪಿರುವೆ? ಕನಸು ಮನಸಿನಲ್ಲಿಯೂ ನಿನ್ನ ಮೇಲ್ಮೆಗಾಗಿ ಶ್ರಮಿಸುತ್ತಿರುವ ನಾನು ನಿನಗೆ ಮೋಸಮಾಡುವೆನೆ. ಎಂದೂ ಈ ರೀತಿ ಪ್ರಶ್ನಿಸಿದವಳು ಇಂದೇಕೆ ಈರೀತಿ—ಮಗು"

"ಎಂದು......ಅಂದು......ಅಂದು..........ಇಂದು ! ನಡೆಸಿಕೊಡುವಿರಾ ಅಪ್ಪಾಜಿ" ಹಠವನ್ನು ಒಡಮಾಡಿಸಿ ಕೇಳಿದಳು ಜಗನ್ಮೋಹಿನಿ.

"ಜಗನ್ನಾಥನಾಣೆ ಆಗಲಮ್ಮ"

—ಬೇಸರದಿಂದ ನೊಂದು ಯಾತನೆ ತುಂಬಿ ತುಳುಕುವ ಸ್ವರದಲ್ಲಿ ಜಿಗುಪ್ಸೆಗೊಂಡು ಹೇಳಿದ ಗಜಪತಿ

ಹರ್ಷವನ್ನು ವ್ಯಕ್ತಪಡಿಸಿ........ಉನ್ಮಾದದಿಂದ ಕೂಡಿ........ ನಿರ್ಲಜ್ಜಳಾಗಿ........ಹೇಳಿದಳು ರಾಜಪುತ್ರಿ.

"ನನ್ನನ್ನು ಕೃಷ್ಣದೇವರಾಯನಿಗಿತ್ತು ವಿವಾಹಮಾಡಿ" ಎಂದು.

"ಏನು ?" ಸ್ಥಂಭೀಭೂತನಾಗಿ ಏನೂ ಕೇಳಿಸದವನಂತೆ ಕರ್ಕಶವಾಗಿ ಕೇಳಿದ ಗಜಪತಿ.

"ಹೌದು, ರಾಯನೊಡನೆ ನನ್ನ ವಿವಾಹ."

ನಿಶ್ಚಿತ ನಿರ್ಲಜ್ಜೆ ನಿರ್ಧಾರ ಧ್ವನಿ—ಅದು ರಾಜಪುತ್ರಿಯದು.

"ಕಾರಣ"

"ಕಾರಣ........ಇದೆ........ಉತ್ಕಲದ ರಕ್ತವೀಂಟಿದ ಪತಂಗವನ್ನು ಆಲಂಗಿಸಲು........ಮುದ್ದಿಸಲು........ಮುತ್ತಿಡಲು"........

ಎಲ್ಲ ತನ್ನ ಮಾತಿಗೂ ಕ್ರೌರ್ಯ ವ್ಯಂಗ್ಯ ತುಂಬಿದ ಕರಾಳ ಧ್ವನಿ ಇತ್ತು—ಮಾತನಾಡಿದಳು ರಾಜಪುತ್ರಿ ಜಗನ್ಮೋಹಿನಿ.

ಇದರ ಅಂತರಾರ್ಥವನ್ನರಿತ ಗಜಪತಿ ಮಾತನಾಡಲಿಲ್ಲ.

ಮಾತನಾಡದಿದ್ದುದೇ ಸಮ್ಮತವೆಂದು ತಿಳಿದು ಹರ್ಷಿಸಿದಳು ಜಗನ್ಮೋಹಿನಿ—ಪ್ರೇತಹರ್ಷವಾಗಿತ್ತು. ನಂದನ ವನ ಬೆಂದು ಬೂದಿಯಾಗಿತ್ತು.

೧೯

ನರಹರಿಪಾತ್ರನಿಂದ ಬೀಳ್ಕೊಂಡ ಮಹಾರಾಣಿ, ಜಗನ್ಮೋಹಿನಿ ಮತ್ತು ಗಜಪತಿ ಇವರುಗಳು ಕಾಡಿನ ಸೆರಗಿನಲ್ಲಿ ಯಾರಿಗೂ ಗೋಚರವಾಗ ದಂತೆ ಪ್ರಯಾಣಮಾಡಿ ಒಂದು ಹಳ್ಳಿಗೆ, ಮುಗ್ಧ ಹೃದಯಗಳಿಂದ ಕೂಡಿದ ಹತ್ತುಮನೆಯ ಹಳ್ಳಿಯೊಂದಕ್ಕೆ ಬಂದು ಸೇರಿದರು.

ದಾರಿಯ ಮಧ್ಯದಲ್ಲಿಯೇ ನರಹರಿಪಾತ್ರನಿಗಾಗಿ ಕಾದು, ಬೆಳ್ಳಿಯ ಬೆಳಕು ಮೂಡಿ, ಅವರಿಗೂ ಜ್ಞಾನೋದಯವಾಗಿ, ಶತ್ರುಗಳ ಕರಾಳದೃಷ್ಟಿಗೆ ಬೀಳಬಾರದೆಂದು, ಪ್ರಯಾಣ ಬೆಳಸಿ ಈ ಹಳ್ಳಿಗೆ ಬಂದಿದ್ದರು.

ಮಧ್ಯಮಾರ್ಗದಲ್ಲಿ ಸಿಕ್ಕಿದ ಕಾಡುಕುರುಬರು ಕೆಲವರು ಗಜಪತಿ ಯನ್ನು ಕಂಡು ತಮ್ಮ ಸಂಪೂರ್ಣ ಗೌರವವನ್ನೂ, ಸಹಾನುಭೂತಿಯನ್ನೂ ವ್ಯಕ್ತಪಡಿಸಿದರು.

ಮುಂದೆ ತನಗೆ ಬೆಂಬಲಿಗನಾಗಿ ನಿಂತು ಕೃಷ್ಣದೇವರಾಯನನ್ನು ಸೋಲಿಸಲು ನೆರವನ್ನು ನೀಡೆಂದು ಬೇಡಲು ಬಿಜಾಪುರದ ಅದಿಲ್‌ಶಹಾನ ನತ್ತ ಹೊರಟಿದ್ದನು ಗಜಪತಿ.

ಆ ಹಳ್ಳಿ! ಹಳ್ಳಿಯ ಜನ!

ಕಾಡಿನ ಮಧ್ಯೆ ಕಂಡೂಕಾಣದಂತೆ ಹರಡಿದ್ದ ಹತ್ತಾರು ಮನೆಗಳು, ಗುಡಿಸಲುಗಳೆಂದರೇ ಲೇಸು. ಬೇಟೆ ಮತ್ತು ಪಶುಪಾಲನೆಯಿಂದ ಜೀವಿ ಸುತ್ತಿದ್ದ ಈ ದ್ರಾವಿಡ ಜನಗಳಿಗೆ ನಾಗರೀಕತೆಯ ಸಂಪರ್ಕ. ಎಂದಾದ ರೊಮ್ಮೆ ಪ್ರಾಣಿಗಳ ತುಪ್ಪಟವನ್ನು ಸಂಗ್ರಹಿಸಿ ಪಟ್ಟಣದಲ್ಲಿ ಮಾರಿ, ಬೇಕಾದ ಕಾಳು, ಕಡ್ಡಿಗಳನ್ನು ಕೊಳ್ಳಲು ಹೋಗುವಾಗಲೇ ಪಟ್ಟಣದ ನಾಗರೀಕ

ಪಾತ್ರನ ಧೈರ್ಯ, ಸಾಹಸ ಸದ್ಗುಣಗಳನ್ನು ಅವನ ಉಚ್ಚ ಆದರ್ಶವನ್ನು ಕಣ್ಣಾರ ಕಂಡ ಮಹಾರಾಣಿಗೆ ಅವನಬಗ್ಗೆ ಸದಭಿಪ್ರಾಯವುಂಟಾಗಿತ್ತು. ಅವಳೂ ಗಜಪತಿಯಷ್ಟೇ ಈ ವಿವಾಹಕ್ಕೆ ಉತ್ಸುಕಳಾಗಿದ್ದಳು. ಆದರೆ ದೈವೇಚ್ಛೆ ಬೇರೆಯಾಗಿತ್ತು. ನರಹರಿಪಾತ್ರನು ಉತ್ಕಲದಿಂದ ಶತ್ರುಗಳನ್ನು ಹೊರಗಟ್ಟದ ಹೊರತು ಜಗನ್ಮೋಹಿನಿಯನ್ನು ವಿವಾಹಮಾಡಿಕೊಳ್ಳುವುದಿಲ್ಲ ವೆಂದು ಶಪಥಮಾಡಿದ್ದನು. ಈ ಶಪಥವನ್ನು ಮುರಿಯಲು ಯಾರಿಂದಲೂ ಸಾಧ್ಯವಿರಲಿಲ್ಲ. ಗಜಪತಿ ಹಾಗೂ ಲಕ್ಷ್ಮೀಬಾಯಿಯು ಒಮ್ಮೆ ಈ ಬಗ್ಗೆ ಪ್ರಯತ್ನಿಸಿ ವಿಫಲರಾಗಿದ್ದರು. ಆಗ ನರಹರಿಪಾತ್ರನು ಸೌಜನ್ಯದಲ್ಲಿ ಆದರೆ ನಿಷ್ಠುರವಾದ ಧ್ವನಿಯಲ್ಲಿ ಹೇಳಿದ್ದನು. "ಉತ್ಕಲದ ರಾಜ್ಯಲಕ್ಷ್ಮಿ ಸಾವು ಬದುಕುಗಳ ಹೋರಾಟದಲ್ಲಿ ಇರುವ ವಿಷಮಪರಿಸ್ಥಿತಿಯಲ್ಲಿ ನಮ್ಮ ವಿವಾಹಕ್ಕೆ ವೇಳೆಯೇ? ಅಪ್ಪಾಜಿ, ನನ್ನ ಮಾತನ್ನು ನೀವು ಅನ್ಯಥಾ ಭಾವಿಸಬಾರದು. ಜನತೆಗೆ ಎಲ್ಲ ರೀತಿಯಲ್ಲಿ ಆದರ್ಶವಾಗಿ ಇರಬೇಕಾದ ನಾವು ಹೀಗೆ ಅನುಚಿತ ರೀತಿಯಲ್ಲಿ ವರ್ತಿಸಿದರೆ ಜನತೆ ನಮ್ಮಬಗ್ಗೆ ಏನೆಂದು ತಿಳಿದೀತು?........ಇಲ್ಲ ಅಪ್ಪಾಜಿ, ನಮ್ಮ ಸಚ್ಚಾರಿತ್ರ್ಯಕ್ಕೆ ಅನುಚಿತವಾದ ಈ ಕಾರ್ಯದಿಂದ ಮಸಿ ಬಳಿಯಲಾರೆ." ಈ ಮಾತುಗಳನ್ನು ಕೇಳಿದಮೇಲೆ ಗಜಪತಿಗೆ ನರಹರಿಪಾತ್ರನನ್ನು ನಿರ್ಬಂಧಿಸಲು ಮನವಾಗಿರಲಿಲ್ಲವೆಂತಲೇ ನಡೆಯಬೇಕಾಗಿದ್ದ ಅವರ ವಿವಾಹ ಮುಂದಕ್ಕೆ ಹಾಕಲ್ಪಟ್ಟಿತ್ತು. ಈಗ ನರಹರಿಪಾತ್ರನು ಹಿಂದಿರುಗದ ಲೋಕಕ್ಕೆ ನಡೆದಿದ್ದನು. ಜಗನ್ಮೋಹಿನಿ ಯನ್ನು ಎಂದೆಂದಿಗೂ ಹಿಂದೆ ಉಳಿಸಿ........ಇದೇ ವಿಧಿಲೀಲೆ!........

ಈಗ ಜಗನ್ಮೋಹಿನಿಯು ಅಗಲಿದ ನರಹರಿಪಾತ್ರನನ್ನೇ ಹಂಬಲಿಸಿ ತನ್ನ ಸುಕುಮಾರ ಬಾಳ್ವೆಯನ್ನು ಹಾಳುಮಾಡಿಕೊಳ್ಳುವುದರಲ್ಲಿ ಅರ್ಥವಿರ ಲಿಲ್ಲ. ಅವಳು ಇನ್ನೂ ಜೀವನದಲ್ಲಿ ಕಾಲಿಡುತ್ತಿರುವ ಹಸುಳೆ. ಅವಳಿಗೆ ಬಾಳ ಹೊಸ್ತಿಲಿನಲ್ಲೇ ಎಂತಹ ಪೆಟ್ಟುಬಿದ್ದಿತ್ತು! ಈ ಪೆಟ್ಟಿನಿಂದ ಅವಳ ಬದುಕು ಮಣ್ಣುಗೂಡಬೇಕೆ? ಎಂಬುದೇ ಗಜಪತಿಯ ಮುಂದಿದ್ದ ಪ್ರಶ್ನೆ! ಜೀವನದ ಹೋರಾಟದಲ್ಲಿ ವ್ಯಕ್ತಿಗಳ ಆಸೆಆಕಾಂಕ್ಷೆಗಳೆಲ್ಲ ಎಲ್ಲಿ ನೆರವೇರುತ್ತವೆ? ತಾನು ಬಯಸಿದುದನ್ನು ಪಡೆಯುವ ಪುಣ್ಯ ಜಗನ್ಮೋಹಿನಿಗೆ ಇರಲಿಲ್ಲ. ಅವಳು ನರಹರಿಪಾತ್ರನೊಂದಿಗೆ ಕಟ್ಟಿದ್ದ ಹೊಂಗನಸಿನ ಭವ್ಯಮಂದಿರ

ಪುಡಿಪುಡಿಯಾಗಿತ್ತು. ಕರಾಳವಿಧಿ ಅವಳಿಗೆ ನಿಷ್ಠುರನಾಗಿದ್ದನು. ಹೀಗೆಂದ ಮಾತ್ರಕ್ಕೆ ಜಗನ್ಮೋಹಿನಿ ಆಜೀವ ಪರ್ಯಂತ ವಿಧಿಯನ್ನು ಶಪಿಸಿ ಕೊಂಡು ನರಕಯಾತನೆಯನ್ನು ಅನುಭವಿಸಬೇಕೆ? ಅವಳು ತನ್ನ ಗತ ಜೀವನವನ್ನು ಮರೆತು, ಹೊಸ ಬಾಳುವೆಗೆ ಆರಂಭಮಾಡಬಾರದೇಕೆ? ಎಂಬುದಾಗಿ ಗಜಪತಿಯು ಆಲೋಚಿಸಿದನು. ಜಗನ್ಮೋಹಿನಿ ಕೃಷ್ಣ ದೇವರಾಯನನ್ನು ವಿವಾಹವಾಗಲು ಇಚ್ಛಿಸುವುದನ್ನು ಕಂಡು, ಗಜಪತಿಗೆ ಒಂದು ಬಗೆಯ ಸಮಾಧಾನ ಉಂಟಾಗಿತ್ತು. ಅಂತಲೇ ಅವನು ಜಗನ್ಮೋಹಿನಿಯ ಸಲಹೆಯನ್ನು ಅಂಶತಃ ಒಪ್ಪಿಕೊಂಡಿದ್ದನು. ಇದರಿಂದ ಉತ್ಕಲ ಶತ್ರುಗಳ ಆಕ್ರಮಣದಿಂದ ಮುಕ್ತವಾಗಿ ಮತ್ತೆ ಸ್ವತಂತ್ರವಾಗುವು ದಲ್ಲದೆ, ಸೆರೆಯಲ್ಲಿರುವ ಯುವರಾಜಕುಮಾರ ರಾಮಚಂದ್ರದೇವ ಮತ್ತಿತರ ಉತ್ಕಲ ವೀರರು ಬಿಡುಗಡೆಯಾಗಿ, ಎರಡು ರಾಷ್ಟ್ರಗಳಿಗೆ ಸ್ನೇಹ ಏರ್ಪಡಲು ಜಗನ್ಮೋಹಿನಿಯ ಆಸೆ ಆಕಾಂಕ್ಷೆಗಳ ಬಲಿದಾನ ಅನಿವಾರ್ಯವಾಗಿತ್ತು. ರಾಷ್ಟ್ರದ ಹಿತಕ್ಕಾಗಿ, ವ್ಯಕ್ತಿಯ ಹಿತವನ್ನು ಬಲಿಗೊಡಬೇಕಾಗಿತ್ತು. ಜಗನ್ಮೋಹಿನಿ ತಾನಾಗಿ ಕೃಷ್ಣದೇವರಾಯನನ್ನು ವಿವಾಹವಾಗಲು ಸಮ್ಮತಿಸಿದ್ದುದರಿಂದ ಗಜಪತಿಯು ಈ ಧರ್ಮಸಂಕಟ ದಿಂದ ಪಾರಾಗಿದ್ದನು. ಎಂತಲೇ ಜಗನ್ಮೋಹಿನಿಯು ಸಲಹೆ ಅವನಿಗೆ ಪ್ರಿಯವೇ ಆಗಿತ್ತು. ಆದರೆ, ಜಗನ್ಮೋಹಿನಿಯು ಸೇಡಿನ, ಪ್ರತೀಕಾರದ ಮಾತು ತಿಳಿದಾಗ, ಏಕೋ ಗಜಪತಿಗೆ ಈ ಮಾತು ಸೇರದೆ ಹೋಗಿತ್ತು. ಜಗನ್ಮೋಹಿನಿಯು ರಾಷ್ಟ್ರದ ಹಿತಕ್ಕಾಗಿ ಕೃಷ್ಣದೇವರಾಯನನ್ನು ವಿವಾಹ ವಾಗದೆ, ಕೇವಲ ವೈಯಕ್ತಿಕ ಸೇಡಿಗಾಗಿ ವಿವಾಹವಾದರೆ ಅವಳ ತ್ಯಾಗ ವ್ಯರ್ಥವೆಂದೇ ಗಜಪತಿಯು ಭಾವಿಸಿದ. ಬಹುಶಃ ಜಗನ್ಮೋಹಿನಿ ನರ ಹರಿಪಾತ್ರನ ವಿಯೋಗದಿಂದ, ವೀರಭದ್ರದೇವನ ಆತ್ಮಹತ್ಯೆಯಿಂದ ಕ್ಷುಬ್ಧ ಳಾಗಿ ಕೃಷ್ಣದೇವರಾಯನಮೇಲೆ ಪ್ರತೀಕಾರ ಹಾತೊರೆಯುತ್ತಿರಬಹುದು. ಕೃಷ್ಣದೇವರಾಯನನ್ನೊಮ್ಮೆ ಅಗ್ನಿ ಸಾಕ್ಷಿಯಾಗಿ ವಿವಾಹವಾದರೆ ಅನಂತರ ಪತಿಯನ್ನು ಕೈಯ್ಯಾರ ಕೊಲ್ಲುವಂತಹ ಪತಿತೆಯಾಗಳು. ಕೃಷ್ಣದೇವ ರಾಯನ ಪ್ರಿಯಸಾನ್ನಿಧ್ಯದಲ್ಲಿ ಅವಳ ದ್ವೇಷದ ಬೆಂಕಿ ಇರಬಹುದು ಮುಂದೆ ಎಲ್ಲವೂ ಸುಗಮವಾಗಿ ನಡೆಯಬಹುದು ಎಂದು ಆಶಿಸಿದನು.

ಈಗ ಕೃಷ್ಣದೇವರಾಯನ ವಂಶದ ಬಗೆಗೆ, ಆವನ ವೈಯುಕ್ತಿಕ ಸದ್ಗುಣಗಳ ಬಗೆಗೆ ಗಜಪತಿಗೆ ಹೆಚ್ಚಿನ ಸಂಗತಿಗಳು ತಿಳಿದು ಬಂದಿದ್ದವು. ಕೃಷ್ಣದೇವರಾಯನೂ ತನ್ನಂತೆಯೇ ಚಂದ್ರವಂಶದಲ್ಲಿ ಹುಟ್ಟಿದವನೆಂಬ ಸಂಗತಿ ಪೊಟ್ಟನೂರಿನಲ್ಲಿ ನಿರ್ಮಿತವಾದ ವಿಜಯಸ್ಥಂಭದಿಂದ ಹೊರ ಪಟ್ಟಿತ್ತು. ಆ ವಿಜಯ ಸ್ಥಂಭದಲ್ಲಿ ಕೃಷ್ಣದೇವರಾಯನು ತನ್ನ ಬಿರುದು ಬಾವಲಿಗಳನ್ನು ಹೇಳಿಕೊಳ್ಳುವುದರ ಜತೆಗೆ, ತನ್ನ ಕುಲ ಗೋತ್ರಗಳನ್ನೂ ಸ್ಪಷ್ಟವಾಗಿ ಬರೆಸಿದ್ದನು. ಅದರಂತೆ ಚಂದ್ರನೇ ಮೂಲಪುರುಷ. ಅನಂತರ ಬುಧ. ಬುಧನ ವಂಶದಲ್ಲಿ ಪುರೂರವನು ಜನಿಸಿದ, ಅವನ ಮಗ ಆಯು. ಅವನ ಪುತ್ರ ಯಯಾತಿ ಅವನಿಗೆ ಇಬ್ಬರು ಮಕ್ಕಳು—ಯದು ಮತ್ತು ದೂರ್ವಸು. ದೂರ್ವಸುವಿನ ವಂಶದತ್ತ ತಿಮ್ಮಕ್ಷಿತಿಪತಿ ಹುಟ್ಟಿದನು. ಅವನ ಪತ್ನಿ ದೇವಕಿಯಲ್ಲಿ ಹುಟ್ಟಿದವನೇ ಈಶ್ವರ. ಈಶ್ವರನಿಗೆ ಪತ್ನಿ ಬುಕ್ಕಾಂಬಿಕೆಯಲ್ಲಿ ತಿಮ್ಮರಾಜ ಮತ್ತು ನರಸಿಂಹ ರಾಜರೆಂಬ ಇಬ್ಬರು ಮಕ್ಕಳು. ಈ ನರಸಿಂಹ ರಾಜನೇ ಎರಡನೆ ಸಂತತಿಯ ಮೂಲ ಪುರುಷ. ಈ ನರಸಿಂಹರಾಜನಿಗೆ ತಿಪ್ಪಾಂಬಿಕೆಯಲ್ಲಿ ವೀರನರಸಿಂಹನೂ, ನಾಗಲಾಂಬಿಕೆಯಲ್ಲಿ ಕೃಷ್ಣದೇವರಾಯನೂ ಜನಿಸಿದ್ದರು. ಹೀಗೆ ಕೃಷ್ಣದೇವರಾಯನು ಸಕಲವಿಧದಲ್ಲಿ ಶ್ರೇಷ್ಠ ಕ್ಷತ್ರಿಯನೆಂಬುದರ ಬಗ್ಗೆ ಈಗ ಸಂಶಯ ಉಳಿದಿರಲಿಲ್ಲ.

ಇದರಂತೆಯೇ ಕೃಷ್ಣದೇವರಾಯನು ವೀರಭದ್ರದೇವನನ್ನೂ, ರಾಮಚಂದ್ರದೇವ ಹಾಗೂ ಮಹಾರಾಣಿ ಲಕ್ಷ್ಮೀದೇವಿಯನ್ನೂ ನಡೆಸಿಕೊಂಡ ರೀತಿ ನರಹರಿಪಾತ್ರ ಹಾಗೂ ಲಕ್ಷ್ಮೀಬಾಯಿಯಿಂದ ಕೇಳಿದ್ದನು. ಅವನ ಬಗ್ಗೆ ಗೌರವ ಉಂಟಾಗಿತ್ತು. ಅವನಿಗೆ ತನ್ನ ಮಗಳನ್ನು ಕೊಡಲು ವಂಶದ ದುರಭಿಮಾನವಾಗಲೀ, ಅಧರ್ಮದಿಂದ ಸಿಂಹಾಸನವನ್ನೇರಿದನೆಂಬ ವಿಪರೀತ ಕಲ್ಪನೆಯಾಗಲೀ ಅಡ್ಡಿ ಬರಲಿಲ್ಲ. ವಂಶದ ಬಗ್ಗೆ ಗಜಪತಿಗಿದ್ದ ತಪ್ಪು ಅಭಿಪ್ರಾಯ ಎಂದೋ ಹಾರಿಹೋಗಿತ್ತು. ಕೃಷ್ಣದೇವರಾಯನು ಉತ್ಕಲದ ದಂಡಯಾತ್ರೆಯಲ್ಲಿ ಪ್ರತಿಬಾರಿಯೂ ಜಯ ಗಳಿಸಿದ ಸಂಗತಿ, ಅವನು ದೈವಾನುಗ್ರಹಕ್ಕೆ ಪಾತ್ರನೆಂಬುದನ್ನು ಮನದಟ್ಟುಮಾಡಿಕೊಟ್ಟಿತ್ತು. ಹೀಗಾಗಿ, ಕೃಷ್ಣದೇವರಾಯನಿಗೆ ಜಗನ್ಮೋಹಿನಿಯನ್ನು ಕೊಟ್ಟು ಮದುವೆ

ಮಾಡುವುದು ಪ್ರಿಯವಾದ ಕಾರ್ಯವೇ ಆಗಿತ್ತು. ಆದರೆ ಹಿಂದೆ ಜಗನ್ಮೋಹಿನಿಯನ್ನು ವಿವಾಹವಾಗಲು ಹಾತೊರೆದಿದ್ದ ಕೃಷ್ಣದೇವರಾಯನು ಈಗ ಅದೇ ಜಗನ್ಮೋಹಿನಿಯನ್ನು ತನ್ನ ಕುದುರೆ ಲಾಳ ಹೊಡೆಯುವ ಕಮ್ಮಾರನಿಗೆ ಕೊಟ್ಟು ವಿವಾಹಮಾಡುವುದಾಗಿ ಪ್ರತಿಜ್ಞೆಮಾಡಿದ್ದನು. ಕೃಷ್ಣದೇವರಾಯನೊಡನೆ ಈಗ ತಾನು ಸಂಧಾನಕ್ಕೆಳೆಸಿದರೆ, ಜಗನ್ಮೋಹಿನಿಯನ್ನು ಕೃಷ್ಣದೇವರಾಯನು ತಿರಸ್ಕರಿಸಿ, ಅವಳನ್ನು ತನ್ನ ವಾಗ್ದಾನದಂತೆ ಕಮ್ಮಾರನಿಗೆ ಕೊಟ್ಟು ವಿವಾಹಮಾಡಬಹುದು. ಹೀಗಾಗಿ ತಮ್ಮ ಸಂಧಾನ ವಿಫಲವಾದರೆ, ಎಂಬ ಅನುಮಾನ ಗಜಪತಿಯನ್ನು ಬಾಧಿಸಿತು. ಕಡೆಗೆ ದೈವದಮೇಲೆ ಭಾರಹಾಕಿ, ಕೃಷ್ಣದೇವರಾಯನ ಅಸಮಾಧಾನವನ್ನು ಕಳೆದು, ಸಂಧಾನವನ್ನು ಕುದುರಿಸಲು ತಿಮ್ಮರಸನೇ ಸರಿಯಾದ ವ್ಯಕ್ತಿ ಎಂದು ಅವನ ಬಳಿಗೆ, ದೂತನನ್ನು ಕಳುಹಿಸಿಕೊಟ್ಟನು.

ದೂತನು ಗಜಪತಿಯ ನಿರೂಪದೊಂದಿಗೆ ಸಕಾಲದಲ್ಲಿ ಕಟಕಪುರಿಯನ್ನು ತಲಪಿ, ತಿಮ್ಮರಸನನ್ನು ಕಂಡು, ರಾಯಸವನ್ನು ಅವನಿಗೆ ಒಪ್ಪಿಸಿದನು. ಗಜಪತಿಯು ಬರೆದಿದ್ದ ನಿರೂಪವನ್ನು ಓದಿಕೊಂಡು ತಿಮ್ಮರಸನಿಗೆ ತುಂಬಾ ಸಂತೋಷ ಉಂಟಾಯಿತು. ತನ್ನ ಬಹಳ ದಿನಗಳ ಕನಸು ನನಸಾಯಿತೆಂದು ಹಿಗ್ಗಿದನು. ಈ ಓಲೆಯನ್ನು ತಂದ ದೂತನನ್ನು ಉಚಿತ ರೀತಿಯಲ್ಲಿ ಸನ್ಮಾನಿಸಿ, ಗೌರವಿಸಿದನು.

ಕೃಷ್ಣದೇವರಾಯನು ತಿಮ್ಮರಸನನ್ನು ಕಟಕಪುರಿಗೆ ಕಳುಹಿಸಿಕೊಟ್ಟುದರ ಉದ್ದೇಶ, ಪ್ರತಾಪರುದ್ರಗಜಪತಿಯನ್ನೂ, ಜಗನ್ಮೋಹಿನಿಯನ್ನೂ ಕೈಸೆರೆ ಹಿಡಿದು ತನಗೆ ಒಪ್ಪಿಸಬೇಕೆಂದು. ಆದರೆ ಕಟಕಪುರಿ ತಿಮ್ಮರಸನ ವಶವಾದರೂ ಗಜಪತಿ ಮಾತ್ರ ತಿಮ್ಮರಸನ ಕೈಯ್ಯಿಂದ ತಪ್ಪಿಸಿಕೊಂಡುಹೋಗಿದ್ದನು. ಈಗ ಗಜಪತಿ ತಾನಾಗಿ ಶರಣು ಬಂದು ಒಂದು ನಿರೂಪವನ್ನು ಕಳುಹಿಸಿಕೊಟ್ಟಿದ್ದನು. ಕೃಷ್ಣದೇವರಾಯನಿಗೆ ಹೇಗೆ ಮುಖ ತೋರಿಸುವುದೆಂದು ಚಿಂತಿಸುತ್ತಿದ್ದ ತಿಮ್ಮರಸನಿಗೆ ಗಜಪತಿಯ ದೂತನು ಆಶಾದೀವಿಗೆಯಾಗಿ ಬಂದಿದ್ದನು.

ರಾಜಕಾರಣ ನಿಪುಣನಾದ ತಿಮ್ಮರಸನು ಈ ಮೊದಲೇ ಇಂತಹ ಸಂದರ್ಭ ಒದಗಿಬರಬಹುದೆಂದು ಊಹಿಸಿದ್ದನು. ಅವನ ಊಹೆ ವ್ಯರ್ಥ

ವಾಗಲಿಲ್ಲ. ಅವನು ನಿರೀಕ್ಷಿಸಿದಂತೆ ಪ್ರತಾಪರುದ್ರ ಗಜಪತಿಯು ಕೃಷ್ಣ ದೇವರಾಯನೊಂದಿಗೆ ಸಂಧಿಗಾಗಿ ಬಂದಿದ್ದನು. ಇಂತಹ ಪ್ರಸಂಗ ಬಂದಾಗ ತಾವು ಹೇಗೆ ನಡೆದುಕೊಳ್ಳಬೇಕು ? ಎರಡುಬಾರಿ ತಮ್ಮ ಸಂಧಾನವನ್ನು ತಿರಸ್ಕರಿಸಿದ್ದ ಪ್ರತಾಪರುದ್ರ ಗಜಪತಿಯ ಸೇಡು, ಸಂಧಿಗಾಗಿ ಬಂದಾಗ ತಾವು ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಬೇಕೆ? ಅಥವಾ ಉದ್ಧಟರಾಗಿ ವರ್ತಿಸಿದ ಗಜಪತಿಯನ್ನು ಕ್ಷಮಿಸಿ, ಅವನಿಗೆ ಕ್ಷಮಾದಾನ ನೀಡಿ, ಅವನೊಡನೆ ಸಂಧಿಮಾಡಿಕೊಳ್ಳಬೇಕೆ ? ಈ ಪ್ರಶ್ನೆ ತುಂಬಾ ತೊಡಕಿನ ಪ್ರಶ್ನೆಯಾಗಿತ್ತು. ತಿಮ್ಮರಸನಿಗೆ ಗಜಪತಿಯಮೇಲೆ ವೈಯುಕ್ತಿವಾಗಿ ದ್ವೇಷವಿರಲಿಲ್ಲ. ಅವನ ದೈವಭಕ್ತಿಯನ್ನು ಇತರ ಸದ್ಗುಣಗಳನ್ನು ಬಹುವಾಗಿ ಕೇಳಿದ್ದನು. ಅವನಂತಹ ಸತ್ವಶಾಲಿಯಾದ ಅರಸನು ತಮ್ಮ ಮಿತ್ರನಾದರೆ, ತಮ್ಮ ಬಲದ್ವಿಗುಣಗೊಳ್ಳುವುದೆಂದು ತಿಮ್ಮರಸನ ಬಹು ದಿನಗಳ ಕನಸು. ಈ ಕನಸನ್ನು ನನಸು ಮಾಡಿಕೊಳ್ಳುವ ಸಲುವಾಗಿ ಎರಡುಬಾರಿ ಸಂಧಾನಕ್ಕೆ ಪ್ರಯತ್ನಿಸಿ, ಆದಷ್ಟು ಮಟ್ಟಿಗೆ ಯುದ್ಧವನ್ನು ನಿಲ್ಲಿಸಲು ಪ್ರಯತ್ನಿಸಿದ್ದನು. ಆದರೆ ಅವನೊಂದು ಬಗೆದರೆ ದೈವವೊಂದು ಬಗೆದಿತ್ತು ತಿಮ್ಮರಸನ ಎಲ್ಲಪ್ರಯತ್ನ ನಿರರ್ಥಕವಾಗಿತ್ತು. ಈಗ ವಿಜಯನಗರದ ಭಾಗ್ಯ ರವಿಮೂಡಿದನೆಂಬಂತೆ, ಗಜಪತಿಯು ತಾನಾಗಿ ಸಂಧಾನಕ್ಕೆ ಬರೆಸಿದ್ದನು. ತಾನು ಹಿಂದೆ ಹಾಕಿದ ಷರತ್ತುಗಳನ್ನು ಯಾಚಿಸಿ ಪತ್ರ ಬರೆದಿದ್ದನು. ಈ ಪತ್ರದಿಂದ ತಿಮ್ಮರಸನಿಗೆ ಆದ ಸಂತೋಷ ಎಷ್ಟೆಂವರೆ, ಈ ಪತ್ರದ ವಾರ್ತೆಯನ್ನು ಕೃಷ್ಣದೇವರಾಯನಿಗೆ ತಿಳಿಸಲು ದೂತನನ್ನು ಜತೆಯಲ್ಲಿ ಕರೆದುಕೊಂಡು ತಾನೇ ಪೊಟ್ಟನೂರಿಗೆ ಹೊರಟನು.

ಪೊಟ್ಟನೂರಿನ ಅರಮನೆಯಲ್ಲಿ ಕೃಷ್ಣದೇವರಾಯನು ವಿಶ್ರಾಂತಿ ಸುಖವನ್ನು ಅನುಭಸುತ್ತಿದ್ದನು. ಕಟಕಪುರಿಯಮೇಲೆ ದಂಡೆತ್ತಿಹೊದ ಅತ್ಯಲ್ಪ ಕಾಲದಲ್ಲಿಯೇ ಕಟಕ ಪುರಿಯು ತಮ್ಮವಶವಾದ ಸಂತೋಷದ ವಾರ್ತೆಯನ್ನು ದೂತರ ಮುಖೇನ ಕೇಳಿದ್ದನು. ಈಗ ಅಲ್ಲಿನ ಆಡಳಿತದ ವ್ಯವಸ್ಥೆಯಲ್ಲಿ ತೊಡಗಿರಬೇಕಾಗಿದ್ದ ತಿಮ್ಮರಸನು ಹಠಾತ್ತನೆ ತನ್ನನ್ನು ಕಾಣಿಸಿಕೊಂಡಾಗ ಕೃಷ್ಣದೇವರಾಯನಿಗೆ ಅಚ್ಚರಿಯಾಗದೆ ಇರಲಿಲ್ಲ.

ತಿಮ್ಮರಸನ ಆಗಮನದಲ್ಲಿ ಏನೋ ಮಹತ್ವವಿದೆ ಎಂದು ಊಹಿಸಿದನು. ಅವನು ತಿಮ್ಮರಸನನ್ನು ವಿಶ್ವಾಸದಿಂದ ಬರಮಾಡಿಕೊಂಡು ಕಟಕ ಪುರಿಯ ವೃತ್ತಾಂತವನ್ನೆಲ್ಲಾ ಆಸಕ್ತಿಯಿಂದ ಕೇಳಿ ತಿಳಿದುಕೊಂಡನು. ಇಷ್ಟಾದರೂ ತಿಮ್ಮರಸನು ಹೇಳಬೇಕೆಂದಿದ್ದ ವಿಷಯದ ಪ್ರಸ್ತಾಪ ಬರಲೇ ಇಲ್ಲ. ತಿಮ್ಮರಸನ ಮಾತೆಲ್ಲವನ್ನು ಕೇಳಿದ ಮೇಲೆ ಕೃಷ್ಣದೇವರಾಯನು ನಿಟ್ಟುಸಿರುಬಿಡುತ್ತಾ ಹೇಳಿದ.

"ಪಂಪಾಪತಿಯ ದಯೆಯಿಂದ, ಎಲ್ಲವು ನಾವು ನಿರೀಕ್ಷಿಸಿದಂತೆಯೇ ಸುಲಲಿತವಾಗಿ ಕೈಗೂಡಿತು. ಆದರೆ ಒಂದು ಸಂಗತಿ ಮಾತ್ರ ಕಡೆಗೂ ಈಡೇರದೆ ಹೋಯಿತು!"

ಕೃಷ್ಣದೇವರಾಯನು ಯಾವ ಸಂಗತಿಯನ್ನು ಗುರಿಯಲ್ಲಿ ಇಟ್ಟು ಕೊಂಡು ಈ ಮಾತು ಹೇಳುತ್ತಿರುವನೆಂಬುದನ್ನು ತಿಳಿದ ತಿಮ್ಮರಸನು ನಗುತ್ತಾ ಹೇಳಿದನು.

"ಆ ಸಂಗತಿಯೂ ಈಡೇರಿದೆ ಪ್ರಭು!"

"ಏನು ಪ್ರತಾಪರುದ್ರಗಜಪತಿ, ಜಗನ್ಮೋಹಿನಿಯರು ಕೈಸೆರೆ ಸಿಕ್ಕಿದರೆ?"

"ಇಲ್ಲ ಪ್ರಭು!"

"ಹಾಗಾದರೆ ನಮ್ಮ ಆಸೆ ಈಡೇರಿದೆ ಎಂದು ಹೇಳಿದರಲ್ಲ!"

"ಹೌದು ಪ್ರಭು ಹೇಳಿದೆ!"

"ಅಪ್ಪಾಜಿ, ನಿಮ್ಮ ಮಾತು ನನಗೆ ಅರ್ಥವಾಗುತ್ತಿಲ್ಲ. ಅದೇನು ಸಂಗತಿ ಎಂಬುದನ್ನು ಬಿಡಿಸಿ ಹೇಳಬೇಕು!"

"ಪ್ರಭುಗಳ ಇಚ್ಛೆ ಈಡೇರಿದೆ!"

"ಹೇಗೆ?"

"ಪ್ರತಾಪರುದ್ರಗಜಪತಿಯು ಕೈಸೆರೆ ಸಿಕ್ಕದೆ ಇದ್ದರೂ, ಅವರು ಸೋತು ಶರಣಾಗತರಾಗಿ ಬಂದಿದ್ದಾರೆ! ಈಗ ಅವರು ನಮ್ಮ ಬಳಿಗೆ ಸಂಧಿಗಾಗಿ ದೂತನನ್ನು ಕಳುಹಿಸಿಕೊಟ್ಟಿದ್ದಾರೆ!"

ಈ ಮಾತನ್ನು ಕೇಳಿ ಕೃಷ್ಣದೇವರಾಯನು ಅವಾಕ್ಕಾಗಿ ಕುಳಿತನು.

ಬಹುಶಃ ಈ ಸುದ್ದಿಯನ್ನು ಅವನು ಇಷ್ಟುಬೇಗ ನಿರೀಕ್ಷಿಸಿರಲಿಲ್ಲವೆಂದು ತೋರುತ್ತದೆ.

"ಅಪ್ಪಾಜಿ; ಹಿಂದೆ ನಾವು ಎರಡುಬಾರಿ ಸಂಧಿಗಾಗಿ ಪ್ರಯತ್ನಿಸಿದಾಗ ಉದ್ಧಟತನದಿಂದ ವರ್ತಿಸಿದ ಗಜಪತಿಯು ಸಂಧಾನಕ್ಕಾಗಿ ಬಂದಿದ್ದಾನೆಯೇ? ಸುಳ್ಳು! ನೀವು ಮೋಜಿಗಾಗಿ ಹೇಳುತ್ತಿರಬೇಕು."

"ನನ್ನ ಮಾತು ಸತ್ಯ ಪ್ರಭು"

"ಹಾಗಾದರೆ, ಗಜಪತಿಯು ನಮ್ಮ ಬಳಿಗೆ ಸಂಧಿಗಾಗಿ ದೂತನನ್ನು ಕಳುಹಿಸಿಕೊಟ್ಟಿದ್ದಾರೆಯೇ?"

"ಹೌದು ಪ್ರಭು!"

"ಈ ವಾರ್ತೆಯನ್ನು ತಿಳಿಸುವ ಸಲುವಾಗಿ ನೀವು ಕಟಕಪುರಿಯಿಂದ ಬಂದಿರಾ?" "ನೀವೇಕೆ ಇಷ್ಟೆಲ್ಲಾ ತೊಂದರೆ ತೆಗೆದುಕೊಂಡಿರೋ ಕಾಣೆ. ನೀವು ಇಲ್ಲಿಗೆ ಬರುವಬದಲು ಆ ದೂತನನ್ನೇ ಕಳುಹಿಸಿಕೊಟ್ಟಿದ್ದರೆ ಸಾಕಾಗಿತ್ತು."

"ಏಕೆ ಪ್ರಭು, ನಾನು ಬಂದುದರಿಂದ ತಮಗೆ ಅಪಚಾರವಾಯಿತೆ?"

"ಹಾಗೇನಿಲ್ಲ, ಸುಮ್ಮನೆ ಹೇಳಿದೆ. ಈ ಸಂಧಿಯ ಸುದ್ದಿ ಅಂತಹ ಮಹತ್ವದ ಸಂಗತಿ ಏನೂ ಅಲ್ಲ. ನೀವು ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಇಲ್ಲಿಗೆ ಬರುವಂತಹ ಮಹತ್ವದ ಸುದ್ದಿ ಇದಲ್ಲ. ಅದಕ್ಕಾಗಿ ಹೇಳಿದೆ ಅಷ್ಟೆ!"

"ಈ ಸಂಧಾನದ ಸುದ್ದಿ ಮಹತ್ವದ ಸುದ್ದಿಯಲ್ಲವೇ ಪ್ರಭು?"

"ನಾನು ಹಾಗೆ ಭಾವಿಸಿಲ್ಲ!"

"ಏಕೆ?"

"ಇದರಲ್ಲಿ ಯಾವ ಮಹತ್ವವೂ ಇಲ್ಲ!"

"ಹಾಗೆಂದರೆ ಹೇಗೆ ಪ್ರಭು!"

"ಹೌದು ಅಪ್ಪಾಜಿ! ಈ ಸಂಧಾನ ನಾನು ಬಹಳ ದಿನಗಳಿಂದ ನಿರೀಕ್ಷಿಸುತ್ತಿದ್ದ ಸಂಗತಿ—ಇಂದಲ್ಲ ನಾಳೆ ತನ್ನ ಅಕೃತ್ಯಕ್ಕಾಗಿ ಪರಿತಪಿಸಿ ತನ್ನ ಬಳಿಗೆ ಸಂಧಾನಕ್ಕೆ ಬರುವನೆಂಬುದು ನನಗೆ ಚನ್ನಾಗಿ ತಿಳಿದಿತ್ತು. ನನ್ನ ಊಹೆ ಸುಳ್ಳಾಗಲಿಲ್ಲ!"

"ಹೌದು ಪ್ರಭು !"

"ಅಂತಲೇ ನಾನು ಹೇಳುವುದು. ಈ ಸಂಧಾನದಲ್ಲಿ ಯಾವ ಮಹತ್ವವೂ ಇರಲಿಲ್ಲ !"

"ಪ್ರಭುಗಳು, ಏನೋ ಒಂದುಬಗೆಯಾಗಿ ಹೇಳುತ್ತಿರುವುದನ್ನು ನೋಡಿದರೆ, ಗಜಪತಿಯಮೇಲೆ ಸೇಡುತೀರಿಸಿಕೊಳ್ಳುವಂತೆ ಕಾಣುತ್ತಿದೆ."

"ನೀವು ನಿಜವನ್ನೇ ಹೇಳಿದಿರಿ ಅಪ್ಪಾಜಿ. ಈಗ ನಮಗೆ ಬೇಕಾಗಿರುವುದು ಸೇಡು. ಸೇಡಿಗೆ ತಕ್ಕ ಸೇಡು. ಪ್ರತೀಕಾರಕ್ಕೆ ತಕ್ಕ ಪ್ರತೀಕಾರ !"

"ಇದನ್ನು ತಮ್ಮಂತಹ ಪ್ರಭುಗಳು ಹೇಳುವ ಮಾತಲ್ಲ ಪ್ರಭು ! ತಾವು ಗುಣನಿಧಿಗಳು. ಶರಣಾಗತ ರಕ್ಷಕರು. ತಮ್ಮ ಮೇಲೆ ಕೈಮಾಡಲು ಬಂದ ಕೊಲೆಪಾತಕನಿಗೂ ಕ್ಷಮಾದಾನ ನೀಡಿದ ಮಹಾಪುರುಷರು. ಹೀಗಿರುವಲ್ಲಿ ಸೋತು, ರಾಜ್ಯ ಕೋಶಗಳನ್ನು ಕಳೆದುಕೊಂಡು ಪತ್ನಿಪುತ್ರರನ್ನು ಕಟ್ಟಿಕೊಂಡು ನಿಲ್ಲಲು ನೆಲೆಯಿಲ್ಲದೆ, ದೇಸಿಗನಂತೆ ಅಲೆಯುತ್ತಾ ಇರುವ ಪ್ರತಾಪರುದ್ರ ಗಜಪತಿಯು ಆರ್ತಪ್ರಾಣನಾಗಿ ಸಂಧಿಗಾಗಿ ಬಂದಿರುವಾಗ ಅವರನ್ನು ತಾವು ಶತ್ರುವೆಂದು ಪರಿಗಣಿಸದೆ ಮಿತ್ರನೆಂದೆ ಪರಿಗಣಿಸಿ, ಅವರ ಸರ್ವಾಪರಾಧಗಳನ್ನುಮರೆತು ಕ್ಷಮಾದಾನ ನೀಡಬೇಕು !"

"ಕ್ಷಮಾದಾನ ಗಜಪತಿಗೆ ಇಲ್ಲ !"

"ಏಕೆ ಪ್ರಭು !"

"ಕುಲಮದದಿಂದ ಸೊಕ್ಕಿ ಮೆರೆದು, ನನ್ನನ್ನು ತಿರಸ್ಕಾರದಿಂದ ನಡೆಸಿಕೊಂಡುದಲ್ಲದೆ ನಮ್ಮ ಪಿತಾಮಹರನ್ನು ಅಕಾರಣವಾಗಿ ನಿಂದಿಸಿ, ಕಲಂಕ ಹಚ್ಚಲು ನೋಡಿದ ಆ ದ್ರೋಹಿ ಗಜಪತಿಗೆ ಕ್ಷಮೆಯಿಲ್ಲ ! ಅವನನ್ನು ಹಿಡಿತರಿಸಿ, ವಿಚಾರಣೆಗೆ ಗುರಿಪಡಿಸಿ, ಉಗ್ರವಾಗಿ ಶಿಕ್ಷಿಸಬೇಕು. ಆ ಜಗನ್ಮೋಹಿನಿಯನ್ನು ನನ್ನಪ್ರತಿಜ್ಞೆಯಂತೆ, ಕಮ್ಮಾರನಿಗೆ ಮದುವೆಮಾಡಿ, ಆ ಮೂಲಕ ಆ ಗಜಪತಿಯ ಕುಲಮದಕ್ಕೆ ಒತ್ತಿ ಇಡಬೇಕು. ಅಲ್ಲಿಯತನಕ ನನ್ನಮನಸ್ಸಿಗೆ ಸಮಾಧಾನವಿಲ್ಲ !"

ಶರಣಾಗತರಾದವರ ಮೇಲೆ ದರ್ಪತೋರಿಸುವುದು ಉಚಿತ ರಾಜ ನೀತಿಯಲ್ಲ ಪ್ರಭು! ಶರಣು ಬಂದವರು ಯಾರೇ ಇರಲಿ—ಶತ್ರುವೇ ಇರಲಿ, ಮಿತ್ರನೇ ಇರಲಿ ಅವರನ್ನುರಕ್ಷಿಸಬೇಕಾದುದು ಪ್ರಭುಗಳ ಕರ್ತವ್ಯ. ಮಹಾಪ್ರಭುಗಳು ಸಾಮಾನ್ಯ ಮಾನವರಂತೆ ಕಾಮಕ್ರೋಧಗಳೇ ಮೊದಲಾದ ಅರಿಷಡ್ವರ್ಗಗಳಿಗೆ ಒಳಗಾಗಬಾರದು! ಮಕುಟ ಧರಿಸಿರುವ ತಾವು ಒಂದು ವ್ಯಕ್ತಿಯಲ್ಲ, ಒಂದು ಶಕ್ತಿ! ತಾವು ಇಡೀ ನಾಡಿನ ಜನತೆಯ ಪ್ರತಿನಿಧಿಗಳು. ಪ್ರತ್ಯಕ್ಷ ದೇವತಾಸ್ವರೂಪರು. ತಾವು ಮಾನವ ಸಹಜವಾದ ದೌರ್ಬಲ್ಯಕ್ಕೆ ತಾವು ಬಳಗಾಗಬಾರದು. ಪ್ರಭುಗಳು ಅಮಾನುಷರಾಗಬಾರದು. ಅತಿಮಾನವರಾಗಬೇಕು. ತಾವು ಅತಿಮಾನವರಾಗದಹೊರತು ತಮ್ಮಿಂದ ದುಷ್ಟ ಶಿಕ್ಷಣ, ಶಿಷ್ಟಪರಿಪಾಲನ ಕಾರ್ಯಗಳು ನಡೆಯಲಾರವು. ಆದುವರಿಂದ ಪ್ರಭುಗಳು ಸಾಮಾನ್ಯ ಮನುಜರಂತೆ ಸೇಡಿನ ಮನೋಭಾವದಲ್ಲಿ ವರ್ತಿಸಬಾರದು. ಇದರಿಂದ ರಾಜ ಧರ್ಮಕ್ಕೆ ಅಪಚಾರ ಒಗೆದಂತೆ ಪ್ರಭು!"

"ನೀವು ಈಗ ಹೇಳುವುದಾದರೂ ಏನು?"

"ಸೋತು ಶರಣಾಗಿ ಬಂದಿರುವ ಗಜಪತಿಯೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕೆಂಬುದೇ ನನ್ನ ವಿನಂತಿ!"

"ಸೋತ ಗಜಪತಿಯೊಂದಿಗೆ ಒಪ್ಪಂದವೆ?"

"ಹೌದು ಪ್ರಭು! ನಾವು ಅಪಾರ ಧನ, ಜನ, ಕಾಲ ವ್ಯಯಗಳಿಂದ ಗೆದ್ದ ಉತ್ಕಲದೊಂದಿಗೆ ನಮ್ಮ ಗೆಳೆತನ ಬಹುಕಾಲ ಉಳಿಯಬೇಕಾದರೆ ನಾವು ಪ್ರತಾಪರುದ್ರ ಗಜಪತಿಗಳನ್ನು ಸಮಾನ ಗೌರವದಿಂದ ನಡೆಸಿಕೊಳ್ಳಬೇಕು. ಅವರೊಂದಿಗೆ ಉಚಿತವೂ, ಗೌರವತರವೂ ಆದ ಒಪ್ಪಂದ ಮಾಡಿಕೊಂಡು ಅವರನ್ನು ಸ್ನೇಹಿತನ್ನಾಗಿ ಮಾಡಿಕೊಳ್ಳಬೇಕು. ಈ ಘನೋದ್ದೇಶಗಳ ಫಲುವಾಗಿ ಹಿಂದೆ ನಾವು ಸಂಧಿಗಾಗಿ ಪ್ರಯತ್ನಿಸಲಿಲ್ಲವೇ ಇಂದು ಉತ್ಕಲವನ್ನು ಗೆದ್ದುಕೊಂಡ ಹುರುಪಿನಲ್ಲಿ ನಮ್ಮ ಘನೋದ್ದೇಶಗಳನ್ನು ಮರೆತುಬಿಡಬಾರದು. ಈಗ ಸೋತ ಗಜತಿಪಯೊಂದಿಗೆ, ಗೆದ್ದ ನಾವು ಒಪ್ಪಂದ ಮಾಡಿಕೊಂಡರೆ ನಮ್ಮ ಘನತೆಗೆ ಭೂಷಣಪ್ರಾಯ!"

" ನೀವು ಇಷ್ಟು ಒತ್ತಿಹೇಳಿದ ಮೇಲೆ ಗಜಪತಿಯ ದೂತನನ್ನು ಹಿಂದಕ್ಕೆ ಕಳುಹಿಸಲು ನನಗೆ ಇಷ್ಟವಿಲ್ಲ. ಅವನನ್ನು ಸಮ್ಮುಖಕ್ಕೆ ಬರಮಾಡಿ " ಎಂದು ಹೇಳಿದನು.

ಕೃಷ್ಣದೇವರಾಯನ ಇಚ್ಛೆಯಂತೆ ಆ ದೂತನನ್ನು ಸಮ್ಮುಖಕ್ಕೆ ಬರಮಾಡಲಾಯಿತು. ಆ ದೂತನು ಕೃಷ್ಣದೇವರಾಯನಿಗೆ ವಂದಿಸಿ, ಗಜಪತಿಯು ಕೊಟ್ಟಿದ್ದ ನಿರೂಪವನ್ನು ಕೊಟ್ಟು ನಮ್ರವಾಗಿ ನಿಂತುಕೊಂಡನು.

ಕೃಷ್ಣದೇವರಾಯನು ಆ ಪತ್ರವನ್ನು ಒಮ್ಮೆ ದಿಟ್ಟಿಸಿ ನೋಡಿ, ಓದಲು ತಿಮ್ಮರಸನ ಕೈಗೆ ಇತ್ತನು.

ತಿಮ್ಮರಸನು ಗಟ್ಟಿಯಾಗಿ ಓದಿದನು.

"ಸ್ವಸ್ತಿ ಶ್ರೀಮನ್ಮಹಾರಾಜಾಧಿರಾಜ, ಇತ್ಯಾದಿ ಬಿರುದಾಂಕಿತರಾದ ವಿಜಯನಗರದ ಸಾಮ್ರಾಟ ಕೃಷ್ಣದೇವರಾಯರಲ್ಲಿ ಪ್ರತಾಪರುದ್ರಗಜಪತಿಯು ಮಾಡಿಕೊಳ್ಳುವ ಬಿನ್ನಹವೇನೆಂದರೆ,

ನಾನು ದುಡುಕಿ ಮಾಡಿದ ತಪ್ಪಿಗಾಗಿ ರಾಜ್ಯ ಕೋಶಗಳನ್ನು ಕಳೆದುಕೊಂಡು, ಪತ್ನೀಪುತ್ರಿಯರನ್ನು ಕಟ್ಟಿಕೊಂಡು ದೇಸಿಗನಂತೆ ಅಲೆಯುವ ಪ್ರಸಂಗ ಬಂದಿದೆ. ನೀವು ಉದಾರಾಂತಃಕರಣರಾಗಿ ಒಂದಲ್ಲ—ಎರಡು ಬಾರಿ ನನ್ನೊಡನೆ ಸಂಧಾನಾಪೇಕ್ಷಿಗಳಾಗಿ, ರಾಯಭಾರಿಗಳನ್ನು ಕಳುಹಿಸಿದ್ದಿರಿ. ನಾನು ಮೂರ್ಖತನದಿಂದಾಗಿ, ನಿಮ್ಮನ್ನು ತಪ್ಪು ತಿಳಿದು, ನಿಮ್ಮಮೇಲೆ ಯುದ್ಧಕ್ಕೆ ನಿಂತು—ಇಷ್ಟೆಲ್ಲಾ ಭಂಗಪಡುವಂತಾಯಿತು. ಈಗ ನನ್ನ ಅಕೃತ್ಯಕ್ಕಾಗಿ, ದುಡುಕಿಗಾಗಿ ನನಗೆ ತುಂಬಾ ಪಶ್ಚಾತ್ತಾಪ ಉಂಟಾಗಿದೆ. ಮಹಾ ಉದಾರಿಗಳಾದ ತಾವು ನಮ್ಮ ತಪ್ಪುಗಳೆಲ್ಲವನ್ನು ಮನಸ್ಸಿಗೆ ತಂದುಕೊಳ್ಳದೆ, ನಮಗೆ ಸ್ನೇಹ ಹಸ್ತ ನೀಡಬೇಕೆಂದು ವಿನೀತನಾಗಿ ಪ್ರಾರ್ಥಿಸುತ್ತೇನೆ.

ನಮ್ಮ ನಿಮ್ಮ ಅಚಲ ಸ್ನೇಹ ಸೌಹಾರ್ದಗಳ ಕುರುಹಾಗಿ, ನನ್ನ ಪುತ್ರಿಯಾದ ಜಗನ್ಮೋಹಿನಿಯನ್ನು ತಾವು ಕೈಹಿಡಿದು, ಎರಡು ರಾಷ್ಟ್ರಗಳ ಕಲ್ಯಾಣಕ್ಕೆ ಭದ್ರ ಬುನಾದಿ ಹಾಕುವಿರೆಂದು ನಂಬುತ್ತೇನೆ.

ಇಂತು ತಮ್ಮ ಸ್ನೇಹಾಕಾಂಕ್ಷಿ,
ಪ್ರತಾಪರುದ್ರಗಜಪತಿ.

ಈ ಪತ್ರವನ್ನು ಓದಿಕೊಂಡು ಕೃಷ್ಣದೇವರಾಯನು ಅಚಲಿತ ವಿಗ್ರಹದಂತೆ ಕುಳಿತನು. ತಿಮ್ಮರಸನಿಗೆ ಅದನ್ನು ಕಂಡು ಉತ್ಸಾಹ ಭಂಗ ವಾಯಿತು

“ ಏಕೆ ಪ್ರಭು ! ಹೀಗೆ ಯೋಚಿಸುತ್ತಾ ಕುಳಿತಿರಿ ? ”

“ ಮತ್ತೇನು ಮಾಡಲಿ ಅಪ್ಪಾಜಿ ? ”

“ ಯಾವಶರತ್ತುಗಳೂ ಇಲ್ಲದೇ ಸಂಧಿಗೆ ತಾವು ಒಪ್ಪಿರುವುದಾಗಿ ತಿಳಿಸಿದರೆ ನಮಗೆ ತುಂಬಾ ಸಂತೋಷಉಂಟಾಗುತ್ತದೆ ”

“ ಸಂತೋಷ ? ಹೌದು ನನ್ನೊಬ್ಬನನ್ನು ಬಿಟ್ಟು ಉಳಿದವರೆಲ್ಲರಿಗೂ ಸಂತೋಷ ! ”

“ ಏಕೆ ಪ್ರಭು ? ”

“ ಅಪ್ಪಾಜಿಯವರು ಬಹುಶಃ ನನ್ನ ಸಿಂಹಾದ್ರಿಯ ಪ್ರತಿಜ್ಞೆಯನ್ನು ಮರೆತಿರುವಂತೆ ಕಾಣುತ್ತದೆ ” ಎಂದು ನಿಟ್ಟುಸಿರು ಬಿಟ್ಟನು.

“ ಓ ! ಆ ಪ್ರತಿಜ್ಞೆ ! ” ತಿಮ್ಮರಸನ ಮುಖ ಸವಿವರ್ಣವಾಯಿತು.

“ ಹೌದು, ಆ ಪ್ರತಿಜ್ಞೆ ! ಗಜಪತಿಯಪುತ್ರಿ ಜಗನ್ಮೋಹಿನಿಯನ್ನು ಕರೆತಂದು ನನ್ನ ಕುದುರೆಯ ಲಾಳ ಹೊಡೆಯುವ ಕಮ್ಮಾರನಿಗೆ ಕೊಟ್ಟು ಮದುವೆ ಮಾಡಲು ಮಾಡಿರುವ ಆ ಪ್ರತಿಜ್ಞೆ ! ”

“ ಪ್ರಭುಗಳು ನನ್ನ ಮಾತನ್ನು ಅನ್ಯಥಾ ಭಾವಿಸ ಬಾರದು. ಪ್ರಭುಗಳು ನನ್ನ ಮಾತನ್ನು ಸಮಾಧಾನ ಚಿತ್ತದಿಂದ ಲಾಲಿಸಬೇಕು. ತಾವು ತಿಳಿದೋ, ತಿಳಿಯದೆಯೋ ಸದುದ್ದೇಶದಿಂದಲೋ, ದುರುದ್ದೇಶ ದಿಂದಲೋ ಅಂತೂ ಆ ವೀರ ಪ್ರತಿಜ್ಞೆಯನ್ನು ಮಾಡಿದ್ದೀರಿ. ಇದು ಒಂದು ರೀತಿಯಲ್ಲಿ ದುಡುಕಿ ಮಾಡಿದ ಪ್ರತಿಜ್ಞೆ ಎಂದೇ ನನ್ನ ಭಾವನೆ. ಏಕೆಂದರೆ, ತಮ್ಮನ್ನು ಅನುಮಾನಿಸಿದವರು, ತಿರಸ್ಕರಿಸಿದವರು, ಪ್ರತಾಪರುದ್ರಗಜಪತಿ. ಅವರ ಮೇಲಿನ ಸಿಟ್ಟನ್ನು ಅಸಮಾಧಾನ ವನ್ನು, ತಾವು ಏನೂ ಅರಿಯದ ಮುಗ್ಧೆ, ಆ ಜಗನ್ಮೋಹಿನಿಯ ಮೇಲೆ ತೀರಿಸಿಕೊಳ್ಳಲೆಳಸುವುದು ಯಾವ ನ್ಯಾಯ ? ಅವಳು ಪ್ರಭು ಗಳಿಗೆ ಮಾಡಿರುವ ಅನ್ಯಾಯವಾದರೂ ಏನು ? ಯಾವ ತಪ್ಪಿಗೆ ಅವಳಿಗೆ “ ಈ ಶಿಕ್ಷೆ ವಿಧಿಸುತ್ತಿದ್ದೀರಿ ? ಇದನ್ನು ಪ್ರಭುಗಳು ಆಲೋಚಿಸಬೇಕು.”

"ಗಜಪತಿಯು ಕುಲಮದದಿಂದ ನನ್ನ ಪೂಜ್ಯ ಪಿತಾಮಹರನ್ನು ನಿಂದಿಸಿದ್ದಾನೆ. ಇದರಲ್ಲಿ ಅವನ ಪುತ್ರಿಯಾದ ಜಗನ್ಮೋಹಿನಿಯ ಭಾಗವೂ ಇದೆ. ತಂದೆಯ ಅಭಿಪ್ರಾಯದಲ್ಲಿ ಮಗಳು ಪಾಲುಗೊಳ್ಳದಿದ್ದಲ್ಲಿ ಗಜ ಪತಿಯು ಅಷ್ಟು ಸೊಕ್ಕಿ ಮೆರೆಯುತ್ತಿರಲಿಲ್ಲ."

"ಇದು ಕೇವಲ ನಿಮ್ಮ ಊಹೆಯಾಗಿದೆ ಪ್ರಭು; ಪೂರ್ವಾಗ್ರಹ ಪ್ರೀಡಿತರಾಗಿರುವ ತಮಗೆ ಹೀಗೆ ಕಾಣುವುದು ಸಹಜವೇ ಸರಿ. ಆದರೆ, ಪ್ರಭುಗಳು ಸಮಾಧಾನಚಿತ್ತದಿಂದ ಆಲೋಚಿಸಬೇಕು. ಯಾರು ನಿಜವಾದ ಅಪರಾಧಿಗಳೋ ಅವರನ್ನು ದಂಡಿಸಬೇಕಾದುದು ನ್ಯಾಯ. ಆದರೆ, ಜಗನ್ಮೋಹಿನಿ ತಮಗೆ ಯಾವ ಅಪರಾಧವನ್ನು ಮಾಡಿರುವಳೆಂದು ಅವ ಳನ್ನು ದಂಡಿಸಲಿಚ್ಛಿಸುತ್ತೀರಿ? ಆ ಹೆಣ್ಣುಮಗಳನ್ನು ವೃಥಾಕಾರಣವಾಗಿ ಶಿಕ್ಷಿಸಿದರೆ ಪಾಪವಲ್ಲವೇ? ಅಕಾರಣವಾಗಿ ಹೆಣ್ಣನ್ನು ನೋಯಿಸಿದರೆ ಇದ ರಿಂದ ಯಾರಿಗೂ ಶ್ರೇಯಸ್ಸಾಗುವುದಿಲ್ಲ. ಹೆಣ್ಣು ನಿಟ್ಟುಸಿರಿಟ್ಟರೆ ಸಾಮ್ರಾ ಜ್ಯಗಳೇ ನಾಶವಾಗುತ್ತದೆ ಎಂಬುವನ್ನು ಪ್ರಭುಗಳೇ ಬಲ್ಲಿರಿ! ಇದಕ್ಕೆ ಸೀತಾ, ದ್ರೌಪದಿಯರೇ ಸಾಕ್ಷಿ! ಧರ್ಮಪರಾಯಣರೂ, ದಯಾರ್ದ್ರ ಹೃದಯವುಳ್ಳವರೂ ಆದ ತಾವು ಈ ಹೆಣ್ಣು ಮಗುವಿನ ಮನಸ್ಸನ್ನು ನೋಯಿಸಲೆತ್ನಿಸುತ್ತಿರುವುದು ನಮಗೆಲ್ಲಾ ತುಂಬಾ ವಿಷಾದವುಂಟಾಗಿದೆ." ಎಂದು ನಿಟ್ಟುಸಿರಿಟ್ಟನು.

"ಪ್ರಭುಗಳು ಮತ್ತೊಂದು ದೃಷ್ಟಿಯಲ್ಲಿಯೂ ಈ ವಿಷಯವನ್ನು ಆಲೋಚಿಸಬೇಕು. ಆಕೆ ಸಾಮಾನ್ಯ ಹೆಣ್ಣಲ್ಲ. ರಾಜಪುತ್ರಿ! ಕುಲೀನ ಮನೆತನದ ಹೆಣ್ಣುಮಗಳು! ಆಕೆಯನ್ನು ತಾವು ಅಪಮಾನಗೊಳಿಸ ಲೆತ್ನಿಸಿದರೆ ಇದರಿಂದ ಉತ್ಕಲದ ಸ್ತ್ರೀಸಮುದಾಯಕ್ಕೇ ಅಪಮಾನ ಮಾಡಿದಂತೆ ಆಗುತ್ತದೆ. ತಮ್ಮ ಈ ಕೃತ್ಯದಿಂದ ಎರಡು ರಾಷ್ಟ್ರಗಳಲ್ಲಿ ಎಂತಹ ಕ್ಷೋಭೆ ಉಂಟಾಗಬಹುದೆಂಬುದನ್ನು ಒಂದುಕ್ಷಣ ಆಲೋಚಿಸಿ! ಶತ್ರುಗಳ ಮಾತು ಹಾಗಿರಲಿ. ಈ ಕಾರ್ಯದಿಂದ ತಮ್ಮ ಮಾಂಡಲೀಕರ ಸಾಮಂತರ ಮೇಲೆ ಆಗುವ ಪರಿಣಾಮವನ್ನು ಊಹಿಸಿ, ಯಾವ ರಾಜ ಪುತ್ರನೇ ಆಗಲೀ, ರಾಜಪುತ್ರಿಗಾದ ಅಪಮಾನವನ್ನು ಕ್ಷತ್ರಿಯ ರಮಣಿ ಗಾದ ಅಪಮಾನವನ್ನು ಸಹಿಸನು. ಅವನು ಪ್ರಭುಗಳ ಬಗ್ಗೆ ಮನಸ್ಸು

ಕೆಡಿಸಿಕೊಂಡರೆ ಇದರಿಂದ ಸಾಮ್ರಾಜ್ಯಕ್ಕೆ ಹಾನಿಯಾಗದೇ ಇರದು. ತಮ್ಮ ಈ ಕಾರ್ಯವನ್ನು ಸಾಮ್ರಾಜ್ಯದ ಜನತೆಯೆಂದಿಗೂ ಒಪ್ಪದು. ದೇಶದ ಜನತೆಗೆ ಅಪ್ರಿಯವಾದ ಈಕಾರ್ಯವನ್ನು ಪ್ರಭುಗಳು ಯಾವುದೋ ಒಂದು ಕ್ಷುದ್ರ ಕಾರಣಕ್ಕಾಗಿ, ಈಡೇರಿಸಿದರೆ, ಪ್ರಭುಗಳ ಅನುಚಿತ ವರ್ತನೆಯನ್ನು ಪ್ರಜೆಗಳೆಂದಿಗೂ ಸಹಿಸಿಕೊಳ್ಳುವುದಿಲ್ಲ. ಇದರಿಂದ ದೇಶದ ಭದ್ರತೆಗೆ ಭಂಗ ಉಂಟಾಗದೆ ಇರದು. ಪ್ರಭುಗಳು ಇದನ್ನು ಸಮಾಧಾನ ಚಿತ್ತದಿಂದ ಆಲೋಚಿಸಬೇಕು ! ”

ಕೃಷ್ಣದೇವರಾಯನು ಉತ್ತರ ಕೊಡದೆ ಸುಮ್ಮನೆ ಇದ್ದನು. ತಿಮ್ಮರಸನೇ ಮತ್ತೆ ಹೇಳಿದನು.

“ ಪ್ರಭುಗಳು ಮತ್ತೊಂದು ದೃಷ್ಟಿಯಲ್ಲಿ ಆಲೋಚಿಸಬೇಕು. ಒಮ್ಮೆ ಪ್ರಭುಗಳೇ ಜಗನ್ಮೋಹಿನಿಯನ್ನು ವಿವಾಹವಾಗುವ ಅಭೀಪ್ಸೆ ವನ್ನು ಹೊಂದಿದ್ದಿರಿ. ಪ್ರಭುಗಳ ಹೃದಯದಲ್ಲಿ ಜಗನ್ಮೋಹಿನಿಗೆ ಸ್ಥಳ ದೊರೆಕಿತ್ತು. ಆದರೆ ಯಾವುದೋ ದುರ್ಘಳಿಗೆಯಲ್ಲಿ ಪ್ರಭುಗಳು ಸೇಡಿನ ಕೈಗೆ ಬುದ್ಧಿಕೊಟ್ಟು, ದುಡುಕಿ ಆಘೋರ ಪ್ರತಿಜ್ಞೆಯನ್ನು ಮಾಡಿದ್ದೀರಿ. ಆದರೆ ನಿಜ ಹೇಳುವುದಾದರೆ, ಈ ಪ್ರತಿಜ್ಞೆಯಿಂದ ಬೇರಾರು ನೊಂದಿರ ದಷ್ಟು ಪ್ರಭುಗಳೇ ನೊಂದಿರುವಿರಿ ! ಇದನ್ನು ನಾನುಬಲ್ಲೆ ! ತಮ್ಮ ಬಾಯಿಂದಹೊರಟ ಪ್ರತಿಜ್ಞೆಯನ್ನು ತಮ್ಮ ಹೃದಯವೇ ಒಪ್ಪದೆಹೋಗಿದೆ! ಪ್ರಭು ! ಆತ್ಮಸಾಕ್ಷಿಯಾಗಿ ಹೇಳಿ. ನಿಮಗೆ ನಿಜವಾಗಿಯೂ ಜಗನ್ಮೋಹಿನಿ ಯನ್ನು ಕಮ್ಮಾರನಿಗೆ ಕೊಟ್ಟು ವಿವಾಹಮಾಡುವುದು ಪ್ರಿಯವಾಗಿದೆಯೇ? ಕೇವಲ ತೋರಿಕೆಯ ಮಾತು ಬೇಡ! ಹೃದಯಾಂತರಾಳದ ನಿಮ್ಮ ನಿಜವಾದ ಭಾವನೆಗಳನ್ನು ಹೇಳಿರಿ! ನಿಮಗೆ ಜಗನ್ಮೋಹಿನಿಯನ್ನು ಒಂದು ಕಾಲದಲ್ಲಿ ಹೃದಯ ಸಿಂಹಾಸನದಲ್ಲಿ ಸಾಮ್ರಾಜ್ಞಿಯಾಗಿ ಮಂಡಿ ಸಿದ್ದ ಜಗನ್ಮೋಹಿನಿಯನ್ನು ಒಬ್ಬ ಅಜ್ಞಾತ ಕಮ್ಮಾರನು ವಿವಾಹವಾಗು ವುದು ಸಂತೋಷವನ್ನುಂಟುಮಾಡುವ ವಿಷಯವಲ್ಲವೆಂದು ನನಗೆ ತಿಳಿದಿದೆ. ನೀವು ಹೃದಯಶೂನ್ಯರಾಗಿದ್ದರೆ ಆ ಮಾತು ಬೇರೆ! ನೀವು ದಯಾರ್ದ್ರ ಹೃದಯರೂ, ನಿರ್ಮಲಾಂತಃಕರಣರೂ ಆಗಿದ್ದೀರಿ. ನಾವೆಲ್ಲ ಪಡುವ ನೂರ್ಮಡಿ ದುಃಖ, ಮನೋವೇದನೆ ತಮ್ಮ ಅಂತರಂಗಕ್ಕೇ ಆಗಿದೆ.

ನನ್ನೊಂದಿಗೆ ಪ್ರಭುಗಳು ಯಾವುದನ್ನೂ ಮುಚ್ಚು ಮರೆ ಮಾಡುವುದು ಬೇಡ. ಜಗನ್ಮೋಹಿನಿಯನ್ನು ನೀವಲ್ಲದೆ ಮತ್ತೆ ಯಾರು ವಿವಾಹವಾದರೂ ನಿಮ್ಮ ಕೋಮಲ ಮನಸ್ಸಿಗೆ ನೆಮ್ಮದಿಯಿರುವುದಿಲ್ಲ. ನಾ ಬಲ್ಲೆ! ಪ್ರಭು! ಒಮ್ಮೆ ಸಿಟ್ಟಿನ ಭರದಲ್ಲಿ ದುಡುಕಿ ಆಡಿದ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ ಈಗ ನಿಮ್ಮ ಹೃದಯಕ್ಕೆ ಒಪ್ಪಿಗೆಯಾಗದ ಕಾರ್ಯಕ್ಕೆ ಮನಸ್ಸು ಕೊಡಬೇಕಾಗಿದೆ. ತಮ್ಮ ಪ್ರತಿಜ್ಞೆ ಈಡೇರಿದರೆ ತಮಗೆ ಅದರಿಂದ ಖಂಡಿತ ಸಂತೋಷವುಂಟಾಗದು. ಪ್ರತಿಜ್ಞೆ ಈಡೇರದೆ ಇದ್ದರೂ ನಿಮ್ಮ ಮನಸ್ಸಿಗೆ ಸಮಾಧಾನವಾಗುವುದಿಲ್ಲ! ತಾವು ಒಂದು ಧರ್ಮಸಂಕಟದಲ್ಲಿ ಬಿದ್ದು ತೊಳಲಾಡುತ್ತಿದ್ದೀರಿ. ದಯವಿಟ್ಟು ಜಗನ್ಮೋಹಿನಿಯನ್ನು ತಮ್ಮ ಸೇಡಿನ ಬುದ್ಧಿಗೆ ಬಲಿ ಮಾಡಬೇಡಿ. ಇದರಿಂದ ನಿಮ್ಮ ಹೃದಯಕ್ಕೆ ಬರೆಯಿಟ್ಟುಕೊಂಡಂತೆ ಆದೀತು. ನಮಗೆ ಬೇಕಿರುವುದು ನಿಮ್ಮ ಸುಖ! ನಿಮ್ಮ ನಿರ್ಮಲ ಚಾರಿತ್ರ! ಅದಕ್ಕಾಗಿ ಇಷ್ಟೆಲ್ಲ ಮಾತನ್ನೂ ಹೇಳಬೇಕಾಯಿತು. ನನ್ನ ಮಾತಿನಿಂದ ತಮಗೆ ಅಪಚಾರವಾಗಿದ್ದರೆ ದಯವಿಟ್ಟು ಕ್ಷಮಿಸಬೇಕು" ಎಂದು ಹೇಳಿ ಸುಮ್ಮನಾದನು.

ಕೃಷ್ಣದೇವರಾಯನಮೇಲೆ ತಿಮ್ಮರಸನ ಮಾತುಗಳು ಪರಿಣಾಮಕಾರಿಯಾಗಿರಬೇಕು! ಎಂತಲೇ ಕೃಷ್ಣದೇವರಾಯನು ಹೇಳಿದನು.

"ಅಪ್ಪಾಜಿ, ನಿಮ್ಮಲ್ಲಿ ಮುಚ್ಚುಮರೆಯೇಕೆ? ನೀವು ನನ್ನನ್ನು ಎಷ್ಟು ಚೆನ್ನಾಗಿ ಅರ್ಥಮಾಡಿಕೊಂಡಿರುವಿರೆಂಬುದಕ್ಕೆ ನಿಮ್ಮ ಮಾತುಗಳೇ ನಿದರ್ಶನವಾಗಿದೆ. ನನ್ನ ಮನಸ್ಸಿಗೆ ಅಪ್ರಿಯವಾದ ಈ ಘೋರ ಪ್ರತಿಜ್ಞೆಯನ್ನು ನಾನು ಏಕೆ ಮಾಡಿದೆನೋ ನಾನರಿಯೆ. ಅಂತೂ ಯಾವುದೋ ಅನಿಷ್ಟ ಗಳಿಗೆಯ ಫಲ ಅದು. ದುಷ್ಟ ಶಕ್ತಿಯ ಪ್ರಚೋದನೆ. ನನ್ನನ್ನು ಮೂರ್ಖನನ್ನಾಗಿ ಮಾಡಿ, ನನ್ನ ಬಾಯಿಂದ ಆ ಭೀಕರ ಪ್ರತಿಜ್ಞೆಯನ್ನು ಮಾಡಿಸಿತು ವಿಧಿ! ನಾನು ಕೇವಲ ಪ್ರತಿಜ್ಞೆ ಮಾಡಿ ತೃಪ್ತಿಗೊಳ್ಳದೆ, ಆಡಿದ ಮಾತನ್ನು ಶಿಲಾಲೇಖನದ ರೂಪದಲ್ಲಿ ಶಾಶ್ವತಗೊಳಿಸಿದೆ. ಇದೇ ನಾನು ಮಾಡಿದ ಅವಿವೇಕದ ಪರಮಾವಧಿ! ಈಗ ನನಗೊದಗಿರುವ ಮೂಕಸಂಕಟವನ್ನು ಯಾರಮುಂದೆ ಹೇಳಿಕೊಳ್ಳಲಿ! ನಾನು ಜಗನ್ಮೋಹಿನಿಯನ್ನು ಸೆರೆ ಹಿಡಿದು ಕುದುರೆ ಲಾಳ ಹೊಡೆಯುವ ಕಮ್ಮಾರನಿಗೆ

ವಿವಾಹ ಮಾಡಿಕೊಡದೇ ಇದ್ದರೆ ನಾನು ವಚನಭ್ರಷ್ಟನಾಗುತ್ತೇನೆ. ಈ ಪ್ರತಿಜ್ಞೆಯಂತೆ ನಡೆದರೆ ಆ ನಿರ್ಭಾಗ್ಯ ಜಗನ್ಮೋಹಿನಿಯ ಸುಕೋಮಲವಾದ ಜೀವವನ್ನು ಹೊಸೆದುಹಾಕಿದಂತೆ ಆಗುತ್ತದೆ. ನುಂಗಲಾರೆ, ಎಸೆಯಲಾರೆ—ಎಂಬಂತೆ ಆಗಿದೆ, ಇದರಿಂದ ಪಾರಾಗುವ ದಾರಿ ಮಾತ್ರ ಕಾಣದಾಗಿದೆಯೆಂತಲೇ ನಾನು ಅಂತರಂಗದಲ್ಲಿ ತುಂಬಾ ಅಸುಖಿಯಾಗಿದ್ದೇನೆ. ಇದೇ ನನ್ನನ್ನು ಕಿತ್ತು ತಿನ್ನುವ ಚಿಂತೆಯಾಗಿದೆ. ಈ ಧರ್ಮಸಂಕಟದಿಂದ ಪಾರಾಗುವ ದಾರಿ ಕಾಣದೆ ತೊಳಲುತ್ತಿದ್ದೇನೆ. ಅಪ್ಪಾಜಿ, ಈ ಸಿಕ್ಕಿನಿಂದ ಪಾರಾಗಲು ನೀನೇ ದಾರಿ ತೋರಿಸಬೇಕು. ನನ್ನೊಳಗೆ ನಡೆಯುತ್ತಿರುವ ಮನೋವೇದನೆಯನ್ನು ನನ್ನಿಂದ ಸಹಿಸಲು ಸಾಧ್ಯವೇ ಇಲ್ಲ, ನಾನು ಉತ್ಕಲವನ್ನು ಗೆದ್ದರೂ ನನ್ನ ಮನಸ್ಸಿಗೆ ಶಾಂತಿ ಸಮಾಧಾನಗಳು ಇಲ್ಲವಾಗಿದೆ, ಕತ್ತಲೆಯಲ್ಲಿ ದಾರಿ ಕಾಣದೆ ತಡಕಾಡುವ ಅಂಧನಂತೆ ಇದ್ದೇನೆ—ನನಗೊಂದು ದಾರಿಯನ್ನು ನೀವು ತೋರಿಸಲೇಬೇಕು."

ಎಂದು ಹೇಳುತ್ತಿದ್ದಂತೆ ಗದ್ಗದಕಂಠನಾದನು. ಅವನಿಗೆ ತಿಳಿಯದಂತೆ ದುಃಖಾಶ್ರು ಅವನ ಕಣ್ಣುಗಳನ್ನು ತುಂಬಿ ಹೊರಹೊಮ್ಮಿದವು. ತನ್ನ ದುಃಖವನ್ನು ತಿಮ್ಮರಸನು ಕಂಡುಕೊಂಡಾನೆಂದು ಮುಖವನ್ನು ಹೊದೆದಿದ್ದ ವಲ್ಲಿಯಲ್ಲಿ ಅಡಗಿಸಿಕೊಂಡನು.

ಸಾಮ್ರಾಟನ ಕರುಣಜನಕವಾದ ಈ ನೋಟವನ್ನು ಕಂಡು ತಿಮ್ಮರಸನ ಎದೆಯಲ್ಲಿ ಕೊಳ್ಳಿಯಾಡಿಸಿದಂತೆ ಆಯಿತು. ಅವನ ಹೃದಯ ಕೃಷ್ಣದೇವರಾಯನಿಗಾಗಿ ಮಮ್ಮಲ ಮರುಗಿತು. ಎಂತಹ ಮುಗ್ಧ ಮನಸ್ಸು ರಾಯನದು. ಇನ್ನೊಬ್ಬರ ನೋವಿಗೆ ಬೆಣ್ಣೆಯಂತೆ ಕರಗುವ ಮನಸ್ಸುಳ್ಳ ರಾಯನು ಇದುವರೆಗೆ ಹೇಗೆ ನಿಷ್ಠುರವಾಗಿ ಇದ್ದನೆಂಬುದು ಅಚ್ಚರಿಯಾಯಿತು. ಬೆಂಕಿಯ ಮೇಲೆ ಬೆಣ್ಣೆ ಎಷ್ಟುಕಾಲ ಕರಗದೇ ಇದ್ದೀತು ? ಈ ಘಳಿಗೆಯಲ್ಲಿಲ್ಲದಿದ್ದರೆ ಇನ್ನೊಂದುಗಳಿಗೆಗೆ ಕರಗಲೇಬೇಕು. ಇದು ನಿಸರ್ಗ ನಿಯಮ. ಕೃಷ್ಣದೇವರಾಯನು ಈ ನೈಸರ್ಗಿಕ ನಿಯಮಕ್ಕೆ ಹೊರತಾಗಿರಲಿಲ್ಲ.

"ಪ್ರಭು, ತಮ್ಮ ಮನಸ್ಸಿನ ವೇದನೆ ನಾನು ಬಲ್ಲೆ. ಪರಿಶುದ್ಧಾಂತಃಕರಣರಾದ ತಮಗೆ, ಈ ಧರ್ಮಸಂಕಟದಿಂದ ಪಾರಾಗುವ ದಾರಿಯೊಂದನ್ನು

ಜಗದೀಶ್ವರನು ತೋರಿಸದೇ ಇರನು. ತಾವು ಸಮಾಧಾನ ತಾಳಬೇಕು. ಧರ್ಮಾವತಾರರಾದ ತಮಗೆ ದೈವಸಹಾಯ ಖಂಡಿತವಾಗಿಯೂ ದೊರೆಯುವುದು. ಆ ಬಗ್ಗೆ ತಾವು ಚಿಂತಿಸಬಾರದು. ಈ ಕತ್ತಲೆಯಿಂದ ಪಾರಾಗುವ ದಾರಿಯನ್ನು ದೇವರೇ ತೋರಿಸುತ್ತಾನೆ." ಎಂದು ಹೇಳಿ ಕೃಷ್ಣದೇವರಾಯನನ್ನು ಸಮಾಧಾನಗೊಳಿಸಿದನು. ತಿಮ್ಮರಸನ ಮುಖದಲ್ಲಿ ಕೃಷ್ಣದೇವರಾಯನಿಗೆ ಅದಾವ ಭರವಸೆಯುಂಟಾಯಿತೋ ಅಂತೂ ಕೃಷ್ಣದೇವರಾಯನು ಒಂದು ಬಗೆಯ ಸಮಾಧಾನ ಹೊಂದಿದನು. ಅವನಿಂದ ಸಮಾಧಾನದ ನಿಟ್ಟುಸಿರು ಹೊರಬಿತ್ತು.

ಕೃಷ್ಣದೇವರಾಯನು ತಿಮ್ಮರಸನ ಮೂಲಕ ತಾನು ಸಂಧಾನಕ್ಕೆ ಸಿದ್ಧನಾಗಿರುವ ವಿಷಯವನ್ನು ಗಜಪತಿಗೆ ತಿಳಿಸಿದನು. ಪ್ರತಾಪರುದ್ರ ಗಜಪತಿಯ ಕೋರಿಕೆಯಂತೆ ಕೃಷ್ಣದೇವರಾಯನು ತಾನು ಗೆದ್ದಿದ್ದ ಉತ್ಕಲ ಸಾಮ್ರಾಜ್ಯವನ್ನು ಅವನಿಗೆ ಹಿಂದಿರುಗಿಸಲು ಒಡಂಬಟ್ಟನು. ಈ ಸ್ನೇಹದ ಕುರುಹಾಗಿ ಕೃಷ್ಣದೇವರಾಯನು ಜಗನ್ಮೋಹಿನಿಯ ಕೈಹಿಡಿಯಲು ಸಮ್ಮತಿಸಿದನು. ಅದರಂತೆ ಪ್ರತಾಪರುದ್ರ ಗಜಪತಿಯು ತನ್ನ ಪತ್ನೀ ಪುತ್ರಿಯರ ಸಮೇತ, ಪೊಟ್ಟನೂರಿಗೆ ಬಂದಿಳಿದನು.

ಗಜಪತಿಯು ಪೊಟ್ಟನೂರಿಗೆ ಬಂದಮೇಲೆ ಪೊಟ್ಟನೂರಿನಲ್ಲಿ ಹರಡಿದ್ದ ವದಂತಿಯನ್ನು ಕೇಳಿ ತಲ್ಲಣಗೊಂಡನು. ಪೊಟ್ಟನೂರಿನ ಜನತೆ ಜಗನ್ಮೋಹಿನಿಯ ಬಗೆಗೆ ಏನೇನೋ ಮಾತನಾಡಿಕೊಳ್ಳುತ್ತಿರುವುದನ್ನು ದೂತರ ಮೂಲಕ ಕೇಳಿದನು. ಇದರಿಂದ ಗಜಪತಿಯ ಮನಸ್ಸು ತುಂಬಾ ವ್ಯಾಕುಲಗೊಂಡಿತ್ತು. ಮತ್ತೆ ಕೃಷ್ಣದೇವರಾಯನು ತನ್ನನ್ನು ಮೋಸಪಡಿಸಿದನೇ ಎನ್ನುವ ಸಂಶಯ ಉಂಟಾಯಿತು. ತಾನಾಗಿ ಬಂದು ಕೃಷ್ಣದೇವರಾಯನ ಬಲೆಯಲ್ಲಿ ಬಿದ್ದಂತೆ ಆಯಿತಲ್ಲಾ ಎಂದು ತುಂಬಾ ಪರಿತಾಪ ಉಂಟಾಯಿತು. ಜನಜನಿತವಾಗಿರುವ ಈ ಸುದ್ದಿ ಸುಳ್ಳಾಗಬಾರದೆ ಎಂದು ಹಾರೈಸಿದನು.

ಆದರೆ ಈ ಸುದ್ದಿ ಗಜಪತಿ ಪೊಟ್ಟನೂರಿಗೆ ಬರುವ ಮೊದಲೇ ಜನಜನಿತವಾಗಿತ್ತು. ಕೃಷ್ಣದೇವರಾಯನು ಮೋಸದಿಂದ ಪ್ರತಾಪರುದ್ರ ಗಜಪತಿಯನ್ನು ಜಗನ್ಮೋಹಿನಿಯನ್ನೂ ಪೊಟ್ಟನೂರಿಗೆ ಬರಮಾಡಿಕೊಂಡು

ಸೆರೆಹಿಡಿದನು. ಕುದುರೆ ಲಾಳ ಹೊಡೆಯುವ ಕಮ್ಮಾರನಿಗೆ ಜಗನ್ಮೋಹಿನಿಯನ್ನು ಕೊಟ್ಟು ಮದುವೆ ಮಾಡಿ, ತನ್ನ ಪ್ರತಿಜ್ಞೆಯನ್ನು ಈಡೇರಿಸಿಕೊಳ್ಳುವನೆಂದೂ ಎಲ್ಲರೂ ಆಡಿಕೊಳ್ಳುತ್ತಿದ್ದರು. ಈ ವದಂತಿಗೆ ಒಂದು ರೂಪ ಕೊಡುವಂತೆ ಕೃಷ್ಣದೇವರಾಯನು ಪ್ರತಾಪರುದ್ರ ಗಜಪತಿಯು ಪೊಟ್ಟನೂರಿಗೆ ಬಂದಾಗ ನಿರ್ಬಂಧದಲ್ಲಿ ಇರಿಸಿ, ಅವರ ಮೇಲೆ ಕಣ್ಣಿಟ್ಟು ಕಾಯಲು ಸೈನಿಕರನ್ನು ನೇಮಿಸಿದ್ದನು. ತಾವು ಕೃಷ್ಣದೇವರಾಯನ ಸೆರೆಯಲ್ಲಿ ಇರುವ ವಾರ್ತೆ ತಿಳಿದ ಮೇಲೆ ಕೃಷ್ಣದೇವರಾಯನು ತನ್ನ ಪ್ರತಿಜ್ಞೆಯನ್ನು ಈಡೇರಿಸಿಕೊಳ್ಳಲು ಈ ನಾಟಕ ಹೂಡಿರುವನೆಂದು ಬಗೆದ ರಾಯನನ್ನು ಮನಸ್ಸಿನೀ ತೆಗಳಿದನು.

ಕೃಷ್ಣದೇವರಾಯನು ತನ್ನನ್ನು ವಿವಾಹವಾಗದೆ, ಕುದುರೆ ಲಾಳ ಹೊಡೆಯುವ ಕಮ್ಮಾರನಿಗೆ ಕೊಟ್ಟು ಮದುವೆ ಮಾಡುವನೆಂಬ ವಾರ್ತೆಯನ್ನು ಕೇಳಿ, ಜಗನ್ಮೋಹಿನಿ ಕೃಷ್ಣದೇವರಾಯನು ತನ್ನ ಹಂಚಿಕೆಯನ್ನು ತಲೆಕೆಳಗೆ ಮಾಡಿದನಲ್ಲಾ ಎಂದು ಕ್ರೋಧದಿಂದ ಬೆಂದಳು. ಅವಳು ಮೆಟ್ಟಿದ ಸರ್ಪಿಣಿಯಂತೆ ಬುಸುಗುಟ್ಟಿದಳು—ಕೃಷ್ಣದೇವರಾಯನನ್ನು ಮನಸ್ಸಿನಲ್ಲೇ ಸಾವಿರ ರೀತಿಯಲ್ಲಿ ಶಪಿಸುತ್ತಾ.

ಕೇವಲ ಗಾಳಿಯಲ್ಲಿ ಹರಡಿದ್ದ ಈ ಸುದ್ದಿ ಕಡೆಗೂ ನಿಜವೇ ಆಯಿತು. ಕೃಷ್ಣದೇವರಾಯನು ತುಂಬಿದ ಒಡ್ಡೋಲಗದಲ್ಲಿ ತನ್ನ ಸೆರೆಯಲ್ಲಿ ಇರುವ ಜಗನ್ಮೋಹಿನಿಯನ್ನು ಕಮ್ಮಾರನಿಗೆ ವಿವಾಹಮಾಡಿ, ಆ ಮೂಲಕ ತನ್ನ ಪ್ರತಿಜ್ಞೆಯನ್ನು ಈಡೇರಿಸಿಕೊಳ್ಳುವುದಾಗಿ ಘೋಷಿಸಿ, ಜಗನ್ಮೋಹಿನಿಯ ವಿವಾಹಕ್ಕೆ ಲಗ್ನವನ್ನೂ ನಿಶ್ಚಯಿಸಿದನು.

ಲಗ್ನ ನಿಶ್ಚಯವಾಗಿ, ವಿವಾಹಕ್ಕೆ ಬೇಕಾಗುವ ಸಕಲ ಸಿದ್ಧತೆಗಳು ಭರದಿಂದ ನಡೆದವು. ಲಗ್ನಪತ್ರಿಕೆಗಳು ದೂರದ ನಾಡಿನ ರಾಜ ಮಹಾರಾಜರಿಗೆಲ್ಲ ಹೋದವು. ಲಗ್ನದ ಆಹ್ವಾನವನ್ನು ಮನ್ನಿಸಿ ವಿಜಯನಗರದಿಂದ ರಾಜಕುಟುಂಬದವರೆಲ್ಲರೂ ಪೊಟ್ಟನೂರಿನಲ್ಲಿ ನೆರೆದರು. ಸಾಮ್ರಾಜ್ಯದ ಮೂಲೆ ಮೂಲೆಗಳಿಂದ ಪುರೋಹಿತರೂ, ಶ್ರೋತೃಗಳೂ, ಕಲಾವಿದರೂ, ರಾಜಸನ್ಮಾನಕ್ಕಾಗಿ, ಗುಂಪುಗುಂಪಾಗಿ ಬಂದರು. ಆಹ್ವಾನಿತರ ಸಲುವಾಗಿ ರಾಜೋಚಿತವಾದ ಬಿಡದಿ ಮನೆಗಳು ಏರ್ಪಟ್ಟವು. ಲಗ್ನದ

ದಿನ ಸಮೀಪಿಸಿದಂತೆ ಆಹ್ವಾನಿತರೆಲ್ಲರೂ ಒಬ್ಬೊಬ್ಬರಾಗಿ ಬಂದು ಪೊಟ್ಟನೂರನ್ನು ಸೇರಿದರು.

ಪೊಟ್ಟನೂರು ಜನರಿಂದ ಕಿಕ್ಕಿರಿಯಿತು.

ವಿವಾಹದ ಸಲುವಾಗಿ ಅದು ದೇವೇಂದ್ರನ ಅಮರಾವತಿಯಂತೆ ಶೋಭಿಸಿತು. ಎಲ್ಲೆಲ್ಲೂ ಅಲಂಕಾರ, ವೈಭವ, ಸಡಗರಗಳು, ಎಲ್ಲರಿಗೂ ಆಶ್ಚರ್ಯ! ಲಗ್ನದದಿನ ಹತ್ತಿರ ಬಂದರೂ ಇನ್ನೂ ಜಗನ್ಮೋಹಿನಿಗೆ ಗೊತ್ತಾಗಿರುವ ಗಂಡು ಯಾರೆಂದು ತಿಳಿದಿರಲಿಲ್ಲ. ಕೃಷ್ಣದೇವರಾಯನ ಕುದುರೆಗಳಿಗೆ ಲಾಳ ಹೊಡೆಯುವ ಸಾವಿರಾರು ಕಮ್ಮಾರರಲ್ಲಿ ಪ್ರತಿಯೊಬ್ಬರಿಗೂ ಬಹುಶಃ ತಮಗೇ ಜಗನ್ಮೋಹಿನಿ ದೊರೆಯಬಹುದೆಂದು ಒಂದು ದೂರದ ಆಸೆ. ಮದುವೆಯಾಗದ ಯುವಕರು ತಮಗೇ ಜಗನ್ಮೋಹಿನಿ ಕಟ್ಟಿಟ್ಟ ವಧುವೆಂದು ಕನಸಿನ ಸೀಮೆಯಲ್ಲಿ ವಿಹರಿಸಿದರು.

ಲಗ್ನದ ದಿನಕ್ಕೆ ಇನ್ನೆಲ್ಲ ಕೆಲವೇ ದಿನಗಳು ಉಳಿದವು. ಇಷ್ಟಾದರೂ ಜಗನ್ಮೋಹಿನಿಯನ್ನು ಕೈ ಹಿಡಿಯುವ ಭಾಗ್ಯಶಾಲಿ ಯಾರೆಂದು ಯಾರಿಗೂ ತಿಳಿಯದ ಗತ್ತು. ಜನ ಬೆರಗಾಗಿ ಲಗ್ನದ ದಿನಕ್ಕಾಗಿ ಎದುರು ನೋಡಿದರು ಅವರು ಎದುರು ನೋಡುತ್ತಿದ್ದ ಲಗ್ನದ ದಿನ ಬಂದೇ ಬಂತು.

ಜಗನ್ಮೋಹಿನಿಯನ್ನು ಆ ದಿನ ಬೆಳಗಿನ ಜಾವಕ್ಕೆ ಎಬ್ಬಿಸಿ, ಮಂಗಳಸ್ನಾನ ಮಾಡಿಸಿ, ವಧುವಿನಂತೆ ಸಿಂಗರಿಸಿ, ಅವಳನ್ನು ವಿವಾಹ ವೇದಿಕೆಗೆ ಕರೆದೊಯ್ಯಲಾಯಿತು. ಇಷ್ಟಾದರೂ ವರನು ವಿವಾಹವೇದಿಕೆಗೆ ಬಂದಿರಲಿಲ್ಲ. ಏಕೆ ವರನಿನ್ನು ಬರಲು ತಡವಾಗಿದೆ ಎಂದು ಎಲ್ಲ ಸಭಾ ಸದಸ್ಯರೆಲ್ಲ ಕೌತುಕದಿಂದ ಕಾದರು. ಲಗ್ನದ ಘಳಿಗೆ ಸಮೀಪಿಸುತ್ತಿದ್ದರೂ ವರನು ಮಾತ್ರ ಬಂದಿರಲಿಲ್ಲ. ಪುರೋಹಿತರು ವರನನ್ನು ಕರೆತರಲು ಚಡಪಡಿಸಿದರು. ತಡವಾದರೆ ಲಗ್ನದ ಮುಹೂರ್ತ ಮೀರುವುದೆಂದು ಗಡಿಬಿಡಿಮಾಡಿದರು. ಆಗ ವರನನ್ನು ಕರೆತರಲು ಕೃಷ್ಣದೇವರಾಯನು ಹೊರಗೆ ಹೊರಟನು. ಅವನನ್ನು ತಿಮ್ಮರಸನು ಹಿಂಬಾಲಿಸಿದನು.

ಇದ್ದಕ್ಕಿದ್ದಂತೆ ಸಭೆಯಲ್ಲಿ ಗದ್ದಲವೆದ್ದಿತು. "ಆಗೋ ತಿಮ್ಮರಸನು ವರನನ್ನು ಕರೆತರುತ್ತಿದ್ದಾನೆ! ಜಗನ್ಮೋಹಿನಿಗೆಂದು ಗೊತ್ತಾಗಿದ್ದ ಕಮ್ಮಾರನನ್ನು ಕರೆತರುತ್ತಿದ್ದಾನೆ!" ಎಂದು ತಮ್ಮ ತಮ್ಮಲ್ಲೇ ಮಾತ

ನಾಡಿಕೊಂಡರು. ಅವರು ವಿವಾಹ ಮಂಟಪಕ್ಕೆ ನಡೆದು ಬರುತ್ತಿದ್ದಂತೆ, ಎಲ್ಲರೂ ಅವಾಕ್ಕಾಗಿ ಅವರನ್ನೇ ನೋಡುತ್ತಾ ನಿಂತರು. ಕೆಲವರಿಗೆ ಜಗನ್ಮೋಹಿಯ ಕೈ ಹಿಡಿಯುವ ಆ ಭಾಗ್ಯಶಾಲಿಯನ್ನು ನೋಡುವ ಕೂತೂಹಲವಾದರೆ, ಮತ್ತೆ ಕೆಲವರಿಗೆ ಜಗನ್ಮೋಹಿನಿಯ ಬಾಳಿಗೆ ಕುಠಾರ ಪ್ರಾಯನಾಗಿ ಬಂದಿರುವ ಅವನನ್ನು ನೋಡುವ ಕುತೂಹಲ. ಹೀಗಾಗಿ ಎಲ್ಲರೂ ಮಜ್ಞಾಮೃಥರಾಗಿ ಅವರನ್ನು ನೋಡುತ್ತಾ ನಿಂತರು.

ತಿಮ್ಮರಸನು ತನ್ನ ಜತೆಯಲ್ಲಿದ್ದ ಕಮ್ಮಾರನ ಕೈಹಿಡಿದುಕೊಂಡು ಲಗ್ನವೇದಿಕೆಯಮೇಲೆ ಕೂಡಿಸಿದನು. ಪುರೋಹಿತರು ವೇದಮಂತ್ರ ಹೇಳಿದರು. ಅನಂತರ ಕಮ್ಮಾರನ ಕೈಗೆ ಮಾಂಗಲ್ಯವನ್ನು ಕೊಟ್ಟು ಜಗನ್ಮೋಹಿನಿಯ ಕುತ್ತಿಗೆಗೆಕಟ್ಟಲು, ರಾಜಾಶೀರ್ವಾದ ಪಡೆಯಲು ಕೃಷ್ಣದೇವ ರಾಯನೆಲ್ಲಿ ಎಂದು ಹುಡುಕಿದರು. ಎಲ್ಲೂ ಕೃಷ್ಣದೇವರಾಯನು ಕಾಣದಾಗಿದ್ದ. ಪುರೋಹಿತರಿಗೂ, ಇತರ ಸಭಾಸದರಿಗೂ ಒಮ್ಮೆಲೇ ಸಂದೇಹಾಶ್ಚರ್ಯಗಳು ಉಂಟಾದವು. ಎಲ್ಲರೂ ಕೃಷ್ಣದೇವರಾಯನೆಲ್ಲಿ? ಎಂದು ಸಭೆಯನ್ನೆಲ್ಲಾ ಶೋಧಿಸಿದರು—ಬೆರಗುಗಣ್ಣುಗಳಿಂದ. ಎಲ್ಲಿಯೂ ಕೃಷ್ಣದೇವರಾಯನು ಕಾಣಿಸಲಿಲ್ಲ.

ಪುರೋಹಿತರು ಲಗ್ನದ ಮುಹೂರ್ತ ಮೀರಿತೆಂದು ಗಡಿಬಿಡಿ ಮಾಡಿದರು. ತಿಮ್ಮರಸನ ಕೋರಿಕೆಯಂತೆ, ಕಮ್ಮಾರನು ರಾಜಾಶೀರ್ವಾದವಿಲ್ಲದೆಯೇ ಜಗನ್ಮೋಹಿನಿಯ ಕತ್ತಿಗೆ ಮಾಂಗಲ್ಯವನ್ನು ಬಂಧಿಸಿದನು. ಈ ಗಡಿಬಿಡಿಯಲ್ಲಿ ಅವನು ತಲೆಗೆ ಸುತ್ತಿದ್ದ ಜರಿಯ ರುಮಾಲು ತಲೆಯಿಂದ ಜಾರಿತು. ಅದನ್ನು ಮತ್ತೆ ತಲೆಗೆ ಸೇರಿಸಿಕೊಳ್ಳುವ ಭರದಲ್ಲಿ ಕೃತಕ ಗಡ್ಡ ಮೀಸೆಗಳು ನೆಲಕ್ಕೆ ಬಿದ್ದವು. ಆಗ ಜನ ನೋಡುತ್ತಾರೆ! ತಮ್ಮ ಎದುರಿಗೆ ನಿಂತವನು ಕಮ್ಮಾರನಲ್ಲ! ಸಾಕ್ಷಾತ್ ಸಾಮ್ರಾಟ್ ಕೃಷ್ಣದೇವರಾಯ! ಜನತೆ ಸಂತೋಷದಿಂದ ಜಯಕಾರ ಮಾಡಿದರು. ಆ ಕ್ಷಣದಲ್ಲಿ ಜಗನ್ಮೋಹಿನಿಯನ್ನು ಬಿಟ್ಟರೆ, ಸಂತೋಷದ ಅತಿರೇಕದಲ್ಲಿ ಆನಂದಬಾಷ್ಪ ಸುರಿಸದ ವ್ಯಕ್ತಿಗಳು ಸಭೆಯಲ್ಲಿ ಒಬ್ಬರಾದರೂ ಇರಲಿಲ್ಲ. ಜಗನ್ಮೋಹಿನಿಯ ಕಣ್ಣಿನಲ್ಲೂ ಕಣ್ಣೀರು ಉದುರಿತು. ಆದರೆ ಅದು ಸಂತೋಷಭಾಷ್ಪವಲ್ಲ, ದುಃಖಾಶ್ರು. ಅವಳಿಗೆ ಆಕ್ಷಣಕ್ಕೆ ನರಹರಿಪಾತ್ರನ ನೆನಪಾಯಿತೇನೋ.

೨೧

ಅನಿರೀಕ್ಷಿತವಾಗಿ ಗಜಪತಿಯಿಂದ ಬಂದಿದ್ದ ಒಪ್ಪಂದದ ಬೇಡಿಕೆಯನ್ನು ಅಂಗೀಕರಿಸಿ ಕೃಷ್ಣದೇವರಾಯನು ಸೆರೆಯಲ್ಲಿದ್ದ ರಾಮಚಂದ್ರದೇವನನ್ನೂ ಮತ್ತು ಉತ್ಕಲದ ಸೈನಿಕರನ್ನೂ ಬಿಡುಗಡೆ ಮಾಡಿ ಪ್ರತಾಪರುದ್ರಗಜಪತಿಗೆ ಉತ್ಕಲರಾಜ್ಯವನ್ನು ಹಿಂದಿರುಗಿಸಿ ಗೌರವಿಸಿದನು, ಅಮಾತ್ಯಶಿರೋಮಣಿ ತಿಮ್ಮರಸನ ಸಲಹೆಯಂತೆ.

ಜಗನ್ಮೋಹಿನಿಯ ಸಲಹೆಯಿಂದಾಗಿ ಗಜಪತಿ ಈ ಕಾರ್ಯವನ್ನು-ಮಾಡಿದ್ದ. ಆದರೆ ಈ ಕಾರ್ಯವನ್ನು ಯಶಸ್ವಿಯಾಗಿ ಮಾಡಿಕೊಡುವ ತಿಮ್ಮರಸನೇ ಮರೆಹೋಗಬೇಕಿತ್ತು. ತಿಮ್ಮರಸನೂ ಇದಕ್ಕಾಗಿ ಹಾತೊರೆಯುತ್ತಿದ್ದ. ಕಾರಣ, ಗಜಪತಿ ಸೋತುಹೋಗಿದ್ದರೂ, ತಲೆತಪ್ಪಿಸಿಕೊಂಡು ಕೈಗೆ ಸಿಕ್ಕದಂತೆ ಆಡ್ಡಾಡುತ್ತಿದ್ದ. ಇತ್ತ ಉತ್ಕಲವನ್ನು ಗೆದ್ದಿದ್ದರೂ ಕೃಷ್ಣದೇವರಾಯನ ಮುಖ್ಯ ಅಭೀಷ್ಟ ನೆರವೇರಲಿಲ್ಲ. ರಾಜ್ಯಲಕ್ಷ್ಮಿ ಕೈಗೆ ಬಂದಿದ್ದರೂ ರಾಜಪುತ್ರಿ ಹಸ್ತಗತವಾಗಿರಲಿಲ್ಲ.

ಎಂತಲೇ ತಿಮ್ಮರಸನೂ ಸಂಧಾನ ಬೆಳೆಸಿ ರಾಯನಿಗೆ ತೃಪ್ತಿಯಾಗಲು ಜಗನ್ಮೋಹಿನಿಯನ್ನು ವಿಜಯ ವಧುವನ್ನಾಗಿಸಿ ಕೃಷ್ಣದೇವರಾಯನಿಗೆ ವಿವಾಹ ಮಾಡಿಕೊಡಲೊಪ್ಪಿಸಿದನು. ಸರ್ವರ ಅಭೀಷ್ಟವೂ ಇದರಿಂದ ಸಾಧಿತವಾಗಿತ್ತು.

ಕೃಷ್ಣದೇವರಾಯನನ್ನು ಕೈಹಿಡಿದು ಮಡದಿಯಾಗಿದ್ದ ಮುದು ಕುವರಿಯನ್ನು ಸಂತೋಷವಾಗಿಯೇ ಬೀಳ್ಕೊಟ್ಟ ಗಜಪತಿ.

ವಿಜಯನಗರದತ್ತ ಹಿಂದಿರುಗಲು ಸಿದ್ಧರಾದ ವಧೂವರರು ದಾರಿಯಲ್ಲಿನ ಪ್ರೇಕ್ಷಣೀಯ, ಯಾತ್ರಾಸ್ಥಳಗಳನ್ನು ಸಂಧಿಸಿ ಮುಂದು ವರೆದರು. ಶ್ರೀಶೈಲದ ಚಲುವರಾಯ ಸ್ವಾಮಿಯನ್ನು ಕಂಡು ಅಚ್ಚರಿ ಗೊಂಡು ಅರಸು ಅದನ್ನು ರಾಜಧಾನಿಯಲ್ಲಿ ಪ್ರತಿಷ್ಠಿಸಲಾಶಿಸಿಕೊಂಡೊಯ್ದು

ಸಿಂಹಾದ್ರಿಗೆ ಬಂದಾಗ ಸರ್ವರಿಗೂ ಹಳೆಯ ಹುಳಿಯಾದ ನೆನಪು ಮರಕಳಿಸಿತ್ತು. ರಾತ್ರಿ ಸಿಂಹಾದ್ರಿಯಲ್ಲಿ ತಂಗಿದ್ದರು.

ಅಂದಿನ ರಾತ್ರಿ ಮಲಗಿದ್ದ ಜಗನ್ಮೋಹಿನಿ ತನಗೆ ಬೆಳಗ್ಗೆ ಬಂದಿದ್ದ ಸಿಂಹಾದ್ರಿಯ ನೆನಪುಗಳನ್ನು ವಿಪರೀತವಾಗಿ ಯೋಚಿಸಿಕ್ಕೊಂಡು, ತನ್ನ ಹಿಂದಿನ ನಿರ್ಧಾರಕ್ಕೆ ಮೆರಗು ಕೊಡಬಯಸಿದಳು ಮನದಲ್ಲೆ.

ಎಂತಲೇ ಅವಳ ಉತ್ಕಟಾಕಾಂಕ್ಷೆ ಕನಸಿನಲ್ಲಿ ಈಡೇರಿತ್ತು. ಹೊರ ಬಿದ್ದಿತ್ತು.

"ನಾನು ಕಾಮದಾಹದಿಂದಲಾಗಲೀ, ಧನದಾಹದಿಂದಲಾಗಲೀ ಸಾಮ್ರಾಟನ ಮಡದಿಯೆಂದು ಹೆಮ್ಮೆ ಪಡಲಾಗಲೀ ವಿವಾಹವಾಗಿಲ್ಲ. ನನ್ನ ಹೃದಯದಲ್ಲಿರುವ ನಿಮ್ಮಗಳನ್ನೂ ನನ್ನ ನಿರ್ಧಾರವನ್ನೂ ಮರೆತಿಲ್ಲ. ಖಂಡಿತ ನಾನು ರಕ್ತದಾಹದಿಂದ ನಿಮ್ಮಗಳಿಗೆ ರಕ್ತತರ್ಪಣವಿತ್ತು ಆತ್ಮ ತಣಿಸಲು ವಿವಾಹವಾಗಿದ್ದೇನೆ. ರಾಯನನ್ನು ಇದು ನಿಶ್ಚಯ ! ಸಂಶಯ ವಿಲ್ಲ. ನನ್ನ ಮನ ಕದಡಬೇಡಿ."

ಎಂದು ಚಿತ್ಕಾರಮಾಡಿದ ಜಗನ್ಮೋಹಿನಿಯನ್ನು ಪಕ್ಕದಲ್ಲಿದ್ದ ಕೃಷ್ಣ ದೇವರಾಯನು ಎಚ್ಚರಿಸಿದ. ಕನಸಿನಿಂದ ಎಚ್ಚರವಾಗಿ ಜಗನ್ಮೋಹಿನಿ, ಪಕ್ಕದಲ್ಲಿ ರಾಯನನ್ನು ಕಂಡು ನಿಬ್ಬೆರಗಾದಳು. ತನ್ನ ರಹಸ್ಯ ಹೊರ ಬಿತ್ತೇನೋ ಎಂಬ ಸಂಶಯದಿಂದ. ಬೆಳಿಗ್ಗೆ ಎದ್ದ ರಾಯನು ಜಗನ್ಮೋಹಿನಿ ಯನ್ನು ರಾತ್ರಿಯ ಕನಸಿನ ಬಗ್ಗೆ ಪರಿಹಾಸ್ಯಮಾಡಿದಾಗ ತನ್ನ ಮುಗ್ಧತೆ ಯನ್ನು ಪ್ರದರ್ಶಿಸಿ ಪರಪುಟ್ಟನಂತೆ ಮಾತನಾಡಿ ರಾಯನನ್ನು ಸಮಾಧಾನ ಮಾಡಿ ಸಂಶಯ ಬಾರದಂತೆ ನಡೆದುಕೊಂಡಿದ್ದಳು. ಆದರೆ ರಾಯ ಮಾತ್ರ ತಿಮ್ಮರಸನಿಗೆ ಇದನ್ನು ವರದಿಮಾಡಲು ಮರೆಯಲಿಲ್ಲ.

ದಿಗ್ವಿಜಯದಿಂದ ಹಿಂದಿರುಗಿದ್ದ ರಾಯನನ್ನೂ. ಮತ್ತು ವಧುವನ್ನೂ ಉತ್ಸಾಹದಿಂದ ರಾಜಧಾನಿಗೆ ರಾಜಧಾನಿಯೇ ಆದರದಿಂದ ಆಹ್ವಾನಿಸಿ ತಮ್ಮ ಗೌರವವನ್ನು ವ್ಯಕ್ತಪಡಿಸಿತು.

ರಾಯನೂ—ಜಗನ್ಮೋಹಿನಿಯೂ ಆನೆಯ ಅಂಬಾರಿಯಮೇಲೆ—ವಿಜಯನಗರದ ವಿಶಾಲ, ಭವ್ಯ, ದಿವ್ಯ ಬೀದಿಯಲ್ಲಿ ನೆರೆದಿದ್ದ ಸಕಲ ಪೌರರಿಗೂ ನಮಸ್ಕರಿಸಿ ಅರಮನೆಯನ್ನು ಹೊಕ್ಕರು.

ಸಕಲ ಪರಿವಾರದ ಜನಗಳಿಂದಾವೃತಳಾಗಿ ಸಕಲ ರಾಜಮರ್ಯಾದೆಗಳನ್ನುಅನುಭವಿಸುತ್ತಾ ಹೆಣ್ಣಿನ ಅಂತಃಕರಣ ಅವಳನ್ನು ಕಾಡಹತ್ತಿತ್ತು.

" ತನ್ನ ಕೃತ್ರಿಮವನ್ನು, ಗೌರವಿಸುತ್ತಿರುವ ಅರಿಯದೆ ಪ್ರೀತಿಸುತ್ತಿರುವ ಹಿರಿಯಜೀವವನ್ನು ಇರಿಯಲು ಇದು ನ್ಯಾಯವೇ ? ಧರ್ಮವೆ ? " ಎಂದು,

" ಹಾಗೆಂದ ಮಾತ್ರಕ್ಕೇ ಈ ಗೌರವ, ವಿಶ್ವಾಸ, ಪ್ರೀತಿ ನಿನ್ನೋರ್ವಳ ಮೇಲೆ ಮಾತ್ರ ವ್ಯಕ್ತವಾಗುತ್ತದೆ. ಆದರೆ ಎಷ್ಟು ಸಹಸ್ರ ಜನಗಳ ಎಲುಬಿನ ಮೂಳೆಗಳ ಮೇಲೆ, ಎಷ್ಟುರಕ್ತದ ಕೋಡಿಯ ಮೇಲೆ ಕಟ್ಟಿದೆ ಈ ನಿನ್ನ ವಿಲಾಸ ಭವನ, ಜೇನಿನ ದೋಣಿ ಅರಿತಿರುವೆಯಾ ? ನರಹರಿಯನ್ನು ಮರೆತೆಯಾ ? ಪ್ರತಿಜ್ಞೆ ? "

—ಎಂದು ಜ್ಞಾಪಿಸಿ, ತಲೆಗೆ ಹೊಡೆಯುವಂತೆ ಹಾರಿಬರುತ್ತಿ ಮತ್ತೊಂದು ಯೋಚನೆಯ ಅಲೆ.

ಈ ತೂಗಾಟಗಳ ಮಧ್ಯೆ, ಈ ಪರಿಜನರ ಗದ್ದಲದ ನಡುವೆ, ಜಗನ್ಮೋಹಿನಿಗೆ ತನ್ನ ಭಾವನೆಗಳನ್ನು ತಾನೇ ವ್ಯಕ್ತಪಡಿಸಿಕೊಳ್ಳಲು ಆಸ್ಪದವಾಗದೆ, ವ್ಯಕ್ತಪಡಿಸಿದರೆ ಅಪಾಯಕ್ಕೆ ಎಡೆಯಾಗುತ್ತದೋ ಎಂದು ಚಿಂತಿಸಿ, ಅವರುಗಳನ್ನು ಹೋಗಲು ಅಪ್ಪಣೆಯನ್ನಿತ್ತಳು ತಾನು ವಿಶ್ರಾಂತಿ ಪಡೆಯುವ ನೆಪದಲ್ಲಿ

ಅವರಿಂದ ದೂರಳಾಗಿ ಒಂಟಿಯಾಗಿಯೇ ಇದ್ದಳು ಅವಳು. ಆದರೆ, ಈ ಮಹಾಸಮಸ್ಯೆಯ ಮಥನ ಅವಳನ್ನು ಗರಗಸದಂತೆ ಕೊಯ್ಯುತ್ತಿತ್ತು. ದಾರಿಯಾವುದನ್ನು ನಿರ್ಧರಿಸಲಾರದೆ ಅಳಹತ್ತಿದಳು ಮಲಗಿ,

ಅವಳಿಗೆ ಎಚ್ಚರವಾದುದು ದಾಸಿ ಬಂದು ಸಂಜೆ ಕೂಗಿದಾಗಲೇ.

ಕಂದಿದ ಅವಳ ಮುಖವನ್ನು ಕಂಡ ದಾಸಿ ಅವಳನ್ನು ಕಾರಣ ಬೇಡಿದಳು.

ತಲೇನೋವಿನ ಕಾರಣವನ್ನು ಮುಂದಿಟ್ಟು ತಿರಸ್ಕಾರದಿಂದ ಮುಂದು ವರೆದಳು ಜಗನ್ಮೋಹಿನಿ,

ದಾಸಿ ಬಂದಿದ್ದುದು ಅವಳನ್ನು ರಾತ್ರಿಯ ಮೆರವಣಿಗೆಗೆ ಅಲಂಕರಿಸಲು—ಕಾರಣ ಅಂದಿನ ರಾತ್ರಿಯೇ ಅವರ ಪ್ರಥಮ ಸಮಾಗಮದ ರಾತ್ರಿ ನಿಶ್ಚಿತವಾಗಿತ್ತು.

ಇದನ್ನರಿತ ಜಗನ್ಮೋಹಿನಿಯ ಕಣ್ಣಲ್ಲಿ ಒಂದು ಕೋಲ್ಮಿಂಚು ಮೂಡಿ ಮಾಯವಾಯಿತು.

ನಸುಲಜ್ಜೆ, ಮುಗುಳ್ನಗೆಯನ್ನು ಮಂದಹಾಸ ಬೀರಿ ತನ್ನ ತನವನ್ನು ಕಾಪಾಡಿಕೊಂಡಳು. ಹೃದಯ ಮಾತ್ರ ಮಸೆಗಲ್ಲಾಗಿತ್ತು.

ಇತ್ತ ರಾಯನೂ ತನ್ನ ಪ್ರಥಮ ಸಮಾಗಮಕ್ಕೆ ಸಿದ್ಧತೆಗಳನ್ನು ಮಾಡಿಕೊಂಡು ಹೊರಡಲುದ್ಯುಕ್ತನಾಗಿದ್ದ.

ಆದರೆ ಎಷ್ಟು ಉತ್ಸುಕನಾಗಿದ್ದನೋ ಹೊರಡುವ ವೇಳೆಯಲ್ಲಿ ತಿಮ್ಮರಸನು ಅನಿರೀಕ್ಷಿತವಾಗಿ ಅನಾಹ್ವಾನಿತವಾಗಿ ಬಂದು ತನ್ನ ಪ್ರಥಮ ಸಮಾಗಮದ ಬಗ್ಗೆ ಕೆಲವು ಸೂಕ್ಷ್ಮಗಳನ್ನು ವ್ಯಕ್ತಪಡಿಸಿ, ಕಿವಿಯಲ್ಲಿ ಏನನ್ನೋ ಉಸುರಿ ನಿರುತ್ಸಾಹಗೊಳಿಸಿದ್ದ—ರಾಯನನ್ನು ಯೋಚನೆಯ ಮಹಾ ಸಾಗರದಲ್ಲಿ ಅದ್ದಿ.

೨೨

ಕೃಷ್ಣದೇವರಾಯನು ಇನ್ನೂ ಅನ್ಯಮನಸ್ಕನಾಗಿ, ಏನನ್ನೋ ಯೋಚಿಸುತ್ತಾ ಕುಳಿತಿದ್ದನು. ಅವನು ಎಷ್ಟು ಮರೆಯಲೆತ್ನಿಸಿದರೂ ಜಗನ್ಮೋಹಿನಿಯ ದುಷ್ಟ ಆಲೋಚನೆಯನ್ನು—ಸಂಚನ್ನು—ಮರೆಯಲಾಗಲಿಲ್ಲ. ಮೊದಲು ಕೃಷ್ಣದೇವರಾಯನಿಗೆ ಈ ವಿಷಯವನ್ನು ನಂಬಲು ಸಾಧ್ಯವಾಗಲಿಲ್ಲ. ತಿಮ್ಮರಸನಲ್ಲದೆ ಬೇರೊಬ್ಬರು ಬಂದು ಈ ವಿಷಯವನ್ನು ಹೇಳಿದ್ದರೆ ಕೃಷ್ಣದೇವರಾಯನು ನಂಬುತ್ತಿದ್ದನೋ ಇಲ್ಲವೋ ಹೇಳುವುದು ಕಷ್ಟ. ಏಕೆಂದರೆ ಜಗನ್ಮೋಹಿನಿಯು ತನ್ನ ವಿಷಯದಲ್ಲೂ ಇಂತಹ ದುರಾಲೋಚನೆ ಮಾಡುತ್ತಿರುವಳೆಂದು ರಾಯನು ಕನಸು ಮನಸಿನಲ್ಲಿ ತಿಳಿದಿರಲಿಲ್ಲ. ಜಗನ್ಮೋಹಿನಿಯ ಸುಂದರ ರೂಪ ಅವಳ ಸೌಜನ್ಯಪೂರಿತವಾದ ನಡೆನುಡಿಗಳು ಕೃಷ್ಣದೇವರಾಯನನ್ನು ಮರುಳುಗೊಳಿಸಿದ್ದವು. ಅವಳ ಆ ಸುಂದರ ಮುಖವಾಡದ ಹಿಂದೆ ಎಂತಹ ಪಿಶಾಚಿ ಅಡಗಿದೆ ಎಂದು ಯಾರಿಂದಲೂ ಊಹಿಸಲು ಸಾಧ್ಯವೇ ಇರಲಿಲ್ಲ. ಜಗನ್ಮೋಹಿನಿ ತನ್ನ ವಿಷಯದಲ್ಲಿ, ಕೈಹಿಡಿದ ಗಂಡನ ವಿಷಯದಲ್ಲಿ ಹೀಗೆ ಗೋಮುಖವ್ಯಾಘ್ರತನ ತೋರಿಸುವಳೆಂಬುದು ಕೃಷ್ಣದೇವರಾಯನ ಊಹೆಗೂ ನಿಲುಕದ ಸತ್ಯವಾಗಿತ್ತು. ಏಕೆಂದರೆ ಕೃಷ್ಣದೇವರಾಯನು ಅವಳನ್ನು ಇತರ ರಾಜಪುತ್ರಿಯರಂತೆ ಒಬ್ಬ ಕ್ಷತ್ರಿಯ ರಮಣಿ ಎಂದು ತಿಳಿದಿದ್ದ. ತನ್ನಂತಹ ಸಾಮ್ರಾಟನನ್ನು ಸಂತೋಷದಿಂದ ವಿವಾಹವಾಗುವಳೆಂದು ತಿಳಿದಿದ್ದ. ಆದರೆ, ಅವನ ಊಹೆ ತಪ್ಪಾಗಿತ್ತು. ಜಗನ್ಮೋಹಿನಿ ಇತರ ರಾಜಪುತ್ರಿಯರಂತೆ, ಕೃಷ್ಣದೇವರಾಯನ ಕೀರ್ತಿಗಾಗಿ, ಅಧಿಕಾರ ಅಂತಸ್ತುಗಳಿಗಾಗಿ,

ರೂಪಯೌವನಗಳಿಗಾಗಿ, ಮತ್ತಿತರ ಸದ್ಗುಣಗಳಿಗಾಗಿ ವಿವಾಹವಾಗಿರಲಿಲ್ಲ. ಅವನನ್ನು ಅವಳು ಸೇಡಿಗಾಗಿ, ಪ್ರತಿಕಾಣಿಕೆಯಿಂದ ವಿವಾಹವಾಗಿದ್ದಳು. ಇದನ್ನು ಕೃಷ್ಣದೇವರಾಯನು ತಿಳಿದಿರಲಿಲ್ಲ. ಅವನಿಗೆ ತಿಳಿಯಬಾರದೆಂಬುದೇ ಜಗನ್ಮೋಹಿನಿಯ ಆಶಯವಾಗಿತ್ತು. ಅವನಿಗೆ ತನ್ನ ಸಂಚು ತಿಳಿಯುವ ಮುನ್ನ ಅವನ ಮೇಲೆ ಬಿದ್ದು ಅವನನ್ನು ಯಮಲೋಕಕ್ಕೆ ಕಳುಹಿಸಿ, ಆ ಮೂಲಕ ತಾನು ನರಹರಿಪಾತ್ರ ಹಾಗೂ ವೀರಭದ್ರದೇವರಿಗೆ ಕೊಟ್ಟಿದ್ದ ವಚನವನ್ನು ಪಾಲಿಸಿಕೊಳ್ಳಬೇಕೆಂಬುದೇ ಜಗನ್ಮೋಹಿನಿಯ ಇಚ್ಛೆಯಾಗಿತ್ತು. ಅವಳುತನ್ನ ಹಾಗೂ ಕೃಷ್ಣದೇವರಾಯನ ಪ್ರಥಮ ಸಮಾಗಮದ ರಾತ್ರಿಯಲ್ಲೇ ಪ್ರಥಮ ಚುಂಬನದಿಂದ ಅವನನ್ನು ಅಂತ್ಯಗೊಳಿಸಲು ನಿಶ್ಚಯಿಸಿದ್ದಳು.

ಇದು ಕಾರ್ಯಗತವಾಗುವ ಮುನ್ನವೇ ಕೃಷ್ಣದೇವರಾಯನಿಗೆ ತಿಳಿದು ಹೋದುದು ಅವಳ ದೌರ್ಭಾಗ್ಯವೇ ಸರಿ.

ಕೃಷ್ಣದೇವರಾಯನು ಎಷ್ಟು ಆಲೋಚಿಸಿದರೂ ಜಗನ್ಮೋಹಿನಿಯ ಘಾತುಕತನದ ಕಲ್ಪನೆ ಮನಸ್ಸಿಗೆ ಹಿಡಿಯಲಿಲ್ಲ. ಜಗನ್ಮೋಹಿನಿಯಿಂದ ಇಂತಹ ಹೇಯವಾದ ಕೆಲಸ ಸಾಧ್ಯವೇ ಎಂದು ಕೃಷ್ಣದೇವರಾಯನ ಸಂಶಯ. ಅದರಲ್ಲೂ ನನ್ನನ್ನು, ಅಗ್ನಿಸಾಕ್ಷಿಯಾಗಿ ಕೈಹಿಡಿದ ಗಂಡನನ್ನು ಕೈಯಾರೇ ಕೊಲೆಗೈಯಲು ಅವಳಿಂದ ಸಾಧ್ಯವೇ ? ತನ್ನ ಮೇಲೆ ಈ ಬಗೆಯಲ್ಲಿ ಸೇಡು ತೀರಿಸಿಕೊಳ್ಳುವಂತಹ ಮಹಾಪರಾಧ ತಾನು ಏನು ಮಾಡಿದೆನೋ ? ಎನ್ನುವ ಪ್ರಶ್ನೆ ಬಾರಿಬಾರಿಗೂ ಏಳುತ್ತಿತ್ತು. ಇವಕ್ಕೆ ಸಮಂಜಸವಾದ ಉತ್ತರ ಮಾತ್ರ ದೊರೆಯದೆ ಹೋಗಿತ್ತು.

ಕೃಷ್ಣದೇವರಾಯನು ಉತ್ಕಲವ ಮೇಲೆ ದಂಡೆತ್ತಿ ಹೋಗಿದ್ದ. ತನ್ನ ಶಕ್ತಿ ಸಾಮರ್ಥ್ಯಗಳಿಂದ ಉತ್ಕಲವನ್ನೆಲ್ಲಾ ಜಯಿಸಿದ್ದ. ಇದನ್ನು ತಪ್ಪೆನ್ನಲು ಬರುವಂತೆ ಇರಲಿಲ್ಲ. ಸಾಮ್ರಾಜ್ಯಾಕಾಂಕ್ಷಿಗಳಾದ ಅರಸರು ಮಾಡುವ ಕೆಲಸಗಳಲ್ಲಿ ಇದೊಂದು ಇದರಿಂದ ಶತ್ರುಮರ್ದನವೆಂತೋ ಸಾಮ್ರಾಜ್ಯ ವಿಸ್ತರವೂ ಹೌದು. ಇದು ಕ್ಷತ್ರಿಯೋಚಿತವಾದ ಕಾರ್ಯವೇ ಆಗಿತ್ತು. ಈ ಒಂದು ಕಾರಣಕ್ಕಾಗಿ ಜಗನ್ಮೋಹಿನಿ ಸೇಡಿನ ಮನೋಭಾವ ಹೊಂದಿರಬಹುದೆ ? ಎಂದು ಆಲೋಚಿಸಿದ. ಒಂದು ವೇಳೆ ಈ

ಬಗೆಯ ಸೇಡಿನ ಪ್ರವೃತ್ತಿ ತಳೆದಿದ್ದರೂ ಅದನ್ನು ಉಚಿತ ರಾಜನೀತಿಯಿಂದ ಬಗೆಹರಿಸಿದ್ದ. ತಾನು ಗೆದ್ದ ಸಮಸ್ತ ಉತ್ಕಲವನ್ನು ಮತ್ತೆ ಗಜಪತಿಗೇ ಹಿಂದಿರುಗಿಸಿ, ಅವನೊಂದಿಗೆ, ಸ್ನೇಹಪೂರ್ವಕವಾದ, ಗೌರವಯುತವಾದ ಒಪ್ಪಂದವನ್ನು ಮಾಡಿಕೊಂಡಿದ್ದ. ಇಲ್ಲಿ ಪರಸ್ಪರ ದ್ವೇಷಕ್ಕೆ, ಹಗೆತನಕ್ಕೆ ಕಾರಣವೇ ಇರಲಿಲ್ಲ. ಹಾಗೆ ನೋಡಲು ಹೋದರೆ ಜಗನ್ಮೋಹಿನಿಯನ್ನು ಕೃಷ್ಣದೇವರಾಯನು ವಿವಾಹವಾಗಲು ಒಪ್ಪಿದುದು ಅವಳ ರೂಪ ಗುಣಾತಿಶಯಗಳಿಗೆ ಮರುಳಾಗಿ ಅಲ್ಲ. ಅವಳು ವಿಜಯ ವಧುವಾಗಿದ್ದುದರಿಂದ ತಮ್ಮೆರಡು ರಾಷ್ಟ್ರಗಳ ಬಾಂಧವ್ಯವನ್ನು ಚಿರಕಾಲ ಉಳಿಯುವಂತೆ ಮಾಡಲು ಈ ರಕ್ತ ಸಂಬಂಧವನ್ನು ಮಾಡಿಕೊಂಡಿದ್ದ. ಅಂದಮೇಲೆ ಜಗನ್ಮೋಹಿನಿಯು ತನ್ನ ಮೇಲೆ ಸೇಡು ತೀರಿಸಿಕೊಳ್ಳಲು ಕಾರಣವೇ ಇಲ್ಲ. ಇಷ್ಟಾದರೂ ಜಗನ್ಮೋಹಿನಿ ತನ್ನ ಮೇಲೆ ಕತ್ತಿಕಟ್ಟಿದ್ದಳು. ತನ್ನ ತಂದೆಯ ಇಚ್ಛೆಯ ವಿರೋಧವಾಗಿ ಸೇಡುಬಗೆಯಲು ಸಂಕಲ್ಪಿಸಿದ್ದಳು. ಅದೇ ಕೃಷ್ಣದೇವರಾಯನಿಗೆ ಆಶ್ಚರ್ಯವನ್ನು ಉಂಟು ಮಾಡಿದ ಸಂಗತಿ.

ಬಹುಶಃ ಜಗನ್ಮೋಹಿನಿಯು ಸಿಂಹಾದ್ರಿಯಲ್ಲಿ ತನಗಾದ ಅಪಮಾನವನ್ನು ನೆನೆದು ಸೇಡುತೀರಿಸಿಕೊಳ್ಳಲು ನಿಶ್ಚಯಿಸಿರಬಹುದು. ಇಲ್ಲವೇ ಅಗಲಿದ ಸೋದರ ವೀರಭದ್ರದೇವನಿಗಾಗಿ, ನರಹರಿಪಾತ್ರನಿಗಾಗಿ ಸೇಡಿನ ಮನೋಭಾವ ತಳೆದಿರಬಹುದು ಎಂದು ಆಲೋಚಿಸಿದ. ಈ ಉತ್ತರಗಳಿಂದಲೂ ಮನಸ್ಸಮಾಧಾನ ಉಂಟಾಗಲಿಲ್ಲ!

ಸಿಂಹಾದ್ರಿಯಲ್ಲಿ ಕೃಷ್ಣದೇವರಾಯನು ದುಡುಕಿ ಶಿಲಾಲೇಖನ ಬರೆದಿದ್ದುದು ಒಂದು ರೀತಿಯಲ್ಲಿ ಜಗನ್ಮೋಹಿನಿಗೆ ಅಪಮಾನಮಾಡಿದಂತೆ ಆಗಿತ್ತು. ಆದರೆ ಜಗನ್ಮೋಹಿನಿಯನ್ನು ತನ್ನ ಪ್ರತಿಜ್ಞೆಯಂತೆ ಅನಾಮಧೇಯ ಕಮ್ಮಾರನಿಗೆ ಕೊಟ್ಟು ಮದುವೆ ಮಾಡದೆ, ಕಮ್ಮಾರನ ವೇಷದಲ್ಲಿ ತಾನೇ ವಿವಾಹವಾಗಿ, ಅವಳಿಗಾದ ಅಪಮಾನಕ್ಕೆ ಸೂರ್ಯಡಿಯಾಗಿ ಅನುಗ್ರಹವನ್ನೇ ಮಾಡಿದ. ಈ ಕಾರ್ಯದಿಂದ ಜಗನ್ಮೋಹಿನಿಯನ್ನು ಅಪಮಾನಮಾಡಿದನೆನ್ನುವುದಕ್ಕಿಂತಲೂ ಉದ್ಧಾರಮಾಡಿದನೆನ್ನಬೇಕು. ಇದರಿಂದ ಜಗನ್ಮೋಹಿನಿಗೆ ರಾಯನ ಮೇಲೆ ಸಿಟ್ಟುಬರಲು ಕಾರಣವೇ ಇರಲಿಲ್ಲ.

ಇನ್ನು ಅಗಲಿದ ವೀರಭದ್ರದೇವನಿಗಾಗಿ ಸೇಡು ತಳೆದಿರುವಳೆನ್ನಲು— ಇದರಲ್ಲಿ ಕೃಷ್ಣದೇವರಾಯನ ಯಾವ ತಪ್ಪೂ ಇರಲಿಲ್ಲ. ತನ್ನನ್ನು ಕೊಲ್ಲಲು ಬಂದ ವೀರಭದ್ರದೇವನನ್ನು ಕ್ಷಮಿಸಿ, ಅವನಿಗೆ ವೀರಪೂಜೆ ಮಾಡಿ, ಮಲೆಬೆನ್ನೂರಿನ ಮಾಂಡಲೀಕನನ್ನಾಗಿ ಮಾಡಿದ್ದ. ಆದರೆ ವೀರಭದ್ರ ದೇವನು ತಾನಾಗಿ ವಿದ್ರೋಹ ಬಗೆದು ಸಿಕ್ಕುಹಾಕಿಕೊಂಡು, ವಿಚಾರಣೆ ನಡೆಯುವ ಮೊದಲೇ ಆತ್ಮಹತ್ಯೆ ಮಾಡಿಕೊಂಡಿದ್ದ. ಇದರಲ್ಲಿ ಕೃಷ್ಣ ದೇವರಾಯನ ಪಾತ್ರವಿರಲಿಲ್ಲ. ಅವನು ವಿದ್ರೋಹ ಬಗೆದು ಅದರ ಶಿಕ್ಷೆಯನ್ನು ತನ್ನ ಕೈಯಾರ ಅನುಭವಿಸಿದ್ದ! ಇದರಲ್ಲಿ ಯಾವ ಅನ್ಯಾಯವೂ ಇರಲಿಲ್ಲ.

ಅಂತೆಯೇ ನರಹರಿಪಾತ್ರನ ಮರಣದಲ್ಲೂ ಯಾವ ಅನ್ಯಾಯ ನಡೆದಿರಲಿಲ್ಲ. ಶತ್ರುವಿನ ಕೈಯಿಂದ ಗಜಪತಿಯನ್ನು ಕಾಪಾಡುವ ಕಾರ್ಯದಲ್ಲಿ ವೀರನಂತೆ ಹೋರಾಡಿ, ರಣರಂಗದಲ್ಲಿ ಮಡಿದು, ವೀರ ಸ್ವರ್ಗವನ್ನೇರಿದ ಆ ವೀರನ ಹಗೆಗೆ ಕೃಷ್ಣದೇವರಾಯನಿಂದ ಯಾವ ಅಪಚಾರ ನಡೆದಿರಲಿಲ್ಲ. ಹೀಗಿದ್ದು ಯಾವ ಕಾರಣಕ್ಕಾಗಿ, ಜಗನ್ಮೋಹಿನಿ ತನ್ನ ಮೇಲೆ ದ್ವೇಷ ಕಾರುತ್ತಿರುವಳು, ಸೇಡು ಬಯಸುತ್ತಿರುವಳೆಂಬುದು ತಿಳಿಯದೇ ಹೋಗಿತ್ತು. ಇದೇ ಯೋಚನೆಯಲ್ಲಿ ಸಂಜೆ ಸರಿದು ರಾತ್ರಿ ಯಾವುದೂ ತಿಳಿಯಲಿಲ್ಲ. ಪುರೋಹಿತರು ಬಂದು ಶಾಸ್ತ್ರವಿಧಿಗಳಿಗಾಗಿ ಎಚ್ಚರಿಸಿದಾಗಲೇ ಕೃಷ್ಣದೇವರಾಯನಿಗೆ ಎಚ್ಚರ.

ನಡೆಯಬೇಕಾಗಿದ್ದ ಶಾಸ್ತ್ರ ವಿಧಿಗಳೆಲ್ಲ ಸಾಂಗವಾಗಿ ನಡೆದವು. ನವವಧುವಾದ ಜಗನ್ಮೋಹಿನಿ ಲಜ್ಜೆಯೇ ಮೂರ್ತಿವೆತ್ತಂತೆ ಈ ಎಲ್ಲ ಕಾರ್ಯಗಳಲ್ಲಿ ಪಾಲುಗೊಂಡಳು. ಶಾಸ್ತ್ರ ವಿಧಿಗಳೆಲ್ಲ ಪೂರೈಸಿದ ಮೇಲೆ ಪುರೋಹಿತರ ಸುಮಂಗಲಿಯರ ಆಶೀರ್ವಾದ, ಹರಕೆಯನ್ನು ಪಡೆದು, ಕೃಷ್ಣದೇವರಾಯನು ಜಗನ್ಮೋಹಿನಿಯ ಅಂತಃಪುರವನ್ನು ಪ್ರವೇಶಿಸಿ, ಅವಳ ಶಯ್ಯಾಗಾರವನ್ನು ಸೇರಿದನು.

ಜಗನ್ಮೋಹಿನಿಯು ಈ ದಿನಕ್ಕಾಗಿ ಎಷ್ಟು ಜನ್ಮಗಳಿಂದ ಕಾದಿದ್ದಳೋ ಎನ್ನುವಂತೆ ಉತ್ಸಾಹದ ಪುತ್ಥಳಿಯಾಗಿದ್ದಳು. ಅವಳು ಸ್ವರ್ಗಲೋಕದ ಸುರ ಸುಂದರಿಯರನ್ನು ನಾಚಿಸುವಂತೆ ದಿವ್ಯಾಲಂಕಾರ ಮಾಡಿಕೊಂಡಿದ್ದಳು.

ದಿವ್ಯವಾದ ಕೆಂಪು ಪೀತಾಂಬರವನ್ನು ಉಟ್ಟು, ಮೈಗೆ ಸುಗಂಧದ್ರವ್ಯಗಳನ್ನು ಲೇಪಿಸಿಕೊಂಡಿದ್ದಳು. ಅವಳು ಕಟ್ಟಿದ್ದ ಎದೆಯ ವಸ್ತ್ರ ಅವಳ ಚೆಲುವೊಡಲ ಅಂಗಸೌಷ್ಠವತೆಯನ್ನು ಎತ್ತಿ ತೋರಿಸುತ್ತಿತ್ತು. ಅವಳ ಸುಭಗ ದೇಹದಲ್ಲಿ ಅವು ಮದನೋತ್ಸವದ ಬಲಿಪೀಠಗಳಂತಿದ್ದವು. ಅವಳು ಹೇರಳವಾಗಿ ಒಡವೆಗಳನ್ನು ಹೇರಿಕೊಳ್ಳದೇ ಇದ್ದರೂ ಹಾಕಿಕೊಂಡಿದ್ದ ಅಲ್ಪ ಒಡವೆಗಳು ಅವಳಿಗೆ ಚೆನ್ನಾಗಿ ಒಪ್ಪುತ್ತಿದ್ದವು. ಎದೆಯಲ್ಲಿ ನವರತ್ನ ಖಚಿತವಾದ ಉಡ್ಯಾಣ ಶೋಭಿಸುತ್ತಿತ್ತು. ಕಾಲಿಗೆ ಗೆಜ್ಜೆಯ ನೂಪುರ. ತೋಳಿಗೆ ತೋಳ ಬಾಪುರಿ. ಕತ್ತಿನಲ್ಲಿ ನವರತ್ನಖಚಿತವಾದ ಚಂದ್ರಹಾರ. ಹಣೆಯಲ್ಲಿ ತಿಲಕ. ಹುಬ್ಬುಗಳನ್ನು ಬಿಲ್ಲಿನಂತೆ ಮಾಡಿ ಕಣ್ಣೋಟದ ಕುಡಿನೋಟದಿಂದ ರಾಯನ ಹೃದಯದ ಬೇಟೆಯಾಡಲು ನಿಶ್ಚಯಿಸಿದಂತೆ ಇತ್ತು ಆ ನೋಟ. ತಲೆಗೂದಲನ್ನು ಚೆನ್ನಾಗಿ ಬಾಚಿ, ಮುಡಿಯನ್ನು ಆಕರ್ಷಕವಾಗಿ ಕಟ್ಟಿ. ವನದೇವತೆಯಂತೆ, ಚೆಂಗುಲಾಬಿಯ ದಂಡೆಯಿಂದ ಅದನ್ನು ಅಲಂಕರಿಸಿದ್ದಳು.

ಅವಳು ನಗುನಗುತ್ತಾ, ಒಮ್ಮೊಮ್ಮೆ ಲತೆಯಂತೆ ಬಳುಕಿ ಬಾಗುತ್ತಾ ಲಜ್ಜೆಯಿಂದ ಕೆಂಪಾದ ಮುಖವನ್ನು ತಗ್ಗಿಸಿ, ಒಮ್ಮೊಮ್ಮೆ ಬೆರಗು ಕಣ್ಣುಗಳಿಂದ ತನ್ನನ್ನು ಸಜ್ಜೆ ಮನೆಗೆ ಕಳುಹಿಸಿಕೊಡಲು ಬಂದ ಸುವಾಸಿನಿಯರನ್ನು ತುಂಟತನದಲ್ಲಿ ನೋಡುತ್ತಾ ಮುನ್ನಡೆದು ಸಜ್ಜೆ ಮನೆಯೊಳಗೆ ಬಂದಳು. ಅಲ್ಲಿ ಕ್ಷಣಕಾಲ ನಿಂತು ತನ್ನ ಹಿಂದೆ ಬಂದಿದ್ದ ಹೆಂಗೆಳೆಯರನ್ನೆಲ್ಲಾ ಭಯಮಿಶ್ರಿತ ಕಣ್ಣುಗಳಿಂದ ನೋಡಿದಳು. ಅವರು ಕಣ್ಣು ನೋಟದಲ್ಲೇ ದೃಶ್ಯ ಪಡೆದು ಉತ್ತೇಜಿತಳಾಗಿ, ಸುವಾಸಿನಿಯರನ್ನು ಹಿಂದುಳಿಸಿ, ತನ್ನ ಹೃದಯದ ಭಾವನೆಗಳನ್ನು ತಮ್ಮ ಕುಡಿನೋಟಗಳಿಂದ ಭೇದಿಸಲೆತ್ನಿಸುತ್ತಿದ್ದ ಚೆದುರೆಯರ ಕಣ್ಣುತಪ್ಪಿಸಿಕೊಂಡು, ರಸಿಕೆಯರೂ, ಶೃಂಗಾರಪ್ರಿಯರೂ ಆದ ಸುಂದರಿಯರ ಅರ್ಥಗರ್ಭಿತವಾದ ನಗು, ಮೋಹಕವಾದ ನೋಟಗಳನ್ನೂ, ಹಾವಭಾವಗಳನ್ನೂ ಎದುರಿಸಲಾರದೆ, ನಸು ನಾಚಿ, ತಲೆ ತಗ್ಗಿಸಿ, ಅವರ ವ್ಯಂಗ್ಯೋಕ್ತಿಗಳನ್ನೂ, ಕುಹಕ ನಗುವನ್ನೂ ಸಹಿಸಿಕೊಂಡು ಅಂತೂಇಂತೂ ಸಜ್ಜೆಮನೆಯ ಬಾಗಿಲನ್ನು ತೆರೆದು ಒಳಹೊಕ್ಕಳು. ಅವಳನ್ನು ಹಿಂಬಾಲಿಸಿಕೊಂಡು ಬಂದಿದ್ದ ಹೆಂಗಳೆಯರೆ ಅಲ್ಲಲ್ಲೇ ನಿಂತು

ಜಗನ್ಮೋಹಿನಿಗೆ ಮದನೋತ್ಸವದಲ್ಲಿ ಜಯ ಕೋರಿ ಅಲ್ಲಿಂದ ನಿರ್ಗಮಿಸಿದರು.

ಜಗನ್ಮೋಹಿನಿ ಶಯ್ಯಾಗಾರದೊಳಗೆ ಬಂದಮೇಲೆ ತಾನು ಗೆದ್ದೆನೆನ್ನುವಂತೆ ಸಮಾಧಾನದ ನಿಟ್ಟುಸಿರುಬಿಟ್ಟು, ಮಧುರ ಮಿಲನಕ್ಕಾಗಿ ಸುಸಜ್ಜಿತವಾದ ಸಜ್ಜೆಮನೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದಳು.

ಶಯ್ಯಾಗಾರವು ವಿಶಾಲವಾಗಿದ್ದು ಕಣ್ಮನಗಳಿಗೆ ಹಿತವನ್ನುಂಟುಮಾಡುವ ತೆಳುನೀಲಿಬಣ್ಣದ ಬೆಳಕಿನಿಂದ ತುಂಬಿತ್ತು. ಗೋಡೆಗಳಿಗೆ ವಾತಾಯನ ಉಳಿದು ಇತರ ಭಾಗಗಳಿಗೆಲ್ಲ ಮುತ್ತಿನ ಕಸೂತಿ ಕೆಲಸ ಮಾಡಿದ್ದ ತೆಳುವಾದ ಜಾಲರಿ ತೆರೆಗಳು. ಭಿತ್ತಿಯಲ್ಲಿ ಸಹಸ್ರ ಕಮಲದಳ ಪದ್ಮೆಯಾದ ಶ್ರೀ ಲಕ್ಷ್ಮಿದೇವಿಯನ್ನು ಬಣ್ಣಗಳಲ್ಲಿ ಬಿಡಿಸಿ, ಉಳಿದ ಭಾಗವನ್ನೆಲ್ಲ ತಿಳಿಗೊಳದಂತೆ ಚಿತ್ರಿಸಲಾಗಿತ್ತು. ಅದರಲ್ಲೂ ಅನೇಕ ಬಿರಿದ, ಅರೆ ಬಿರಿದ ಕಮಲ ಪುಷ್ಪಗಳೂ ಅವುಗಳಿಗೆ ಅಪೂರ್ವ ಶೋಭೆಯನ್ನು ಉಂಟುಮಾಡುತ್ತಿದ್ದ ಹಂಸಗಳು ಸಜೀವವಾಗಿ ಎದ್ದು ಕಾಣುತ್ತಿತ್ತು. ನೆಲದ ಮೇಲೆ ಅಲ್ಲಲ್ಲಿ ಪುರುಷ ಪ್ರಮಾಣದ, ಸ್ತ್ರೀಪುರುಷರ ಪ್ರಣಯ ಭಂಗಿಗಳನ್ನು ನಿರೂಪಿಸುತ್ತಿದ್ದ ಹೊನ್ನಿನ ಪುತ್ಥಳಿಗಳು ಮಧ್ಯೆಮಧ್ಯೆ ಹಸ್ತಿದಂತದ ಶ್ರೀಗಂಧದ ಹಾಗೂ ಕರೀಮರದ, ಅನೇಕ ಪೀಠಗಳು. ಅವುಗಳ ಮೇಲೆ ನವರತ್ನಖಚಿತವಾದ ಪಾತ್ರೆಗಳಲ್ಲಿ ಆಗತಾನೇ ಅರಳಿದ ಸುವಾಸನೆಯುಳ್ಳ, ಅನೇಕ ಬಗೆಯ ಹೂಗಳು, ಕಸ್ತೂರಿ, ಚಂದನ, ಕೃಷ್ಣಗರು, ಪುನುಗು, ಮೊದಲಾದ ಸುಗಂಧ ದ್ರವ್ಯಗಳೂ, ದ್ರಾಕ್ಷಿ, ಸೇಬು, ದಾಳಿಂಬೆ, ಮಾದಳ, ಖರ್ಜೂರ, ಅಂಜೂರ, ಕಿತ್ತಳೆ, ಚಕ್ಕೋತ ಮೊದಲಾದ ಫಲಗಳೂ, ಅನೇಕ ಬಗೆಯ ಭಕ್ಷ್ಯ ಭೋಜ್ಯಗಳೂ ಪ್ರಣಯಿಗಳ ಆರೋಹಣೆಗೆ ಸಿದ್ಧವಾಗಿದ್ದವು.

ಶಯ್ಯಾಗಾರದ ನಡುವೆ ಎತ್ತರವಾದ ಹೊನ್ನಿನಮಂಚ. ಅದರ ಮೇಲೆ ಹಂಸತೂಲಿಕಾತಲ್ಪ. ಅದಕ್ಕೆ ರೇಶಿಮೆಯ ಮೇಲ್ಹಾಸು. ಅದರಮೇಲೆ ಮಲ್ಲಿಗೆ, ಗುಲಾಬಿ, ಸಂಪಿಗೆ, ಜಾಜಿ, ಸುರಭಿಪುಷ್ಪಗಳ ದಳಗಳು ಹರಡಿತ್ತು. ಅವು ತಮಗಿಂತಲೂ ಮೃದುವಾದ ಪ್ರಣಯಿಗಳ ಸುಖ ಸ್ಪರ್ಶಕ್ಕಾಗಿ ಹಾತೊರೆಯುತ್ತಿದ್ದವು. ಮಂಚವನ್ನು ಬಳಸಿದ್ದ ಹಾವಿನ

ಪರೆಯಂತಹ ಜಾಲರಿ, ಪ್ರಣಯಿಗಳ ಶೃಂಗಾರವನ್ನು ಹೊರಜಗತ್ತಿನಿಂದ ಮರೆಮಾಡಲು ಸಾಹಸಪಟ್ಟು ವಿಫಲವಾಗಿ ತಟಸ್ಥವಾಗಿ ನಿಂತಿತ್ತು. ಅದರ ತೆರೆಗಳು ಪ್ರಿಯ ಪ್ರೇಯಸಿಯರ ಕರಸ್ಪರ್ಶಕ್ಕಾಗಿ ಕಾದಿರುವಂತೆ ಕೊಂಚ ಸರಿದು ನಿಂತಿದ್ದವು. ಅವುಗಳ ಮೂಲಕ ಒಳಗೆ ಮಲಗಿದ್ದ ಕೃಷ್ಣದೇವ ರಾಯನ ರೂಪ ಅಸ್ಪಷ್ಟವಾಗಿ ಕಾಣುತ್ತಿತ್ತು.

ಜಗನ್ಮೋಹಿನಿ ಬೇಟೆಯಾಡಲು ಬಂದ ಬೆಕ್ಕಿನಂತೆ, ಮೆಲ್ಲನೆ ಹೆಜ್ಜೆ ಇಡುತ್ತಾ ಬಂದು, ಮಂಚದ ಮುಂಭಾದಲ್ಲಿ ನಿಂತುಕೊಂಡು, ಒಮ್ಮೆ ಸುತ್ತಲೂ ನೋಡಿದಳು. ಅಲ್ಲಿ ಯಾರೂ ಅಡಗಿ ಕುಳಿತಿಲ್ಲವೆಂಬುದನ್ನು ದೃಢ ಪಡಿಸಿಕೊಂಡು ಮತ್ತೆ ಒಂದೆರಡು ಹೆಜ್ಜೆ ಮುಂದುವರೆದು ಮಂಚದ ಸಮೀಪದಲ್ಲಿ ನಿಂತುಕೊಂಡಳು. ಮಂಚವನ್ನು ಬಳಸಿದ್ದ ತೆರೆಗಳ ಮೂಲಕ ಕೃಷ್ಣದೇವರಾಯನು ಗಾಢವಾದ ನಿದ್ರೆಯಲ್ಲಿ ಇರುವಂತೆ ಕಂಡಿತು. ಅವಳು ಮೆಲ್ಲನೆ ಕೆಮ್ಮಿದಳು. ಕೃಷ್ಣದೇವರಾಯನು ನಿದ್ರೆಯ ಮಂಪರದ ಲ್ಲಿರುವನೋ, ಅರೆನಿದ್ರೆಯಲ್ಲಿರುವನೋ ಎಂದು ತಿಳಿಯಲು, ಅವಳು ಒಂದೆರಡುಬಾರಿ ಕೆಮ್ಮಿದರೂ ರಾಯನಿಗೆ ಎಚ್ಚರವಾಗಲಿಲ್ಲ! ಇದನ್ನು ಕಂಡು ಕೃಷ್ಣದೇವರಾಯನಿಗೆ ದೀರ್ಘವಾದ ಗಾಢನಿದ್ರೆ ಬಂದಿದೆ ಎಂದು ಬಗೆದಳು. ಅವಳ ಮುಖ ಸಂತೋಷದಿಂದ ಅರಳಿತು. ರಾಯನು ತನಗಾಗಿ ಬಹಳ ಹೊತ್ತು ನಿರೀಕ್ಷಿಸಿ ಕಡೆಗೆ ಹಾಗೆಯೇ ಮಲಗಿ ನಿದ್ರೆಹೋಗಿರಬೇಕೆಂದು ಕೊಂಡಳು.

ಕೃಷ್ಣದೇವರಾಯನು ಮಲಗಿರುವ ರೀತಿಯನ್ನು ನೋಡಿ ಜಗ ನ್ಮೋಹಿನಿಯ ಹೃದಯಾಂತರಾಳದ ಒಂದು ಮೇಲುಧ್ವನಿ "ಅಯ್ಯೋ ಪಾಪ" ಎಂದಿತು.

"ಹಾಗೆಲ್ಲ ಮರುಕಪಟ್ಟರೆ, ನೀನು ನಿರ್ಧರಿಸುವ ಕಾರ್ಯ ನಡೆಯ ಲಿಕ್ಕಿಲ್ಲ!" ಎಂದು ಇನ್ನೊಂದು ಧ್ವನಿ ನಿಷ್ಠೂರವಾಗಿ ಹೇಳಿತು.

"ನನಗಾಗಿ ಇಷ್ಟೆಲ್ಲ ಸುಖಸಾಧನೆಗಳನ್ನು ಕಲ್ಪಿಸಿದ್ದಾನೆ. ನನ್ನ ಹೃದಯದಲ್ಲಿ ಅಡಗಿರುವ ದ್ವೇಷದ ದಾವಾಗ್ನಿಯನ್ನು ಲವಶೇಷವೂ ಶಂಕಿ ಸದೆ ಹಸಿಗೂಸಿನಂತೆ ನಿರ್ಭಯವಾಗಿ ಮಲಗಿರುವ ಅವನನ್ನು, ಧರ್ಮಸಾಕ್ಷಿ

ಯಾಗಿ ವಿವಾಹವಾದ ಪತಿಯನ್ನು ಕೊಲೆಮಾಡಲೆತ್ನಿಸುವುದು ಎಂತಹ ಘೋರ ಪಾಪವೆಂಬುದು ನಿನಗೆ ತಿಳಿದಿದೆಯೇ ?"

"ನನ್ನ ಈ ಕೃತ್ಯವು ಪಾಪವೋ ಪುಣ್ಯವೋ ಅದರ ಗೊಡವೆ ನನಗೇಕೆ ? ಸತ್ತಮೇಲಿನ ಚಿಂತೆ ಅದು. ನನಗೆ ಈಗ ಬೇಕಿರುವುದು ಸೇಡು ! ನನ್ನ ಪ್ರಾಣಪ್ರಿಯನನ್ನು ಕೊಂದ ನೀಚನಿವನು ! ನನ್ನ ಪರಮಪ್ರಿಯ ಸೋದರನನ್ನು ಆತ್ಮಹತ್ಯಮಾಡಿಕೊಳ್ಳಲು ಪ್ರೇರೇಪಿಸಿದ ಘಾತುಕನಿವನು! ಇವನನ್ನು ಕೊಂದು ಸ್ವರ್ಗದಲ್ಲಿರುವ ಅವರ ಆತ್ಮಗಳಿಗೆ ತೃಪ್ತಿಯನ್ನುಂಟು ಮಾಡುವುದೇ ನನ್ನ ಈಗಿನ ಪರಮ ಕರ್ತವ್ಯ ! ನನಗೆ ಪಾಪಪುಣ್ಯಗಳ ವಿಮರ್ಶೆ ಬೇಡ."

"ಹಾಗಾದರೆ ಕೃಷ್ಣದೇವರಾಯನ ಮೇಲೆ ಏನೇ ಆಗಲಿ ಸೇಡು ತೀರಿಸಿಕೊಳ್ಳಬೇಕೆಂಬುದು ನಿನ್ನ ಧೃಢನಿರ್ಧಾರವೋ ?»

"ಹೌದು !"

"ನಿನ್ನ ತಂದೆಯಿಂದ ಯುದ್ಧಮಾಡಿ ಜಯಿಸಿದ ಸಮಸ್ತ ಉತ್ಕಲವನ್ನು ಮರಳಿ ನಿನ್ನ ತಂದೆಗೇ ಹಿಂದಕ್ಕೆ ಒಪ್ಪಿಸಿಕೊಟ್ಟ ಉದಾತ್ತ ಚರಿತನಾದ ಕೃಷ್ಣದೇವರಾಯನನ್ನು ಕೊಲೆಮಾಡಲೆಳಸುವೆಯಾ? ನಿನ್ನನ್ನು ಕಮ್ಮಾರನಿಗೆ ಕೊಟ್ಟು ವಿವಾಹಮಾಡಲು ತೊಟ್ಟ, ಪ್ರತಿಜ್ಞೆಯನ್ನು ಸುಲಭವಾಗಿ ಈಡೇರಿಸಲು ಸಮರ್ಥನಿದ್ದರೂ, ನಿನ್ನಮೇಲಣ ಕರುಣೆಯಿಂದ ತಾನೇ ಕಮ್ಮಾರನ ವೇಷದಲ್ಲಿ ಬಂದು ನಿನ್ನನ್ನು ಉದ್ಧರಿಸಿದ ಅಪಾರ ಕರುಣಾಶಾಲಿಯನ್ನು ಕೊಲ್ಲಲೆಳಸುವೆಯಾ ?

"ಹೌದು !"

"ನೀನು ಕೃಷ್ಣದೇವರಾಯನಮೇಲೆ ಸೇಡು ತೀರಿಸಿಕೊಳ್ಳಲು ಹಾತೊರೆಯುತ್ತಿರುವೆ. ನಿನ್ನ ಈ ಸೇಡು ಅರ್ಥರಹಿತವಾದ ಮಾತು ! ನಿನ್ನ ಪ್ರಿಯತಮ ನರಹರಿಪಾತ್ರನನ್ನು ಕೊಲೆಮಾಡಿದವನು ಕೃಷ್ಣದೇವರಾಯನಲ್ಲ ಗೋವಿಂದರಾಜ. ನಿನ್ನ ಸೋದರ ವೀರಭದ್ರದೇವನನ್ನು ಕೊಂದವನು ಕೃಷ್ಣದೇವರಾಯನಲ್ಲ, ವೀರಭದ್ರದೇವನೇ ತನ್ನನ್ನುಕೊಂದುಕೊಂಡ. ಇದನ್ನು ನೀನೂ ಬಲ್ಲೆ! ಆದರೂ ರಾಯನ ಮೇಲೆ ವೃಥಾ ದ್ವೇಷ ಸಾಧಿಸುತ್ತಿದ್ದೀಯೆ. ಯಾರಮೇಲಿನ ಸಿಟ್ಟನ್ನು ಯಾರಮೇಲೆ ತೀರಿಸಿಕೊಳ್ಳು

ತ್ತಿರುವೆ? ಬೇರೆಯವರು ಮಾಡಿದ ಅಪರಾಧಕ್ಕೆ ಕೃಷ್ಣದೇವರಾಯನನ್ನು ಶಿಕ್ಷಿಸುವುದು ಯಾವ ನ್ಯಾಯ? ಕೃಷ್ಣದೇವರಾಯನು ನಿನಗೆ ಯಾವ ಅನ್ಯಾಯ ಮಾಡಿದ್ದಾನೆ!"

"ಕೃಷ್ಣದೇವರಾಯನು ನನ್ನ ಪ್ರಿಯಕರನನ್ನು ಪ್ರತ್ಯಕ್ಷವಾಗಿ ಕೊಲ್ಲದಿದ್ದರೂ ಅವನ ಸೇಡಿಗೆ ಪರೋಕ್ಷವಾಗಿ ಕಾರಣನಾಗಿದ್ದಾನೆ! ಕೃಷ್ಣದೇವರಾಯ ದುಷ್ಟ. ರಾಜ್ಯತೃಷ್ಣೆಗೆ ಬಲಿಯಾದ ಹುತಾತ್ಮರು ಅವರಿಬ್ಬರೇ ಅಲ್ಲ. ಅನೇಕಸಹಸ್ರ ಉತ್ಕಲದ ವೀರಪುತ್ರರು ಬಲಿಯಾಗಿದ್ದಾರೆ! ಸ್ನೇಹದಿಂದಿದ್ದ ಉತ್ಕಲದ ಮೇಲೆ ರಾಯನೇಕೆ ದಂಡೆತ್ತಿ ಬರಬೇಕಿತ್ತು? ಉತ್ಕಲ ಅವನಿಗೆ ಯಾವ ಅನ್ಯಾಯಮಾಡಿತ್ತು? ಅವನಿಗಿದ್ದ ಸಾಮ್ರಾಜ್ಯದಾಹ ಅವನನ್ನು ದಂಡೆತ್ತಿ ಬರುವಂತೆ ಮಾಡಿತು. ಉತ್ಕಲ ಅವನಿಗೆ ಗಾಬರಿಯಾಯಿತು. ಎಷ್ಟೊಂದು ಜನ ನಿರಪರಾಧಿಗಳ ಕೊಲೆಯಾಯಿತು? ಎಷ್ಟೊಂದು ಜನರ ಮನೆ ಮಠಗಳು ಈ ಯುದ್ಧದಿಂದ ಹಾಳಾದವು? ಇದಕ್ಕೆಲ್ಲ ಕಾರಣನಾದ ಕೃಷ್ಣದೇವರಾಯನನ್ನು ನಾನು ಕೊಲ್ಲಲೇಬೇಕು!"

"ಯುದ್ಧವೆಂದರೆ ಮಕ್ಕಳಾಟಿಕೆಯಲ್ಲ. ಇದಕ್ಕು ನೂರ್ಮಡಿಯ ಹಿಂಸೆ, ಕ್ರೌರ್ಯ, ಶೋಷಣೆ ಬಲಿದಾನಗಳು ಕಷ್ಟನಷ್ಟಗಳೂ ಅನಿವಾರ್ಯ. ಈ ಯುದ್ಧಕ್ಕೆ ಕೃಷ್ಣದೇವರಾಯನು ಕಾರಣನೆ? ನೀನು ಆಲೋಚಿಸಿ ಹಿಂದೆ ಉತ್ಕಲದ ಗಜಪತಿಗಳು ವಿಜಯನಗರದ ಅರಸರಿಗೆ ಕೊಟ್ಟ ಕಿರುಕುಳಗಳು ಕಡಿಮೆಯೇ? ಅವರು ಮಾಡಿದ ಯುದ್ಧ ನಡೆಸಿದ ಧಾಳಿಗಳು ಕಡಮೆಯೆ? ಅವರು ಮಾಡಿದ ಹಾನಿ ಅಲ್ಪವೆ? ಯುದ್ಧ ಕ್ಷತ್ರಿಯನ ಹುಟ್ಟುಗುಣ. ಸಾಮ್ರಾಜ್ಯ ತೃಷ್ಣೆ ಯಾರಿಗೆ ಇಲ್ಲ? ಗಜಪತಿಗೆ ಇಲ್ಲವೆ? ಹಾಗಿದ್ದರೆ ಹಿಂದಿನ ಗಜಪತಿಗಳು ವಿಜಯನಗರದ ಮೇಲೇಕೆ ದಂಡೆತ್ತಿ ಹೋಗುತ್ತಿದ್ದರು? ಸಾಮ್ರಾಜ್ಯದ ಸುಭದ್ರತೆಗಾಗಿ, ಶತ್ರು ಮರ್ದನಕ್ಕಾಗಿ ಯುದ್ಧ ಮಾಡುವುದು ಯಾರೂ ತಪ್ಪೆಂದು ತಿಳಿಯುವುದಿಲ್ಲ. ಕೃಷ್ಣದೇವರಾಯನು ತಾನಾಗಿ ಯುದ್ಧಕ್ಕೆ ಕಾಲುಕೆರೆದು ಬರಲಿಲ್ಲ. ಮೊದಲ ಸ್ನೇಹವನ್ನೇ ಬಯಸಿ, ಸಂಧಿಗೆ ದೂತರನ್ನು ಅಟ್ಟಿದ್ದ. ಆದರೆ ಗಜಪತಿಗೆ ಸಂಧಿಗಿಂತಲೂ ಯುದ್ಧವೇ ಪ್ರಿಯವಾಯಿತು. ಅಂತಲೇ ಯುದ್ಧ ಅನಿವಾರ್ಯವಾಯಿತು. ಅಂದು ಗಜಪತಿ ಕೊಂಚ ವಿವೇಕದಿಂದ ವರ್ತಿಸಿ

ದ್ದರೆ ಈ ಯುದ್ಧವನ್ನು ತಪ್ಪಿಸಬಹುದಿತ್ತು. ಆದರೆ ಕುಲಮದದಿಂದ ಗಜಪತಿಯು ಕೃಷ್ಣದೇವರಾಯನ ಸ್ನೇಹ ಹಸ್ತವನ್ನು ತಿರಸ್ಕರಿಸಿದನು. ಅದರ ಪರಿಣಾಮ ಇದೆಲ್ಲ. ಇದಕ್ಕೆಲ್ಲ ಕಾರಣನಾದ ಗಜಪತಿಯು ಇಂದು ಪಶ್ಚಾತ್ತಾಪಪಡುತ್ತಿದ್ದಾನೆ. ಅಂತೆಯೇ ನೀನು ಇಂದು ದುಡುಕಿ, ನಾಳೆ ಪಶ್ಚಾತ್ತಾಪ ಪಡಬೇಕಾದ ಪ್ರಸಂಗ ಬರಬಹುದು. ಆದುದರಿಂದ ಚನ್ನಾಗಿ ಆಲೋಚಿಸಿ, ಕಾರ್ಯೋನ್ಮುಖಳಾಗು "

" ನಾನು ಚನ್ನಾಗಿ ಅಲೋಚಿಸಿಯೇ ಈ ಕಾರ್ಯಕ್ಕೆ ನಿರ್ಧರಿಸಿರುವುದು. ನನ್ನ ಈ ಕೃತ್ಯವನ್ನು ನಾನು ಎಂದಿಗೂ ದುಡುಕು, ಅವಿವೇಕ, ಅಕೃತ್ಯವೆಂದು ತಿಳಿದಿಲ್ಲ. ಹೀಗಾಗಿ ನಾನು ಪಶ್ಚಾತ್ತಾಪ ಪಡಬೇಕಾದ ಸಂದರ್ಭವೊದಗುವುದಿಲ್ಲ. "

"ನೀನು ಮತಿಗೆಟ್ಟು ಮಾಡುತ್ತಿರುವ ಈ ಕಾರ್ಯದ ಅನರ್ಥ ಪರಿಣಾಮವೇನಾಗಬಹುದೆಂಬುದನ್ನು ಎಂದಾದರೂ ವಿಚಾರಮಾಡಿದ್ದೀಯಾ ?"

"ನಾನು ಚನ್ನಾಗಿ ಮಾಡಿದ್ದೇನೆ ! ಯಾವ ದಿನ ಕೃಷ್ಣದೇವರಾಯನ ಸೈನಿಕರಿಂದ ನರಹರಿಪಾತ್ರನು ತೀರಿಕೊಂಡನೋ, ಅಂದೇ ನನ್ನ ಸಕಲ ಸೌಭಾಗ್ಯವೂ ಹೋಯಿತೆಂದು ತಿಳಿದಿದ್ದೇನೆ. ನನಗೆ ಇನ್ನು ಯಾವ ಸುಖವಿದೆ ಎಂದು ಬದುಕಬೇಕು ? ನನಗೆ ಬದುಕುವುದು ಬೇಕಿಲ್ಲ. ಬಾಳು— ನನಗೆ ಸೆರೆಯಾಗಿದೆ, ಸಾವೇ ನನಗೆ ಸುಖವಾಗಿದೆ. ನನ್ನ ಈ ಸೆರೆಯಿಂದ ತಪ್ಪಿಸಿಕೊಂಡು ಸ್ವರ್ಗದಲ್ಲಿ ನನಗಾಗಿ ಕಾದಿರುವ ಪ್ರಿಯತಮನನ್ನು ಆದಷ್ಟು ಬೇಗ ಸೇರಿಸಿಕೊಳ್ಳಬೇಕೆಂದಿದ್ದೇನೆ. ನಾನು ಬದುಕಿರುವುದು ಇದೊಂದು ಕಾರ್ಯವನ್ನು ಸಾಧಿಸಲು. ಇದು ನೆರವೇರಿದರೆ ನನ್ನ ಜೀವಿತದ ಪರಮೋದ್ದೇಶ ಸಫಲಗೊಂಡಂತೆ. ನನಗೆ ಈ ಕ್ರೂರ ಜಗತ್ತಿನಲ್ಲಿ ಬಾಳುವುದು ಬೇಸರವಾಗಿದೆ. ನರಹರಿಪಾತ್ರನಿಲ್ಲದ ಈ ಜಗತ್ತು ಶೂನ್ಯವಾಗಿದೆ. ನಾನು ಆದಷ್ಟು ಬೇಗ ನರಹರಿಯನ್ನು ಸೇರಿಕೊಳ್ಳಬೇಕೆಂದಿದ್ದೇನೆ— ಅದಕ್ಕೆ ಮೊದಲ ಸೋಪಾನ ಈ ಕೊಲೆ !"

"ನೀನೇನೋ ಪ್ರಾಣದ ಮೇಲಿನ ಆಸೆಯನ್ನು ಬಿಟ್ಟು ಈ ಅಕೃತ್ಯವನ್ನು ಎಸೆಗುತ್ತಿದ್ದೀಯೆ ? ಅಕಸ್ಮಾತ್ ಈ ಕಾರ್ಯದಲ್ಲಿ ನೀನು ಕೃತಕೃತ್ಯಳಾಗದೆ ಇದ್ದರೆ ನಿನ್ನ ಗತಿ ಏನು ? ಕೃಷ್ಣದೇವರಾಯನು ನಿನ್ನನ್ನು ಸುಮ್ಮನೆ

ಬಿಡುವನೆ? ನಿನ್ನಂತಹ ಕುಲುಟೆಯನ್ನು, ಘಾತಕಿಯನ್ನು ಚಿತ್ರಹಿಂಸೆ ಕೊಟ್ಟು ಕೊಲ್ಲಿಸದೇ ಬಿಡುವನೆ?"

"ರಾಯನು ಕೊಲೆಯಾಗದೇ ಬದುಕಿದರೆ ತಾನೇ ಆ ಮಾತು? ಈಗ ರಾಯನ ಜೀವ ನನ್ನ ಕೈಯ್ಯಲ್ಲಿದೆ. ನಾನು ಮನಸ್ಸುಮಾಡಿದರೆ ಕೊಲ್ಲಬಹುದು, ಇಲ್ಲದಿದ್ದರೆ ಬಿಡಬಹುದು ನೋಡು! ನಿದ್ರೆಯ ಅಮಲಿನಲ್ಲಿ ಮೈಮರೆತು ಮಲಗಿರುವ ರಾಯನನ್ನು ಈ ಕಠಾರಿಯಿಂದ ಯಾರು ರಕ್ಷಿಸಬಲ್ಲರು?" ಎಂದು ಉಡಿಯಲ್ಲಿ ಬಚ್ಚಿಟ್ಟಿದ್ದ ಕಠಾರಿಯನ್ನು ಹೊರತೆಗೆದು ಕೈಗೆ ತೆಗೆದುಕೊಂಡಳು.

"ಹಾಗಾದರೆ ರಾಯನನ್ನು ಕೊಲ್ಲುವುದೇ ನಿಶ್ಚಯವೋ?"

"ನಿಶ್ಚಯ! ನಿಶ್ಚಯ!! ನಿಶ್ಚಯ!!!"

ಈ ಮಾತು ಕೇಳಿ ಇನ್ನೊಂದು ಧ್ವನಿ ಮೆಲ್ಲನೆ ನಕ್ಕಿತು.

"ಏಕೆ ನಗುವೆ? ನನ್ನ ಮಾತು ನಿಜವೋ ಸುಳ್ಳೊ ನೀನೇ ನೋಡುತ್ತಿರು" ಎಂದು ಹೇಳಿ ಕೈಯ್ಯಲ್ಲಿದ್ದ ಕಠಾರಿಯನ್ನೊಮ್ಮೆ ತುಟಿಯ ಬಳಿಗೆ ತೆಗೆದುಕೊಂಡು ಚುಂಬಿಸಿ "ಇದು ನಿನ್ನ ನನ್ನ ಪ್ರಥಮ ರಾತ್ರಿ, ಹಾಗೆಯೇ ಕಡೆಯರಾತ್ರಿಯೂ ಹೌದು" ಎಂದು ಹೇಳುತ್ತಾ ತನ್ನ ಬಲವನ್ನೆಲ್ಲಾ ಬಿಟ್ಟು ಬೆನ್ನಿಗೆ ಗುರಿಯಿಟ್ಟು ತಿವಿದಳು.

ಕೃಷ್ಣದೇವರಾಯನು ಅದೆಂತಹ ಭಯಂಕರವಾದ ನಿದ್ದೆಯಲ್ಲಿದ್ದನೋ ಈ ಪೆಟ್ಟಿಗೆ ಮಿಸುಕಾಡಲಿಲ್ಲ, ಎಚ್ಚರಗೊಳ್ಳಲಿಲ್ಲ.

ಆದರೂ ಆ ತಿವಿತದ ಏಟಿಗೆ ದೇಹದಲ್ಲಿ ದೊಡ್ಡ ಗಾಯ ಉಂಟಾಗಿ ರಕ್ತ ಬುಳಬುಳನೆ ಚಿಮ್ಮಿತು. ಕೆನ್ನೀರಿನಲ್ಲಿ ತೊಯ್ದ ದೇಹದಿಂದ ಕಠಾರಿಯನ್ನು ಕಿತ್ತು ಮತ್ತೊಮ್ಮೆ ರಾಯನನ್ನು ತಿವಿದಳು. ಈ ತಿವಿತಕ್ಕೂ ರಾಯನು ಎಚ್ಚರಗೊಳಲಿಲ್ಲ. ತಿವಿತದಿಂದ ಉಂಟಾದ ನೋವಿಗೆ ಬೊಬ್ಬೆಯಿಡಲಿಲ್ಲ. ಅವನು ಮೊದಲು ಹೇಗೆ ಮಲಗಿದ್ದನೋ ಈಗಲೂ ಹಾಗೆಯೇ ಮಲಗಿದ್ದನು.

ಜಗನ್ಮೋಹಿನಿಗೆ ಗಾಬರಿಯಾಯಿತು.

ತನ್ನ ತಿವಿತದಿಂದ ಕೆನ್ನೀರಿನ ಕೋಡಿಯೇ ಹರಿಯುತ್ತಿದ್ದರೂ ರಾಯನು ಮಾತ್ರ ಸದ್ದಿಲ್ಲದೇ ನಿದ್ರೆ ಮಾಡುತ್ತಿರುವುದನ್ನು ನೋಡಿ ಅಚ್ಚರಿಯುಂಟಾಯಿತು. ಅವಳಿಗೆ ರಾಯನು ತನ್ನ ತಿವಿತದಿಂದ ಸತ್ತಿರುವನೋ ಬದುಕಿರು

ವನೋ ತಿಳಿಯದೆ ಹೋಯಿತು. ಅವಳು ನಡುಗುತ್ತಿದ್ದ ಕೈಗಳಲ್ಲಿ ಕೃಷ್ಣ ದೇವರಾಯನ ಮೇಲುಹೊದಿಕೆಯನ್ನು ತೆಗೆದು ದೂರಬಿಸುಟೆದಳು. ಈ ರಭಸಕ್ಕೆ ರಕ್ತ ಸಿಕ್ತವಾದ ಬಟ್ಟೆಗೆ ಅಂಟಿದ್ದ ರಕ್ತದ ಒಂದು ಹನಿ ಅವಳ ತುಟಿಯಮೇಲೆ ಬಿದ್ದಿತು. ಇದೇನಾಶ್ಚರ್ಯ! ಕೃಷ್ಣದೇವರಾಯನ ರಕ್ತ ಸಿಹಿಯಾಗಿದೆ! ರಕ್ತ ಸಪ್ಪಗಿರುವುದೆಂದು ಅವಳು ಕೇಳಿದ್ದಳು. ಆದರೆ, ರಾಯನ ಈ ರಕ್ತ ಮಾತ್ರ ಸಿಹಿಯಾಗಿತ್ತು—ಜೇನುತುಪ್ಪದಷ್ಟು ಮಧುರ ವಾಗಿತ್ತು! ಅವಳು ರಕ್ತ ಪಿಪಾಸುವಂತೆ ಮತ್ತಷ್ಟು ರಕ್ತವನ್ನು ಕುಡಿದಳು. ಹೌದು! ಈ ರಕ್ತ ಸಿಹಿಯಾಗಿತ್ತು. ಅಮೃತದಷ್ಟು ಸವಿಯಾಗಿತ್ತು. ಪಾಪ! ರಕ್ತವೆಂದು ಭ್ರಮಿಸಿದ ಜಗನ್ಮೋಹಿನಿಗೆ, ಆ ದ್ರವ ರಕ್ತದಂತೆಯೇ ಕಾಣುತ್ತಿದ್ದ ಜೇನುತುಪ್ಪವೆಂದು ಹೇಗೆ ತಿಳಿಯಬೇಕು? ತನ್ನನ್ನು ಮೋಸ ಗೊಳಿಸಲೆಂದೇ ಯೋಚಿಸಿ—ನಿರ್ಧರಿಸಿ—ಮೇಣದಾಕೃತಿಯ ಒಳಪ್ರದೇಶ ದಲ್ಲೂ ಚಾಣಾಕ್ಷನಾದ ತಿಮ್ಮರಸನು ಜೇನುತುಪ್ಪವನ್ನು ತುಂಬಿಸಿರುವನೆಂದು ಹೇಗೆ ತಿಳಿಯಬೇಕು?!"

ಮೋಸದ ಛಾಯೆ ಮನದಲ್ಲಿ ಮೂಡಿ ನಕ್ಕಿತು! ಇದರಲ್ಲೂ ಏನೋ ಮೋಸವಿದೆಯೆಂದು ಅನಿಸಿತು. ಅವಳು ರಾಯನ ಮುಖವನ್ನು ನೋಡುವ ಸಲುವಾಗಿ, ತನ್ನ ಕೈಯಿಂದ ಮುಖವನ್ನು ಇತ್ತ ತಿರುಗಿಸಿದಳು! ಅವಳ ಕೈಗೆ ಕೃಷ್ಣದೇವರಾಯನ ರುಂಡವೇ ಕಿತ್ತು ಬಂತು! ಅವಳು ಗಾಬರಿ ಗೊಂಡು ಆ ರುಂಡವನ್ನು ಹತ್ತಿರ ತೆಗೆದುಕೊಂಡು ನೋಡಿದಳು. ಅದು ಕೃಷ್ಣದೇವರಾಯನ ಆಕೃತಿಯಂತೆ ಮೇಣದಲ್ಲಿ ಮಾಡಿದ ರುಂಡ ಎಂದು ತಿಳಿಯಲು ಹೆಚ್ಚುಕಾಲ ಬೇಕಾಗಲಿಲ್ಲ! ತನ್ನನ್ನು ಮೋಸಗೊಳಿಸಲು ಯಾರೋ ಮಾಡಿದ ತಂತ್ರವಿದು.

ಅವಳ ದೇಹಾದ್ಯಂತ ಚಳಿ ಬಂದಂತಾಗಿ ನಡುಕವುಂಟಾಯಿತು. ಅವಳ ಮುಖ ವಿವರ್ಣವಾಯಿತು. ಅವಳ ಕಣ್ಣಿಗೆ ಕತ್ತಲೆ ಕವಿಯಿತು. ನೆಲ ಕುಸಿದಂತೆ ಭಾಸವಾಯಿತು. ಅವಳು ನಿಂತಲ್ಲಿ ಕುಸಿದುಬಿದ್ದಳು.

ಅವಳನ್ನು ನೆಲಕ್ಕೆ ಕುಸಿದು ಬೀಳದಂತೆ ಯಾರೋ ಎತ್ತಿ ಹಿಡಿದಂತೆ ಆಯಿತು. ಅವಳು ಕಣ್ಣುಬಿಟ್ಟು ನೋಡುತ್ತಾಳೆ—ಎದುರಿಗೆ ಕೃಷ್ಣದೇವ ರಾಯ ಮತ್ತು ತಿಮ್ಮರಸ. ನಗುತ್ತ ನಿಂತಿದ್ದಾರೆ!

ಅವರಿಬ್ಬರೂ ಇದುವರೆಗೆ ನಡೆದಿದ್ದ ಎಲ್ಲ ನಾಟಕವನ್ನು ಮರೆಯಾಗಿದ್ದುಕೊಂಡು ನೋಡಿದ್ದರು.

ಜಗನ್ಮೋಹಿನಿ ಅವರನ್ನು ನೋಡಿದುದೇ ತಡ. ತನ್ನ ಸಂಚೆಲ್ಲವೂ ಬಯಲಾಯಿತೆಂದು ಅರಿತಳು. ಅಷ್ಟೇ ಅಲ್ಲ ತನ್ನನ್ನು ಅವರು ಈ ದುಷ್ಕೃತ್ಯದಲ್ಲಿ ತೊಡಗಿರುವಾಗಲೇ ಹಿಡಿದಿದ್ದರು! ಇನ್ನು ತನಗೆ ಅವರ ಕೈಯಿಂದ ಮುಕ್ತಿಯಿಲ್ಲವೆಂದುಕೊಂಡಳು. ಅವಳಿಗೆ ಅದೇನನಿಸಿತೋ ಕೂಡಲೇ ಎದ್ದುನಿಂತು, ಮಂಚದ ಮೇಲೆ ಬಿಟ್ಟಿದ್ದ ಖಡ್ಗವನ್ನುಕೈಗೆ ತೆಗೆದುಕೊಂಡು ಇನ್ನೇನು ಎದೆಗೆ ತಿವಿದುಕೊಂಡು ಆತ್ಮಹತ್ಯಮಾಡಿಕೊಳ್ಳಬೇಕೆನ್ನುವುದರಲ್ಲಿ ಕೃಷ್ಣದೇವರಾಯನು ಅವಳ ಮೇಲೆ ಬಿದ್ದು, ಅವಳ ಕೈಯಲ್ಲಿದ್ದ ಖಡ್ಗವನ್ನು ಕಿತ್ತುಕೊಂಡನು.

ತನ್ನ ಕಡೆಯ ಈ ಉದ್ದಿಶ್ಯವೂ ನೆರವೇರದೇ ಹೋದುದಕ್ಕಾಗಿ ಜಗನ್ಮೋಹಿನಿಗೆ ತುಂಬಾ ವ್ಯಥೆಯಾಯಿತು. ಅವಳು ಮಗುವಿನಂತೆ ನೆಲದ ಮೇಲೆ ಹೊರಳಿ ಗೋಳೋ ಎಂದು ಅತ್ತಳು. ಹೆಣ್ತನದ ಸೋಲಿನ ಅರಿವು ಅವಳಿಗೆ ಪ್ರಥಮ ಬಾರಿಗೆ ಅನುಭವವಾಗಿತ್ತು! ಅದೂ ಎಂತಹ ಸೋಲು?

ನೆಲದಮೇಲೆ ಶೋಕವೇ ಮೂರ್ತಿವೆತ್ತಂತೆ ಮಲಗಿದ್ದ ಜಗನ್ಮೋಹಿನಿಯನ್ನು ಯಾರೂ ಸಮಾಧಾನಪಡಿಸಲು ಹೋಗಲಿಲ್ಲ. ಅತ್ತೂ ಅತ್ತೂ ಅವಳ ಹೃದಯದ ಕಲ್ಮಷವೆಲ್ಲಾ ಕಣ್ಣೀರಿನ ರೂಪದಲ್ಲಿ ಹೊರಟು ಹೋಗಲಿ ಎಂಬಂತೆ ಅವರಿಬ್ಬರೂ ಸುಮ್ಮನೆ ನಿಂತಿದ್ದರು.

ಕಡೆಗೆ ಜಗನ್ಮೋಹಿನಿಯ ದುಃಖ ಕೊಂಚ ಶಮನವಾದಮೇಲೆ ತಿಮ್ಮರಸನು ಮೇಲುದನಿಯಲ್ಲಿ ಸಮಾಧಾನಪಡಿಸಲೆಂಬಂತೆ, ಹೇಳಿದ. "ಗಜಪತಿನಂದಿನಿ, ಮಹಾಪ್ರಭುಗಳಮೇಲೆ ನಿಮಗಿದ್ದ ಸೇಡು ಕಣ್ಣೀರಿನ ರೂಪದಲ್ಲಿ ತೀರಿಹೋಗಿರಬೇಕಲ್ಲವೆ? ಇನ್ನಾದರೂ ಸಮಾಧಾನ ತಾಳಿ!"

"ಈ ಜನ್ಮದಲ್ಲಿ ನನಗೆ ಸಮಾಧಾನವಿಲ್ಲ ಅಮಾತ್ಯರೇ"

"ಏಕೆ?"

"ನನ್ನ ಸೇಡು ಇನ್ನೂ ತೀರದೇ ಹೋಗಿದೆ!"

"ಹಾಗಾದರೆ ಮಹಾಪ್ರಭುಗಳಮೇಲೆ ನಿಮಗೆ ಇನ್ನು ಮೊದಲಿನ ದ್ವೇಷ ಇದೆ!"

"ಹೌದು! ಈ ದ್ವೇಷ ನಾನು ಸುಟ್ಟು ಬೂದಿಯಾಗುವತನಕ ಹೋಗುವುದಿಲ್ಲ!"

"ಏಕೆ?"

"ನಿಮ್ಮ ಮಹಾಪ್ರಭುಗಳನ್ನು ನನ್ನ ಕಠಾರಿಗೆ ಬಲಿಗೊಟ್ಟು ಆ ಮೂಲಕ ನನ್ನ ಸೇಡನ್ನು ತೀರಿಸಿಕೊಳ್ಳಬೇಕೆಂದಿದ್ದೆ. ಆದರೆ ನನ್ನ ಈ ಸಂಚನ್ನು, ದುರಾಲೋಚನೆಯನ್ನು ಅದು ಹೇಗೆ ಪತ್ತೆಮಾಡಿದಿರೋ ಅಂತೂ ನಿಮ್ಮ ಮಹಾಪ್ರಭುಗಳನ್ನು ಉಳಿಸಿಕೊಂಡಿರಿ! ನನ್ನ ಮನೋರಥ ಈಡೇರದ ಮೇಲೆ ನಾನು ಬದುಕಿ ಪ್ರಯೋಜನವಿಲ್ಲ! ನನ್ನಂಥ ಪಾಪಿ ಬದುಕಿರಬಾರದು" ಎಂದು ಎದೆ ಬಿರಿಯುವಂತೆ ಅತ್ತಳು.

"ಗಜಪತಿನಂದಿನಿ, ಸಂತೈಸಿಕೊಳ್ಳಬೇಕು, ಸಂತೈಸಿಕೊಳ್ಳಬೇಕು, ತಮ್ಮನ್ನು ಹಾಗೆಲ್ಲ ದೂಷಿಸಿಕೊಳ್ಳಬಾರದು."

"ಏನು? ನನ್ನ ಮೇಲೆ ಇನ್ನೂ ಕರುಣೆಯೆ? ನಿಮ್ಮ ಪ್ರಭುವನ್ನು ಕೊಲ್ಲಲೆತ್ನಿಸಿದ ಈ ಪಾಪಿಯಮೇಲೆ ಇನ್ನೂ ಕರುಣೆಯೆ?"

"ಮಹಾಪ್ರಭುಗಳು ದಯಾಮಯರು! ಅವರಿಗೆ ಅಕಾರಣವಾಗಿ ಯಾರೂ ಸಾಯುವುದು ಬೇಕಿಲ್ಲ!"

"ಹಾಗಾದರೆ ನಾನು ಸಾಯುವುದು ಅವರಿಗೇ ಇಷ್ಟವಿಲ್ಲವೆ?"

"ಖಂಡಿತವಾಗಿಯೂ ಇಲ್ಲ, ನೀವು ತಿಳಿಯದೆ, ದುಡುಕಿನಿಂದ ಮಾಡಿರಬಹುದಾದ ಈ ಅಕೃತ್ಯಕ್ಕಾಗಿ ಶುದ್ಧಾಂತಃಕರಣದಿಂದ ಪಶ್ಚಾತ್ತಾಪಪಟ್ಟರೆ ನಿಮ್ಮನ್ನು ಮಹಾಪ್ರಭುಗಳು ಈಗಲೂ ಕ್ಷಮಿಸುತ್ತಾರೆ! ನೀವು ಪಶ್ಚಾತ್ತಾಪದ ಮೂಸೆಯಲ್ಲಿ ಬೆಂದು ಪುನರ್ಜನ್ಮ ಪಡೆದು ಸುಖವಾಗಿರಬೇಕೆಂದೇ ನಮ್ಮೆಲ್ಲರ ಆಶಯ!"

"ನನಗೆ ನನ್ನ ಈ ಕೆಲಸಕ್ಕಾಗಿ ಪಶ್ಚಾತ್ತಾಪಪಡುವುದು ಬೇಕಿಲ್ಲ."

"ಏಕೆ?"

"ನನಗೆ ಪುನರ್ಜನ್ಮ ಪಡೆದು ಬದುಕಲು ಇಚ್ಛೆಯಿಲ್ಲ."

"ಏಕೆ?"

"ನನಗೆ ಬಾಳ್ವೆ ಬೇಸರವಾಗಿದೆ, ಸಾವು ಹಿತವಾಗಿದೆ!"

"ನೀವೇಕೆ ಹಾಗೆ ತಿಳಿಯಬೇಕು?"

"ನನ್ನ ಸೇಡು ಸಫಲವಾಗದೆ ಇದ್ದಮೇಲೆ ನಾನು ಬದುಕಿ ಪ್ರಯೋಜನವಿಲ್ಲ."

"ನಿಮಗೆ ಇನ್ನೂ ಸೇಡಿನ ಭ್ರಮೆಯೇ ?" ಎಂದು ಹೇಳಿ ತೀಕ್ಷ್ಣವಾಗಿ ಗಜಪತಿನಂದಿನಿಯನ್ನು ನೋಡಿ ಮತ್ತೆ ಹೇಳಿದನು.

"ಗಜಪತಿಪುತ್ರಿ, ನಿಮ್ಮನ್ನು ಮಹಾಸ್ವಾಮಿಯವರ ಮೇಲೆ ಕೈ ಮಾಡಲು ಅದಾರು ಪ್ರೇರೇಪಿಸಿದರೋ, ನಿಮಗೆ ಈ ದುರ್ಬುದ್ಧಿ ಅದು ಹೇಗೆ ಉಂಟಾಯಿತೋ ನನಗೆ ತಿಳಿಯದು. ಅಂತೂ ಈ ಹೇಯಕೃತ್ಯಕ್ಕೆಳಿಸಿ, ನೀವು ನಿಮ್ಮ ಪವಿತ್ರವಾದ ಚಂದ್ರವಂಶಕ್ಕೆ ಕಳಂಕವನ್ನುಂಟುಮಾಡುತ್ತಿದ್ದಿರಿ. ಜಗದೀಶ್ವರನೇ ತಪ್ಪಿಸಿದ. ಮಹಾಪ್ರಭುಗಳು ಗಂಡಾಂತರದಿಂದ ಪಾರಾದರು. ಇನ್ನಾದರೂ ನೀವು ಸೇಡಿನ ಕೈಗೆ ಬುದ್ಧಿಕೊಡದೆ, ವಿವೇಕಿಯಾಗಿ ವರ್ತಿಸಿ. ನಿಮ್ಮ ಈ ಕೃತ್ಯದ ಬಗ್ಗೆ ನೀವೇ ಸಮಾಧಾನಚಿತ್ತದಿಂದ ಆಲೋಚಿಸಿ, ನಿಮ್ಮ ಕೃತ್ಯದ ಭೀಕರಸ್ವರೂಪ ನಿಮಗೆ ಅರಿವಾಗುತ್ತದೆ. ಈ ಕೃತ್ಯವನ್ನು ನೀವು ಮೆಚ್ಚುವುದಾದರೆ........ನೀವಲ್ಲದೆ ಇದನ್ನು ಬೇರೆಯಾರೂ ಮೆಚ್ಚಲಾರರು, ಸ್ವಯಂ ನಿಮ್ಮ ತಾಯಿತಂದೆಗಳೇ ಈ ನಿಮ್ಮ ಕೃತ್ಯಕ್ಕೆ ಸಮ್ಮತಿಯನ್ನು ಇತ್ತಿಲ್ಲವೆಂದ ಮೇಲೆ ಉಳಿದವರ ಮಾತುಬೇಡ. ಇಂತಹ ಹೇಯವಾದ, ಅನುಚಿತ ಕಾರ್ಯಕ್ಕೆಳಿಸಿ ನೀವೇಕೆ ನಿಮ್ಮ ಸುಕುಮಾರ ಬಾಳ್ವಿಗೆ ಕೊಡಲಿ ಪೆಟ್ಟು ಹಾಕಿಕೊಳ್ಳುತ್ತಿದ್ದಿರೋ ನಾ ಕಾಣೆ. ಇದರಿಂದ ನಿಮಗೆ ಬರುತ್ತಿದ್ದ ಪುರುಷಾರ್ಥವೇನೋ ನಾನರಿಯೆ, ಅಂತೂ ಆಚಂದ್ರಾರ್ಕಪರ್ಯಂತ ಕೆಟ್ಟ ಹೆಸರಿಗೆ ನೀವು ಪಾತ್ರರಾಗುತ್ತಿದ್ದಿರಿ. ದಯಾಮಯನಾದ ಭಗವಂತನೇ ನಿಮ್ಮನ್ನು ಪಾರುಮಾಡಿದ....

"ನಿಮಗೆ ಮಹಾಪ್ರಭುಗಳ ಬಗ್ಗೆ ಹೆಚ್ಚುತಿಳಿದಿರಲಾರದು. ಅವರಂತಹ ದೇವತಾಪುರುಷರು, ದಿವ್ಯಾತ್ಮರು, ಈ ಧರೆಯಲ್ಲಿ ಅಪರೂಪ ಅಂತಹ ಪರಮ ಭಾಗವತರನ್ನು, ಲೋಕೈಕ ವೀರರನ್ನೂ, ಪತಿಯಾಗಿ ಪಡೆದ ನೀವೇ ನಿಜವಾಗಿಯೂ ಭಾಗ್ಯಶಾಲಿಗಳು ! ಈ ಬಗ್ಗೆ ನೀವು ಹೆಮ್ಮೆತಾಳಬೇಕು. ಅದು ಬಿಟ್ಟು ನೀವು ಅವರ ಮೇಲೆ ಅಕಾರಣವಾಗಿ ದ್ವೇಷ ಹೊತ್ತು ಅವರ ಮೇಲೆ ಕೈಮಾಡಲೆಳೆಸಿರುವಿರಲ್ಲಾ ನಿಮ್ಮ ಮೌಢ್ಯತನಕ್ಕೆ

ಏನನ್ನ ಬೇಕೋ ತಿಳಿಯದಾಗಿದೆ. ಈಗಲೂ ಕಾಲಮಿಂಚಿಲ್ಲ! ನೀವು ನಿಮ್ಮ ದುಷ್ಕೃತ್ಯಕ್ಕಾಗಿ ಪಶ್ಚಾತ್ತಾಪಪಟ್ಟರೆ, ಪ್ರಭುಗಳಲ್ಲಿ ಕ್ಷಮೆಯಾಚಿಸಿದರೆ ನಿಮ್ಮನ್ನು ಪ್ರಭುಗಳು ಕ್ಷಮಿಸುತ್ತಾರೆ. ನೀವು ದುಡುಕದೆ, ಭಾವೋದ್ವಿಗ್ನ ರಾಗದೆ ವಿಚಾರಮಾಡಿ, ನಿಮ್ಮಿಬ್ಬರ ದಾಪಂತ್ಯ ಜೀವನದ ಬಳ್ಳಿಯಿಂದ ಮಂದಾರಪುಷ್ಪ ಅರಳಬೇಕೆಂಬುದೇ ನಮ್ಮೆಲ್ಲರ ಆಶಯ. ನಿಮ್ಮ ದಾಂಪತ್ಯ ಜೀವನ ಬೆಳುದಿಂಗಳಿನಂತೆ ಬೆಳಗಲಿ, ಹಾಲು ಜೇನಿನಂತೆ ಹರಿಯಲಿ, ಎಂಬುದೇ ನಮ್ಮ ಹಾರೈಕೆ. ಶ್ರೀ ಪಂಪಾಪತಿ ನಮ್ಮ ಅಭೀಷ್ಟ ವನ್ನು ನೆರವೇರಿಸಿ ಕೊಡಬೇಕು."

ಎಂದು ಹೇಳಿ, ಕೃಷ್ಣದೇವರಾಯನ ಮುಖವನ್ನು ನೋಡಿದನು. ತಿಮ್ಮರಸನ ಪ್ರತಿಯೊಂದು ಮಾತಿಗೂ ತನ್ನ ಸಮ್ಮತಿ ಉಂಟೆಂದು ತಿಳಿಸು ವಂತೆ ಕೃಷ್ಣದೇವರಾಯನು ಮುಗುಳ್ನಗೆ ನಕ್ಕನು.

ಒಂದುಕ್ಷಣ ಮೌನ ಆವರಿಸಿತು. ಮರುಗಳಿಗೆಯಲ್ಲಿ ಕೃಷ್ಣದೇವ ರಾಯನು ಅಲ್ಲಿಂದ ಹೊರಟುಹೋದನು. ತಿಮ್ಮರಸನೂ ಅವನನ್ನು ಅನು ಸರಿಸಿದನು.

ಆ ವಿಶಾಲವಾದ ಶಯ್ಯಾಗಾರದಲ್ಲಿ ಜಗನ್ಮೋಹಿನಿ ಏಕಾಕಿಯಾಗಿ ಉಳಿದಳು. ಈ ವಿಶಾಲವಾದ ಜಗತ್ತಿನಲ್ಲಿ ತಾನು ಏಕಾಕಿನಿ ಎಂದು ಕೊಂಡಳು ಜಗನ್ಮೋಹಿನಿ! ಯಾವ ಪ್ರಣಯಿಗಳಿಗೆ ಈ ಪ್ರಥಮ ರಾತ್ರಿ ಮಧುರ ಮಿಲನದ ಹಾಲು ಜೇನಿನ ರಾತ್ರಿ ಯಾಗ ಬೇಕಾಗಿತ್ತೊ! ಆ ಪ್ರಣಯಿಗಳಿಗೆ, ಅವರ ಬಾಳಿನ ರುದ್ರರಾತ್ರಿಯಾಗಿತ್ತು!

## ೨೩

ಕಾಳರಾತ್ರಿ ಕಳೆದು ಮುಸಕುಮುಸಕಾಗಿ ಸೂರ್ಯನ ಕಿರಣಗಳು ಜಗತ್ತನ್ನು ಎಚ್ಚರಗೊಳಿಸಿತ್ತು.

ಚಿಂತೆಯ ಕಾಳರಾತ್ರಿಯ ಹೆಬ್ಬಾವು ವಿವೇಕದ ಕಠಾರಿಯಿಂದ ಕತ್ತರಿಸಲ್ಪಟ್ಟಿತ್ತು.

ಪ್ರಥಮ ರಾತ್ರಿಯನ್ನು ಸ್ವರ್ಗಾನುಭವದಿಂದ ಕಳೆಯಲೆಳಸಿದ್ದ ರಾಯನಿಗೆ ನರಕಯಾತನೆಯ ಅನುಭವ ಉಂಟಾಗಿತ್ತು.

ಕಳೆಗುಂದಿದ ಮುಖವನ್ನು ತೋರಿಸಲಾರದೆ ಏಕಾಂತವಾಗಿಯೇ ಕುಳಿತಿದ್ದ ಕೃಷ್ಣದೇವರಾಯನು ಸಮಯವನ್ನರಿತ ತಿಮ್ಮರಸ ರಾಯನನ್ನು ಕಾಣಲು ಬಂದ.

ತಿಮ್ಮರಸನನ್ನು ಕಂಡ ರಾಯನ ಮನಸ್ಸು ಪ್ರವಾದಲ್ಲಿ ಬಿದ್ದವರು ಬೃಹದ್ ವೃಕ್ಷವನ್ನಾಶ್ರಯಿದಂತಾಯ್ತು. ಆದರೆ ಗಂಭೀರನಾಗಿದ್ದ—

" ಮಹಾಪ್ರಭುಗಳಿಗೆ ನಮುಸ್ಕಾರ " ಎಂದು ಪ್ರಣಾಮ ಮಾಡಿದ.

" ಮಹಾಮಂತ್ರಿಗಳು ದಯಮಾಡಿಸಬೇಕು "

—ಎಂದು, ಆಹ್ವಾನಿಸಿದ. ಆಸನಾರೂಢನಾದ ತಿಮ್ಮರಸಮಾತನ್ನು ಮುಂದುವರೆಸಿದ—ಮಾತನಾಡ ಬಯುಸಿ,

" ರಾಯರ ಮುಖ ಮದುಡಲು ಕಾರಣ ತಿಳಿಯಬಹುದೆ ? "

" ನೆನ್ನೆರಾತ್ರಿಯ ಪ್ರಸಂಗವು ಮನವನ್ನು ಪ್ರಕ್ಷುಬ್ಧಗೊಳಿಸಿದೆ ಮಂತ್ರಿಗಳೆ "

ನಾನು ಇಷ್ಟು ಇಷ್ಟಪಟ್ಟು ಬಯಸಿ ವಿವಾಹವಾದದ್ದು ವಿನಾಶಕ್ಕೆ ಹಾದಿಯಾಯ್ತುಲ್ಲ ಎಂಬ ಯೋಚನೆ ನನ್ನನ್ನು ಕೆರಳಿಸಿದೆ.

ಅನೇಕ ಸಹಸ್ರರಾಜಕುವರಿಯರ ಭಾವಚಿತ್ರವನ್ನು ನೋಡಿದರೂ ನನ್ನಮನ ಒಮ್ಮೆಯಾದರೂ ಮಿಡಿಯಲಿಲ್ಲ.

ಕಾರ್ಯಾಕಾರಣದಿಂದ ಒಮ್ಮೆ ನೋಡಿದ ನಾನು ಜಗನ್ಮೋಹಿನಿಯನ್ನು ಮೋಹಿಸಿದೆ. ಅರ್ಥಾತ್ ಅದಕ್ಕಾಗಿಯೇ ಕಟಕಪುರಿಯನ್ನು ಮುತ್ತಿ ಇವಳನ್ನು ಮದುವೆಯಾದೆ—ಆದರೆ, ಯಾವ ಕಾರಣದಿಂದಲೋ ಯಾವ ಋಣಾನುಸಂಬಂಧದಿಂದಲೋ ಈಕೆಯನ್ನಾಕಾಂಕ್ಷಿಸಿದೆ—ಅವಳ ರೂಪಕ್ಕೆ ಮಾರುಹೋದೆ. ಆದರೆ, ಅವಳ ರೂಪವೇ ರೂಪಸರ್ಪವಾಗಿ ನನ್ನಮೇಲೇ ಹೆಡೆಯೆತ್ತಿತು.

ಹೆಣ್ಣೆಂದು ಹಾತೊರೆದುದೇ ಹಾಲಾಹಲವಾಗಿ ಪರಿಣಮಿಸಿತು.

ಪ್ರೇಮಾರಾಧನೆ ಮಾಡಲೆತ್ನಿಸಿದ ನನಗೆ ವಿಷತೀರ್ಥವೆ? ನನ್ನಬಾಳು ಇದು ಭಾಗ್ಯದ ಭಾನು ಎಂದು ಭ್ರಮಿಸಿದುದೇ ಬ್ರಹ್ಮಪಿಶಾಚಿಯ ರೂಪಾಗಿ ಕಾಡಹತ್ತಿ ಬಾಳನ್ನು ಬರಿದುಮಾಡಿ ಹಾಳುಮಾಡಿದೆ.

ಇದು ನನ್ನ ಅದೃಷ್ಟವೋ, ದುರಾದೃಷ್ಟವೋ ತಿಳಿಯದು. ಅವಳು ಹೆಣ್ಣೋ ಹಾಳು ಮಾರಿಯೋ ಸಮಸ್ಯೆಯಾಗಿದೆ. ಈ ವಿಷವರ್ತುಲದಿಂದ ಪಾರಾಗುವ ಯೋಜನೆಯೇ ನನ್ನನ್ನು ಬಾಧಿಸುತ್ತಿದೆ ಮಹಾಮಂತ್ರಿ"

—ಎಂದು ಕ್ರೋಧೋನ್ಮತ್ತ, ವಿಷಾದ, ಯೋಚನಾಕ್ರಾಂತ ಧ್ವನಿಯಲ್ಲಿ ಹೇಳಿದ ರಾಯ.

ರಾಯನ ಹೃದಯವನ್ನರಿತ ತಿಮ್ಮರಸ ಗಂಭೀರವಾಗಿಯೇ ಸಮಸ್ಯೆಯ ಬಗ್ಗೆ ಸೂಕ್ತ ಪರಿಹಾರೋಪಾಯವನ್ನು ಸೂಚಿಸಲೆತ್ನಿಸಿ ತಿಳಿಸಿದ.

"ಮಹಾಪ್ರಭು, ನನ್ನ ಬುದ್ಧಿಗೆ ತಿಳಿದುದನ್ನು ತಿಳಿಯಪಡಿಸುತ್ತೇನೆ. ತಾವು ಈ ಬಗ್ಗೆ ಯೋಚಿಸಿ, ಇಷ್ಟು ವಿವರ್ಣರಾಗಿ ಕುಳಿತಿರುವುದು ಅನಾವಶ್ಯಕ. ಜಗನ್ಮೋಹಿನಿಯನ್ನಾಗಲೀ, ಅವಳ ರೂಪವನ್ನಾಗಲೀ ನಾವು ನಿಂದಿಸಿ ವ್ಯಥೆಪಡುವುದು ವ್ಯರ್ಥ. ವಿಧಿಯ ಕರಾಳ ರೌದ್ರ ನಖ ಅವಳ ಸ್ತ್ರೀ ಹೃದಯವನ್ನು ಬಗೆದು ಭ್ರಮೆಗೊಳಿಸಿದೆ. ಪುಂಖಾನುಪುಂಖವಾಗಿ, ಏಕಪ್ರಕಾರವಾಗಿ ವಿಶ್ವಾಸಿಗಳ, ಇಷ್ಟಮಿತ್ರರುಗಳ, ಪ್ರೀತ್ಯಾದರದ ವಸ್ತುಗಳ ಮರಣ ಅವಳ ಸುಕೋಮಲ ಹೃದಯದಮೇಲೆ ಪ್ರಹಾರಮಾಡಿ, ಪ್ರಬಲವಾಗಿ ಪರಿಣಾಮಮಾಡಿ, ರಕ್ಕಸಿಯನ್ನಾಗಿಮಾಡಿದೆ. ಅದರ

ಪ್ರತೀಕವೇ ಈ ರುದ್ರಪ್ರಯತ್ನ. ಅವಳೂ ತಂದೆತಾಯಿಯರನ್ನಗಲಿದ್ದಾಳೆ. ಅವಳ ಕ್ರೋಧ ಮಿತಿಮೀರಿದೆ. ಇಂತಾಗಿ, ಅವಳು ಈರೀತಿಯಾಗಿರಬಹುದು. ಪರಿಸ್ಥಿತಿಯೂ ಅವಳಮೇಲೆ ಪರಿಣಾಮಮಾಡಿದೆ. ಯಾವ ರೀತಿಯ ಪರಿಸ್ಥಿತಿಯ ಪರಿಣಾಮವೂ ಅವಳಮೇಲೆ ಪರಿಣಾಮಕಾರಿಯಾಗದಂತಹ ಶಾಂತಸ್ಥಳದಲ್ಲಿ ಅವಳನ್ನು ಇಟ್ಟರೆ ಕ್ರೋಧದ ಬೆಂಕಿ ಉರಿದು ಬೂದಿಯಾಗಿ, ಜಗನ್ಮೋಹಿನಿ ಮಹಾರಾಣಿಯಾಗಲು ಶಕ್ತಳಾಗುತ್ತಾಳೆ.

ಅಲ್ಲಿಯವರೆಗೆ ಅವಳನ್ನು ಮನ್ನಿಸಿ, ಚಿನ್ನವನ್ನು ಪುಟವಿಡಲು ಅವಕಾಶಮಾಡಿಕೊಟ್ಟು, ಮುಂದಿನ ಆಗುಹೋಗುಗಳನ್ನು ನೋಡಲು ಆಸ್ಪದ ಮಾಡಿಕೊಡಿರೆಂದು ಬೇಡುತ್ತೇನೆ."

—ಎಂದು, ದಯಾರ್ತ, ನಯವಿನಯನಾಗಿ ಹೇಳಿದ ಎಂತಲೇ ಸಲಹೆ ಒಪ್ಪಿಗೆಯಾಗಿ, ರಾಯನ ಮನಸ್ಸೂ ಶಾಂತವಾಗಿ ಜಗನ್ಮೋಹಿನಿಯನ್ನು "ಕುಂಭಂ" ಗ್ರಾಮಕ್ಕೆ ಸಪರಿವಾರ ಸಮೇತ ಬೀಳ್ಕೊಡಲು ನಿರ್ಧರಿಸಿದ.

ಹಿಂದೊಮ್ಮೆ ಕೃಷ್ಣದೇವರಾಯನು ದಕ್ಷಿಣದ ಕಡೆ ಬೇಟೆಯಾಡುತ್ತಾ ಬಂದಿದ್ದಾಗ ಅಲ್ಲಿ ಸಂಜೆಯಾಗಿ, ಅಂದು ಅಲ್ಲೇ ಬಿಡಾರಮಾಡಿದ್ದನು. ಆಗ ಮಳೆಗಾಲ. ನದಿಯುತುಂಬು ಪ್ರವಾಹದಲ್ಲಿ ಹರಿಯುತ್ತಿತ್ತು. ಅವಳು ತುಂಟ ಹುಡುಗಿಯಂತೆ, ನಗುತ್ತಾ ಪ್ರವಹಿಸುತ್ತಿದ್ದಳು. ನದಿಯ ಅಕ್ಕಪಕ್ಕದಲ್ಲಿ ತರುಲತೆಗಳಿಂದಲೂ, ಗಿಡಮರಗಳಿಂದಲೂ ಶೋಭಿಸುತ್ತಿತ್ತು. ನದಿಹರಿದು ಬರುವದಿಕ್ಕಿನಲ್ಲಿ, ದೂರದಲ್ಲಿ ಒಂದು ಬೆಟ್ಟ ಆಸನಕ್ಕೆ ತಲೆ ಎತ್ತಿ ನಿಂತಿತ್ತು ಅದಕ್ಕೆ ಬಣ್ಣ ಬಣ್ಣದ ಹೂಗಳಿಂದ ಮಾಲೆಹಾಕುವಂತೆ ವಿವಿಧವರ್ಣಗಳ ಮೋಡಗಳು ಕಂಗೊಳಿಸುತ್ತಿದ್ದವು. ಅತ್ತ ಆಗಸದ ತಿಳಿ ನೀಲಿಬಾನು, ಇತ್ತ ಮುಳಗುತ್ತಿದ್ದ ಸೂರ್ಯ. ನಡುವೆ ಬಣ್ಣ ಬಣ್ಣದ ಮೋಡಗಳ ಓಕುಳಿಯಾಟ ಅವುಗಳೆಲ್ಲ ತಿಳಿನೀರಿನಲ್ಲಿ ಚಿತ್ರದಂತೆ ಪ್ರತಿಫಲಿಸಿದ್ದವು.

ಆಗಷ್ಟೇ ಸೂರ್ಯಾಸ್ತವಾಗಿತ್ತು. ನದಿಯ ತೀರದಲ್ಲಿ ದನಮೇಯಿಸಲು ಹೋಗಿದ್ದ ಗೋಪಾಲಕರು ತಮ್ಮ ದನಕರುಗಳನ್ನುಮನೆಗೆ ಹೊಡೆದುಕೊಂಡು ಬರುತ್ತಿದ್ದರು. ಅದರ ದೆಸೆಯಿಂದ ಗೋಪಾಲರೂ, ದನಕರು

ಗಳೂ ಅಸ್ಪಷ್ಟವಾಗಿ, ಮಬ್ಬುಮಬ್ಬಾಗಿ ಕಾಣುತ್ತಿದ್ದರು. ನೀರು ಸೂರ್ಯಾಸ್ತದಿಂದ ಹೊನ್ನಿನ ಪಟಲದಂತೆ ಹೊಳೆಯುತ್ತಿತ್ತು. ತಂಗಾಳಿ ಹಿತಕರವಾಗಿತ್ತು ಎಲ್ಲೆಲ್ಲೂ ಪ್ರಕೃತಿಯ ದಿಬ್ಬಣ ನಡೆದಿತ್ತು. ಆಗೋ ಧೂಳಿಲಗ್ನದಲ್ಲಿ ಸಾಯಂಪ್ರಭೆಯ ಸೊಬಗಿನಲ್ಲಿ ಆ ನದಿ, ಆ ಬೆಟ್ಟ, ಆ ದನಕರುಗಳು ಎಲ್ಲವೂ ಕೃಷ್ಣದೇವರಾನಿಗೆ ಪುರಾಣ ಯುಗದ ಗೋಕುಲವನ್ನು ನೆನಪುಮಾಡಿಕೊಟ್ಟತು. ಭಾವಜೀವಿಯೂ, ರಸಿಕನೂ ಆಗಿದ್ದ ಕೃಷ್ಣದೇವರಾಯನು ವಸ್ತು ಸ್ಥಿತಿಯನ್ನು ಮರೆತು ಪುರಾಣ ಜೀವಿಯಾಗಿ, ಮಧುರೆಯ ಕೃಷ್ಣನನ್ನು ಆ ಗೋಪಾಲಕರಲ್ಲಿ ಕಂಡನು! ಕೊಳಲನ್ನೂದುವ ಕೃಷ್ಣನು ಕಣ್ಣೆದುರಿಗೆ ಬಂದನು. ಅವನ ಮುರಳೀನಾದವನ್ನು ಕೇಳಿ ಮೇಯುತ್ತಿದ್ದ ಹಸುಗಳು ಅವನ ಬಳಿಗೆ ಓಡಿಬಂದ ದೃಶ್ಯಕಂಡನು. ಆ ಕೃಷ್ಣನ ಒರವಿವಾಗಿ ಕಾಯುತ್ತಿದ್ದ ಗೋಪಿಕಾಸ್ತ್ರಿಯರನ್ನೂ ಕಂಡನು. ಆಕ್ಷಣಕ್ಕೆ ಕೃಷ್ಣದೇವರಾಯನಿಗೆ ಕೃಷ್ಣನ ಬಾಲಲೀಲೆಗಳೆಲ್ಲವೂ ಬೃಂದಾವನದಲ್ಲಿ ಹೇಗೆ ನಡೆಯಿತೋ ಹಾಗೆ ಸ್ಮೃತಿಪಟಲದ ಮೇಲೆ ಮತ್ತೊಮ್ಮೆ ಸುಳಿದು ಹೋದನು. ಕೃಷ್ಣದೇವರಾಯನು ಭಾವಸಮಾಧಿಯಲ್ಲಿ ತನ್ನನ್ನು ತಾನು ಮರೆತನು. ಎದೆಷ್ಟು ಹೊತ್ತು ಹೀಗೆ ಇದ್ದನೋ. ಸಂಗಡಿಗರು ಬಂದು ಎಚ್ಚರಿಸಿದಾಗಲೇ ಎಚ್ಚರ.

ತನಗಾದ ದಿವ್ಯ ಅನುಭವಗಳನ್ನು ನೆನೆದಷ್ಟು ರಾಯನಿಗೆ ಮೈರೋಮಾಂಚಗೊಳ್ಳುತ್ತಿತ್ತು. ತನಗೆ ಬೃಂದಾವನದ ದಿವ್ಯದರ್ಶನವನ್ನು ಮಾಡಿಸಿದ ಆ ನೆಲದಲ್ಲಿ ಏನೋ ವಿಶೇಷ ಗುಣವಿರಬೇಕೆಂದು, ತನ್ನ ನೆನಪನ್ನು ಚಿರಸ್ಥಾಯಿಯಾಗಿ ನಿಲ್ಲಿಸಲು ಅಲ್ಲಿ ಒಂದು ಸಣ್ಣ ದೇವಾಲಯವನ್ನು ಕಟ್ಟಿಸಿ ಅದರೊಳಗೆ ಮಧುರಾನಾಥನನ್ನು ಪ್ರತಿಷ್ಠಾಪಿಸಿ, ಅಲ್ಲಿಂದ ಹಿಂದಿರುಗಿದ್ದನು.

ಇಂದು ಜಗನ್ಮೋಹಿನಿಯನ್ನು ಇಡಲು ಅದೇ ಯೋಗ್ಯ ಸ್ಥಳವಾಗಿ ಕಂಡಿತ್ತು. ಅಂತಲೇ ಜಗನ್ಮೋಹಿನಿಯ ಸಲುವಾಗಿ ಅಲ್ಲಿ ಒಂದು ಸಣ್ಣ ಅರಮನೆಯನ್ನು ಕಟ್ಟಿಸಿ, ಅವಳನ್ನು ಇಡಲಾಯಿತು.

ಕೃಷ್ಣದೇವರಾಯನೇ ಜಗನ್ಮೋಹಿನಿಯನ್ನು ಕರೆತಂದು ಈ ಕುಂಭಂಗ್ರಾಮದ ಅರಮನೆಯಲ್ಲಿ ಬಿಟ್ಟುಹೋಗಿದ್ದರು.

ಹೊರಡುವ ಮೊದಲು ಕೃಷ್ಣದೇವರಾಯನು ಜಗನ್ಮೋಹಿನಿಯೊಂದಿಗೆ ಕೆಲವು ಮಾತುಗಳನ್ನು ಆಡಿದ್ದನು.

"ಗಜಪತಿನಂದಿನಿ, ನಿನಗೆ ಅಪ್ರಿಯವಾದ ಈ ಕಾರ್ಯವನ್ನು ನಿರ್ವಾಹವಿಲ್ಲದೆ ಮಾಡಬೇಕಾಗಿದೆ. ನಿನ್ನ ಹೃದಯದಲ್ಲಿ ನನ್ನ ಬಗೆಗೆ ಯಾವ ಭಾವನೆಗಳಿವೆ ಎಂಬುದು ನನಗೆ ಚೆನ್ನಾಗಿ ಗೊತ್ತು. ಪರಸ್ಪರ ಸಮರಸ್ಯವಿಲ್ಲದ ನಾವು ಸತಿಪತಿಗಳಾಗಿ ಇರುವುದು ದೈವಶಾಪವಲ್ಲದೆ ಬೇರೆಯಲ್ಲ. ನೀನು ನನ್ನನ್ನು ದ್ವೇಷಿಸಲು, ನಿನ್ನದೇ ಆದ ಕಾರಣಗಳಿವೆ ಎಂಬುದನ್ನು ನಾನು ಬಲ್ಲೆ! ನಿನಗೆ ಪ್ರಿಯರಾದ ನರಹರಿಪಾತ್ರ ಹಾಗೂ ವೀರಭದ್ರದೇವರ ಮರಣಕ್ಕೆ ನಾನೂ ಪರೋಕ್ಷವಾಗಿ ಕಾರಣನಾಗಿದ್ದೇನೆ. ಆ ಬಗ್ಗೆ ನಾನು ತುಂಬಾ ವಿಷಾದ ವ್ಯಕ್ತಪಡಿಸುತ್ತೇನೆ. ಅದು ನನ್ನ ಕೈಮೀರಿದ ಕೃತ್ಯವೇ ಹೊರತು, ನಾನು ಉದ್ದಿಶ್ಯಪೂರ್ವಕವಾಗಿ ಮಾಡಿದ ಕಾರ್ಯವಲ್ಲ. ನಾನು ಉತ್ಕಲವನ್ನು ಗೆದ್ದೆನೆನ್ನುವ ಕಾರಣಕ್ಕಾಗಿ ನನ್ನಮೇಲೆ ಸಿಟ್ಟಿರಬಹುದು. ಆದರೆ ನಾನು ಗೆದ್ದ ಉತ್ಕಲವನ್ನು ಮರಳಿ ನಿಮ್ಮ ತಂದೆಗೇ ಹಿಂದಿರುಗಿಸಿ, ಗೌರವಿಸಿದ್ದೇನೆ. ನಿಮ್ಮ ತಂದೆಯೊಂದಿಗೆ ನಾನು ಸ್ನೇಹ ಒಪ್ಪಂದಮಾಡಿಕೊಂಡು, ವಿಜಯನಗರಕ್ಕೆ ಹಿಂದಿರುಗಿದರೂ, ನೀನು ಮಾತ್ರ ನನ್ನಮೇಲೆ ದ್ವೇಷವನ್ನು ಕಾರುತ್ತಲೇ ಬಂದಿದ್ದೀಯೆ. ನಿನ್ನ ಸೇಡಿನ ಕಾರಣವೇನೆಂದು ಎಷ್ಟು ಯೋಚಿಸಿದರೂ ನನಗೆ ತಿಳಿಯದೇ ಹೋಗಿದೆ. ನಾನು ನಿನ್ನ ವಿಷಯದಲ್ಲಿ ಮಾಡಿರಬಹುದಾದ ಅಪಚಾರಗಳನ್ನು ಮನ್ನಿಸು. ನಾನು ಯಾವ ದುರುದ್ದೇಶದಿಂದಲೂ ನಿನ್ನನ್ನು ಇಲ್ಲಿ ಇರಿಸಿಲ್ಲ. ನಮ್ಮಿಬ್ಬರ ನಡುವೆ ಸಮರಸಭಾವನೆ ಉಂಟಾಗುವತನಕ ನಾವು ದೂರವಾಗಿರುವುದೇ ಲೇಸೆಂದು ನಿನ್ನನ್ನು ಇಲ್ಲಿ ಇಡಲಾಗಿದೆ. ಇಲ್ಲಿ ನಿನಗೆ ಎಲ್ಲಾ ಬಗೆಯ ಅನುಕೂಲತೆಗಳನ್ನು ಒದಗಿಸಲಾಗಿದೆ. ಇಲ್ಲಿ ನಿನ್ನ ಮನಸ್ಸಿಗೆ ಹಿತಕರವಾದ ವಾತಾವರಣವಿದೆ. ಈ ಪ್ರಶಾಂತ ವಾತಾವರಣದಲ್ಲಿ ಕಳೆದುಕೊಂಡಿರುವ ನಿನ್ನ ಮನಸ್ಸಿಗೆ ಶಾಂತಿ, ನೆಮ್ಮದಿಗಳು ಮತ್ತೆ ಪಡೆಯುವಂತೆ ಆಗಲಿ. ಈಗಲೂ ಕಾಲ ಮಿಂಚಿಲ್ಲ. ನಿನಗೆ, ನಿನ್ನ ದುಷ್ಕೃತ್ಯಕ್ಕಾಗಿ ನಿಜವಾಗಿಯೂ ಪಶ್ಚಾತ್ತಾಪವಾದರೆ ಆದಿನ ನಮ್ಮ ಬಾಳಿಗೆ ನಿಜವಾಗಿಯೂ ಭಾಗ್ಯೋದಯದ ದಿನ. ನೀನು ನಿನ್ನ ಅಕೃತ್ಯ

ಕ್ಕಾಗಿ ಕ್ಷಮೆ ಯಾಚಿಸಿದರೆ, ನಿನ್ನ ಎಲ್ಲ ತಪ್ಪುಗಳನ್ನು ಮರೆತು ನಿನ್ನನ್ನು ಒಳಗೆ ಕರೆಸಿಕೊಳ್ಳುತ್ತೇನೆ. ನಮ್ಮಿಬ್ಬರ ನಡುವೆ ಉಂಟಾಗಿರುವ ಹಾಲಾಹಲ ಕಳೆದು ನಿಜವಾದ ಅಮೃತ ಉಂಟಾಗಬೇಕೆಂಬುದೇ ನನ್ನ ಆಶಯ. ನಮ್ಮಿಬ್ಬರ ದಾಂಪತ್ಯ ಜೀವನ ಅಮೃತದಂತೆ ಸವಿಯಾಗ ಬೇಕೆಂಬುದೇ ನನ್ನ ಹಾರೈಕೆ. ದೇವರು ನಿನಗೆ ಒಳ್ಳೇಬುದ್ಧಿಯನ್ನು ಕೊಡಲಿ, ಮಂಗಳ ವನ್ನು ಉಂಟುಮಾಡಲಿ" ಎಂದು ಹೇಳಿ, ಜಗನ್ಮೋಹಿನಿಯಿಂದ ಉತ್ತರ ವನ್ನೂ ನಿರೀಕ್ಷಿಸದೇ ಅವಳಿಂದ ಬೀಳ್ಕೊಂಡು ಹೊರಟು ಹೋಗಿದ್ದನು.

ಜಗನ್ಮೋಹಿನಿ, ಕೃಷ್ಣದೇವರಾಯನು ಅಲ್ಲಿಂದ ಹೊರಟುಹೋದ ಮೇಲೆ ಎಷ್ಟೋಹೊತ್ತಿನತನಕ ಅವನು ಕಣ್ಮರೆಯಾದ ದಿಕ್ಕನ್ನೇ ಶೂನ್ಯ ದೃಷ್ಟಿಯಲ್ಲಿ ನೋಡುತ್ತಿದ್ದಳು. ಅವಳಿಗೆ ಅದೇನು ನೆನಪಾಯಿತೋ ದುಃಖ ಒತ್ತರಿಸಿಕೊಂಡುಬಂದು ಕಣ್ಣೀರು ಧಾರಾಪ್ರವಾಹವಾಗಿ ಹರಿ ಯಿತು. ಅವಳು ದಿಂಬಿನಮೇಲೆ ತಲೆಯಿಟ್ಟು ಗೋಳೋ ಎಂದು ಅತ್ತಳು. ಇತ್ತೀಚಿಗೆ ಅವಳು ಇಷ್ಟು ದೀರ್ಘವಾಗಿ ಅತ್ತಿರಲಿಲ್ಲ.

ಅವಳಿಗೆ ತನ್ನ ಒಂಟಿತನವನ್ನು ನೆನೆದು ಅಷ್ಟು ದುಃಖವಾಗಿತ್ತು! ಉತ್ಕಲ ಸಾಮ್ರಾಟನ ಪುತ್ರಿಯಾಗಿ ವಿಜಯನಗರ ಸಾಮ್ರಾಟನ ಮಡದಿ ಯಾಗಿ ಈಗ ಕುಂಭಂ ಗ್ರಾಮದಲ್ಲಿ ಪರಿತ್ಯಕ್ತ ರಾಣಿಯಾಗಿ ಜೀವಿಸಬೇ ಕಾಗಿ ಬಂದ ತನ್ನ ಅಸಹಾಯ ಪರಿಸ್ಥಿತಿಗಾಗಿ, ಏಕಾಂಗಿತನಕ್ಕಾಗಿ ಕಣ್ಣೀರು ಮೇರೆ ಮೀರಿ ಹರಿದಿತ್ತು. ಅವಳನ್ನು ಯಾರೂ ಸಮಾಧಾನ ಗೊಳಿಸುವ ಸ್ಥಿತಿಯಲ್ಲಿರಲಿಲ್ಲ.

ದಿನಗಳು ಉರುಳಿದವು.

ಒಂದು....ಎರಡು....ಮೂರು! ಹೀಗೆ ಮೂರು ತಿಂಗಳು ಉರುಳಿದರೂ ಜಗನ್ಮೋಹಿನಿಯ ಸ್ವಭಾವದಲ್ಲಿ ಯಾವ ಬಗೆಯ ಮಾರ್ಪಾಟು ತಲೆದೋರ ಲಿಲ್ಲ. ಅವಳಲ್ಲಿ ಪಶ್ಚಾತ್ತಾಪ ಉಂಟಾಗಿರುವಬಗ್ಗೆ ಯಾವ ಸುದ್ದಿಯೂ ಕೃಷ್ಣದೇವರಾಯನ ಕಿವಿಗೆ ಬೀಳಲಿಲ್ಲ. ಅದಕ್ಕಾಗಿ ಇದುವರೆಗೂ ಕಾದಿದ್ದ ಕೃಷ್ಣದೇವರಾಯನಿಗೆ ನಿರಾಶೆಯೇ ಆಯಿತು. ಜಗನ್ಮೋಹಿನಿಯಲ್ಲಿ ಪಶ್ಚಾತ್ತಾಪವುಂಟಾದಹೊರತೂ, ಅವಳು ತನ್ನಲ್ಲಿ ಕ್ಷಮಾಪಣೆ ಕೇಳಿ ಕೊಳ್ಳದಹೊರತೂ ಅವಳನ್ನು ನೋಡಲು ಹೋಗುವುದಾಗಲೀ, ತನ್ನ ಬಳಿಗೆ

ಕರೆಸಿಕೊಳ್ಳುವುದಾಗಲೀ ಮಾಡಬಾರದೆಂದು ಕೃಷ್ಣದೇವರಾಯನು ದೃಢ ನಿರ್ಧಾರ ಮಾಡಿದ್ದನು. ಈ ನಿರ್ಧಾರವನ್ನು ಮುರಿದು ಜಗನ್ಮೋಹಿನಿಯ ಬಳಿಗೆ ಹೋಗಲು ರಾಯನು ಸಿದ್ಧನಾಗಿರಲಿಲ್ಲ. ದಿನಗಳೆದಂತೆ ಅವಳ ಮೇಲಿನ ಮೋಹ ಹೆಚ್ಚುತ್ತಿದ್ದರೂ ಅವಳಿಂದ ಪಶ್ಚಾತ್ತಾಪದ ನುಡಿ ಕೇಳದೆ ಅವಳ ಬಳಿಗೆ ಹೋಗಬಾರದೆಂದು ಮನಸ್ಸನ್ನು ಗಟ್ಟಿಮಾಡಿಕೊಂಡು ಕುಳಿತಿದ್ದನು. ಆದರೂ ರಾಜಧಾನಿಗೆ ಕಾರಣಾಂತರಗಳಿಂದ ಬರುತ್ತಿದ್ದ ದಾಸಿ ಜನರಿಂದಲೂ, ಸೇವಕವರ್ಗದವರಿಂದಲೂ, ಕೃಷ್ಣದೇವರಾಯನ ಕಿವಿಗೆ ಜಗನ್ಮೋಹಿನಿಯಬಗ್ಗೆ ಅನೇಕ ಕರುಣಾಜನಕವಾರ್ತೆಗಳು ಬಂದು ತಲಪಿದವು.

ಅವುಗಳಲ್ಲಿ ಜಗನ್ಮೋಹಿನಿಯು ಮನೋವ್ಯಥೆಯಿಂದ ಕೊರಗಿ, ಕೊರಗಿ ಹಾಸಿಗೆ ಹಿಡಿದಿರುವಳೆಂಬ ಸುದ್ದಿಯೂ ಬಂತು ಈ ಸುದ್ದಿಯನ್ನು ಕೇಳಿ ಕೃಷ್ಣದೇವರಾಯನು ತಲ್ಲಣಿಸಿದನು.

ಕೃಷ್ಣದೇವರಾಯನು ಜಗನ್ಮೋಹಿನಿಯನ್ನು ಬಿಟ್ಟು ಹೊರಟು ಹೋದಮೇಲೆ ಅನೇಕ ದಿನಗಳವರೆಗೆ ಜಗನ್ಮೋಹಿನಿ ನಿದ್ರಾಹಾರಗಳನ್ನು ಬಿಟ್ಟು ಏನನ್ನೊ ಯೋಚಿಸುತ್ತಾ ಕುಳಿತಿರುತ್ತಿದ್ದಳು. ಅವಳಿಗೆ ಊಟ ತಿಂಡಿಗಳೂ ಇತರ ಮನರಂಜನೆಗಳಲ್ಲೂ ಆಸಕ್ತಿಯಿಲ್ಲವಾಗಿತ್ತು. ದಾಸಿಯರು ಬಂದು ಬಲವಂತ ಪಡಿಸಿದಾಗ ಒಂದುತುತ್ತು ಅನ್ನ ಬಾಯಿಗೆ ಹಾಕಿಕೊಳ್ಳುತ್ತಿದ್ದಳು ಅಷ್ಟೆ. ತಾನಾಗಿ ಊಟ ತಿಂಡಿಗಳಿಗೆ ಗಮನ ಕೊಡುತ್ತಿರಲಿಲ್ಲ. ಅವಳಿಗೆ ಅರಮನೆಯಲ್ಲಿ ಯಾವುದಕ್ಕೂ ಕೊರತೆ ಇರಲಿಲ್ಲ. ಅವಳು ಬಯಸಿದುದೆಲ್ಲ ಆಗಲೇ ಸಿದ್ಧವಾಗುತ್ತಿದ್ದವು. ಅವಳ ಸೇವೆಗಾಗಿ ಹತ್ತಾರು ಜನ ಸೇವಕಿಯರು ಕೈಕಟ್ಟಿಕೊಂಡು ನಿಂತಿರುತ್ತಿದ್ದರು ಅವಳ ಆಜ್ಞೆಗಾಗಿ ಇದಿರು ನೋಡುತ್ತಾ. ಆದರೆ ಜಗನ್ಮೋಹಿನಿಗೆ ಯಾರ ಸೇವೆಯೂ ಬೇಕಿರಲಿಲ್ಲ. ಯಾರ ಉಪಚಾರವೂ ಬೇಕಿರಲಿಲ್ಲ, ಅವಳಿಗೆ ಅವರು ತನ್ನ ಪಾಡಿಗೆ ತನ್ನನ್ನು ಬಿಟ್ಟರೆ ಸಾಕಾಗಿತ್ತು. ಅವಳು ಸಾಮಾನ್ಯವಾಗಿ ತನ್ನ ಅಂತಃಪುರದಲ್ಲಿ ಏಕಾಂಗಿಯಾಗಿ ಇರುತ್ತಿದ್ದಳು.

ಕೃಷ್ಣದೇವರಾಯನು ಹೊರಡುವ ಮುನ್ನ ಹೇಳಿದ್ದ ಮಾತುಗಳನ್ನು ಜಗನ್ಮೋಹಿನಿ ಹಲವುಬಾರಿ ಮೆಲುಕುಹಾಕಿಕೊಂಡಿದ್ದಳು. ಅವನ ಮಾತು

ಗಳಲ್ಲಿ ಜಗನ್ಮೋಹಿನಿಗೆ ಒಂದು ಭವರಸೆ ಇತ್ತು. ಅವಳು ಬದುಕುವ ದಾರಿಯನ್ನು ಅವು ತೋರಿಸಿದ್ದವು. ಆದರೆ ಆ ಭರವಸೆ, ಬರುವ ದಾರಿಗಳು ಜಗನ್ಮೋಹಿನಿಗೆ ಬೇಕಿರಲಿಲ್ಲ. ಅವಳಿಗೆ ತನ್ನ ಜೀವಿತದ ಉದ್ದೆ.ಶವನ್ನು ನರಹರಿಪಾತ್ರ ಹಾಗೂ ವೀರಭದ್ರ ದೇವರಿಗೆ ಇತ್ತವಚನವನ್ನು ಪಾಲಿಸಿ ಕೊಳ್ಳುವುದು ಬೇಕಿತ್ತೇ ಹೊರತು ಬದುಕುವುದು ಬೇಕಿರಲಿಲ್ಲ. ಅಂತೆಯೇ ಅವಳು ಕೃಷ್ಣದೇವರಾಯನ ಉಪದೇಶವನ್ನು ತಿರಸ್ಕರಿಸಿದ್ದಳು. ಈಗ ಅವಳಮುಂದೆ ಇದ್ದ ಪ್ರಶ್ನೆ ಎಂದರೆ—"ಮುಂದೇನು?"

ಹೇಗಾದರೂಮಾಡಿ ತನ್ನ ಸಂಕಲ್ಪವನ್ನು ಈಡೇರಿಸಲು ಹಾತೊರೆ ಯುತ್ತಿದ್ದ ಜಗನ್ಮೋಹಿನಿಗೆ ಈಗ ತನ್ನ ಮುಂದಿನ ದಾರಿಯೇನೆಂದು ತಿಳಿಯದೆಹೋಗಿತ್ತು. ಒಮ್ಮೆ ಕೃಷ್ಣದೇವರಾಯನ ಜೀವಕ್ಕೆ ಸಂಚಕಾರ ತಂದು, ಪ್ರಯತ್ನ ವಿಫಲವಾಗಿ ಅವಳು ಹತ್ಯಾಕಾರಿಯಾಗಿರುವಾಗಲೇ ಸಿಕ್ಕಿಬಿದ್ದಿದ್ದಳು. ಅವಳು ಹತ್ತಿರದಲ್ಲಿ ಇದ್ದರೆ ಎಂತಹ ಅಪಾಯವೆಂಬು ದನ್ನು ಊಹಿಸಿ ಅವಳನ್ನು ದೂರದ ಊರಾದ ಕುಂಭಂನಲ್ಲಿ ಇರಿಸಿದ್ದರು. ತಾನು ಇಲ್ಲಿದ್ದುಕೊಂಡೇ ಕೃಷ್ಣದೇವರಾಯನಮೇಲೆ ಹಗೆ ತೀರಿಸಿಕೊಳ್ಳು ವುದು ಹೇಗೆ ಎಂಬುದನ್ನು ತಿಳಿಯದೆ ವಿಹ್ವಲಗೊಂಡಳು. ಇದೇ ಅವಳ ಬುದ್ಧಿ ಮನಸ್ಸುಗಳನ್ನು ತುಂಬಿ ಅವಳನ್ನು ಹಣ್ಣುಮಾಡಿ, ಹತಾಶಳಾಗು ವಂತೆ ಮಾಡಿತ್ತು.

ಈ ಚಿಂತೆಯಲ್ಲೇ ಬೆಂದು ಶಾಂತಿಗುಂದಿ, ದಿನದಿನಕ್ಕೂ ಸವೆದು ಹೋದಳು. ದೇಹ ಒಣಗಿದ ಲತೆಯಂತೆ ಬಾಡಿತು. ಅವಳ ಆರೋಗ್ಯ ಹದಗೆಟ್ಟಿತು. ದಿನವಿಡೀ ಮಾಡುವ ಚಿಂತೆಯಿಂದ, ಅನಾರೈಕೆಯಿಂದ, ಅವಳ ದೇಹ ಸೊರಗಿ ಒಣಗಿದ ಕಾಷ್ಠವಾಯಿತು. ಸೊಂಪಾಗಿ ಬೆಳೆದು, ನಳನಳಿಸುವ ಸುಂದರಪುಷ್ಪವಾಗಿದ್ದ ಅವಳು—ಪ್ರಖರ ಕಿರಣಕ್ಕೆ ಸಿಕ್ಕಿ, ಬಾಡಿ, ಕಮರಿದ ಪುಷ್ಪದಂತಾಗಿದ್ದಳು. ಉತ್ಸಾಹ ಬತ್ತಿಹೋಗಿತ್ತು. ಕಣ್ಣುಗಳು ಗುಳಿಬಿದ್ದು, ಮುಖ ಕಾಂತಿಗುಂದಿ, ಅವಳು ಹಿಂದಿದ್ದ ನವ ಯೌವನ ತರುಣಿ ಜಗನ್ಮೋಹಿನಿಯ ನೆರಳು ಮಾತ್ರವಾಗಿದ್ದಳು.

ದಿನದಿನಕ್ಕೂ ಕ್ಷಯಿಸುತ್ತಿದ್ದ ಜಗನ್ಮೋಹಿನಿಯನ್ನು ನೋಡಿ ಪರಿ ಜನರು ಕಂಗೆಟ್ಟರು. ಮುಂದೊಂದು ದಿನ ಜಗನ್ಮೋಹಿಯು ಹಾಸಿಗೆ

ಯನ್ನು ಹಿಡಿದು ಮಲಗಿದಾಗ ಬೇರೇನು ಮಾಡಲು ತೋರದೆ, ನೇರ ಕೃಷ್ಣದೇವರಾಯನಲ್ಲಿ ಇರುವ ಸಂಗತಿಯನ್ನು ಬಿನ್ನವಿಸಿಕೊಂಡರು.

ಕೃಷ್ಣದೇವರಾಯನಿಗೆ ಜಗನ್ಮೋಹಿನಿಯ ಚಿಂತಾಜನಕವಾದ ಸ್ಥಿತಿಯನ್ನು ಕೇಳಿ ವ್ಯಥೆಯುಂಟಾಯಿತು. ಅವನಿಗೆ ಕೂಡಲೇ ಹೋಗಿ ಜಗನ್ಮೋಹಿನಿಯನ್ನು ಸಂತೈಸುವ ಆಸೆಯಾಯಿತು. ಆದರೆ ಅವಳು ಪಶ್ಚಾತ್ತಾಪಪಡುವ ಮೊದಲೇ, ತನ್ನಲ್ಲಿ ಕ್ಷಮೆ ಯಾಚಿಸುವ ಮೊದಲೇ ತಾನು ಜಗನ್ಮೋಹಿನಿಯ ಬಳಿಗೆ ಹೋಗಲು ರಾಯನ ಮನಸ್ಸು ಒಡಂಬಡಲಿಲ್ಲ. ಅವನು ಜಗನ್ಮೋಹಿನಿಗಾಗಿ ತನ್ನಲ್ಲೇ ಮಿಡುಕಿದನು ಅವಳಿಗೆ ಒಳ್ಳೆಯದಾಗಲೆಂದು ಪಂಪಾಪತಿಯನ್ನು ಬೇಡಿದನು.

ಅವನು ಜಗನ್ಮೋಹಿನಿಯ ಬಳಿಗೆ ಹೋಗದಿದ್ದರೂ, ಜಗನ್ಮೋಹಿನಿಯ ಆರೈಕೆಗೆ, ಔಷಧೋಪಚಾರಗಳಿಗೆ ರಾಜವೈದ್ಯರನ್ನು ಕೂಡಲೇ ಕಳುಹಿಸಿಕೊಟ್ಟನು.

ರಾಜವೈದ್ಯರು ಕುಂಭಂಗೆ ಬಂದುಹೋದಮೇಲೆ ಜಗನ್ಮೋಹಿನಿ ಕೊಂಚ ಗೆಲುವಾದಳು. ಅವರು ಮಾಡಿದ ಸಂತತವಾದ ಆರೈಕೆಯಿಂದ ಗುಣಹೊಂದಿದಳೋ ಅಥವಾ ಅವಳಿಗೆ ತನ್ನ ಗುರಿಯನ್ನು ಸಾಧಿಸುವ ಉಪಾಯ ಹೊಳೆದು ಗೆಲುವುಂಟಾಗಿ ಚೇತರಿಸಿಕೊಂಡಳೋ ಅಂತೂ ಜಗನ್ಮೋಹಿನಿ ಕೊಂಚ ದಿನಗಳಲ್ಲೇ ಚೇತರಿಸಿಕೊಂಡಳು. ಅವಳ ಮುಖದಲ್ಲಿ ಲವಲವಿಕೆ, ಜೀವನೋತ್ಸಾಹಗಳು ಮೂಡಿದವು.

ರಾಜವೈದ್ಯರು ಹಿಂದಿರುಗಿ ವಿಜಯನಗರಕ್ಕೆ ಬಂದಾಗ ಕೃಷ್ಣದೇವರಾಯನಿಗೆ ಒಂದು ಸಂತೋಷದ ಸುದ್ದಿಯನ್ನು ತಂದಿದ್ದರು. ಜಗನ್ಮೋಹಿನಿಯು ಕಾಹಿಲೆಯಿಂದ ಚೇತರಿಸಿಕೊಂಡಿರುವಳೆಂಬ ಸುವಾರ್ತೆಯ ಜತೆಗೆ ಜಗನ್ಮೋಹಿನಿಯು ತನ್ನ ಅಕೃತ್ಯಕ್ಕಾಗಿ ತುಂಬಾ ಪಶ್ಚಾತ್ತಾಪಪಟ್ಟಿರುವಳೆಂಬ ವಾರ್ತೆಯನ್ನೂ ತಂದಿದ್ದರು. ಈ ವಾರ್ತೆಯನ್ನು ಕೇಳಿ ಕೃಷ್ಣದೇವರಾಯನಿಗಾದ ಸಂತೋಷ ಅಷ್ಟಿಷ್ಟಲ್ಲ !

## ೨೪

ರಾಜವೈದ್ಯರು ಕೃಷ್ಣದೇವರಾಯನನ್ನು ಕಂಡು ಜಗನ್ಮೋಹಿನಿಯ ಎಲ್ಲ ವೃತ್ತಾಂತವನ್ನು ಸವಿಸ್ತಾರವಾಗಿ ಹೇಳಿ ಅವಳು ತಮ್ಮಕೈಗೆ ಕೊಟ್ಟದ್ದ ಒಂದು ಪತ್ರವನ್ನು ಕೃಷ್ಣದೇವರಾಯನಿಗೆ ತಲುಪಿಸಿದರು.

ಕೃಷ್ಣದೇವರಾಯನಿಗೆ ಆ ಪತ್ರವನ್ನು ಓದಿಕೊಂಡು ಸಂತೋಷದಿಂದ ಮುಖವರಳಿತು.

ಆ ಪತ್ರದಲ್ಲಿ ಜಗನ್ಮೋಹಿನಿ ಹೀಗೆ ಬರೆದಿದ್ದಳು.

ನನ್ನ ಹೃದಯೇಶ್ವರ,

ನಿರ್ಭಾಗ್ಯ ಜಗನ್ಮೋಹಿನಿ ಮಾಡುವ ಅನೇಕ ನಮಸ್ಕಾರಗಳು. ನಾನು ಇಲ್ಲಿ ಕ್ಷೇಮದಿಂದ ಇದ್ದೇನೆ. ತಮ್ಮ ಕ್ಷೇಮಸಮಾಚರಕ್ಕಾಗಿ ಚಾತಕಪಕ್ಷಿಯಂತೆ ಕಾಯುತ್ತಿದ್ದೇನೆ.

ಇದು ತಮಗೆ ನಾನು ಬರೆಯುತ್ತಿರುವ ಪ್ರಥಮಪತ್ರ. ಅದೂ ಬಹಳ ದಿವಸಗಳಮೇಲೆ ಬರೆಯುತ್ತಿರುವ ಪತ್ರ ಇದು ಪ್ರಣಯಪತ್ರವಲ್ಲ. ಪಶ್ಚಾತ್ತಾಪದಿಂದ ದಗ್ಧಳಾಗಿರುವ ವಿರಹಿಣಿಯ ಪತ್ರ. ಹೃದಯಾಂತರಾಳದಿಂದ ಮಾಡಿಕೊಳ್ಳುತ್ತಿರುವ ನಿವೇದನೆ. ತಾವು ಮಹಾನುಭಾವರು, ದೇವತಾತ್ಮರು. ತಮ್ಮನ್ನು ಎಲ್ಲರೂ ಮಹಾ ಭಾಗವತರೆಂದು ತಿಳಿದಿದ್ದಾರೆ. ಆದರೆ ಈ ನತದೃಷ್ಟೆಗೆ ಈ ವಿಷಯವನ್ನು ತಿಳಿದುಕೊಳ್ಳಲು ಇಷ್ಟೊಂದು ಅವಧಿ ಬೇಕಾಯಿತು. ನಾನು ಪರಮಪಾಪಿ. ಪರದೈವಸ್ವರೂಪರಾದ ತಮ್ಮಮೇಲೆ ವಿನಾಕಾರಣವಾಗಿ ಕೈಮಾಡಲೆತ್ನಿಸಿದೆ. ಆದರೂ ನೀವು

ದಯಾಮಯರು. ನನ್ನನ್ನು ಕ್ರೂರವಾಗಿ ಶಿಕ್ಷಿಸದೆ ಕ್ಷಮಿಸಿದ್ದೀರಿ. ನನ್ನನ್ನು ಉಗ್ರವಾಗಿ ದಂಡಿಸುವ ಬದಲು ನನ್ನಮೇಲೆ ಪ್ರೀತಿಯ ಮಳೆಗರೆದಿದ್ದೀರಿ. ನನ್ನನ್ನು ಸೌಜನ್ಯದಿಂದ ಬಂಧಿಸಿದ್ದೀರಿ. ನನ್ನ ವಿಷಯವಾಗಿ ನಿಮಗಿರುವ ಪ್ರೀತಿ ವಿಶ್ವಾಸಗಳನ್ನು ನೆನೆದರೆ ಅದಕ್ಕೆ ನಾನು ಅರ್ಹಳಲ್ಲವೆಂದೆನಿಸುತ್ತದೆ. ಆದರೂ ನನ್ನನ್ನು ನೀವು ಪ್ರೀತಿಯಿಂದ ನೋಡಿದಿರಿ. ಮಹಾರಾಣಿಯಂತೆ ಗೌರವದಿಂದ ನಡೆಸಿಕೊಂಡಿರಿ. ತಮ್ಮ ಈ ಪ್ರೀತಿ ವಿಶ್ವಾಸಗಳಿಗೆ ನಾನೆಷ್ಟು ಋಣಿಯಾಗಿದ್ದರೂ ಸಾಲದು. ಇದು ನನ್ನಮೇಲೆ ಹೊರಿಸಿರುವ ದೊಡ್ಡ ಹೊರೆ. ಈ ಗೌರವಕ್ಕೆ ನಾನು ಪಾತ್ರಳಲ್ಲ. ನಾನೊಬ್ಬಳು ಪತಿತೆ. ಪತಿಯಮೇಲೆ ಸೇಡು ತೀರಿಸಿಕೊಳ್ಳಲು ಹೊರಟ ಕುಲಟೆ. ನನ್ನ ವಿಶ್ವಾಸ ಘಾತುಕತನವನ್ನೂ, ನೀಚತನವನ್ನೂ ಅರಿತರೂ ನನ್ನಮೇಲೆ ಅನುಗ್ರಹಿಸಿದ್ದೀರಿ. ತಮ್ಮ ಅನುಗ್ರಹಕ್ಕೆ ನಾನು ಸರ್ವಥಾ ಬಾಧ್ಯಳಲ್ಲ. ನಾನು ನಿಮಗೆ ಮಾಡಿರುವ ಅಪಕಾರಕ್ಕೆ ವಿಧಿಸುವ ಶಿಕ್ಷೆ ಇದ್ದಲ್ಲ. ನಾಮಾಡಿದ ಪಾಪಕ್ಕೆ ನನ್ನನ್ನು ಉರಿಯುವ ಬೆಂಕಿಯಲ್ಲಿ ನೂಕಬೇಕು, ಕುದಿಯುವ ಎಣ್ಣೆಯಲ್ಲಿ ಹಾಕಬೇಕು. ಜೀವಂತ ಚರ್ಮ ಸುಲಿಸಿ ಚಿತ್ರಹಿಂಸೆ ಕೊಟ್ಟು ಕೊಲ್ಲಿಸಬೇಕು. ನೀವು ಈ ಶಿಕ್ಷೆಗಳನ್ನು ವಿಧಿಸಿದ್ದರೆ ನನಗೆ ತುಂಬಾ ಸಂತೋಷವಾಗುತ್ತಿತ್ತು. ನನ್ನ ಮಹಾಪರಾಧಕ್ಕೆ ತಕ್ಕ ಶಿಕ್ಷೆ ದೊರೆಯಿತೆಂದು ಸಮಾಧಾನವುಂಟಾಗುತ್ತಿತ್ತು. ಆದರೆ ನೀವು ನನ್ನಮೇಲೆ ಕುಪಿತರಾಗುವ ಬದಲು ಕೃಪೆ ತೋರಿದ್ದೀರಿ. ಶಿಕ್ಷಿಸುವ ಬದಲು ಅನುಗ್ರಹ ತೋರಿದ್ದೀರಿ. ತಮ್ಮ ಈ ಕೃಪೆ, ಅನುಗ್ರಹಗಳು ನನ್ನನ್ನು ಶಿಕ್ಷಿಸಿದ್ದರೆ ಉಂಟಾಗುತ್ತಿದ್ದ ಯಾತನೆಗಿಂತಲೂ, ಅತಿಶಯವಾದ ಯಾತನೆಯನ್ನುಂಟು ಮಾಡುತ್ತಿವೆ. ನಾನು ಸಾಯದೆ ಬದುಕಿ, ನಿಮ್ಮ ಪ್ರೀತಿ ವಿಶ್ವಾಸಗಳಿಂದ, ಕೃಪೆ ಅನುಗ್ರಹಗಳಿಂದ ಬಿಗಿಸಲ್ಪಟ್ಟದ್ದೇನೆ. ಈ ಸ್ವರ್ಣಸಂಕೋಲೆಗಳು ನನಗೆ ತುಂಬಾ ಯಾತನೆಯನ್ನುಂಟುಮಾಡುತ್ತವೆ. ನೀವು ಇನ್ನಾದರೂ ನನ್ನನ್ನು ಈ ಯಾತನೆಯಿಂದ ಪಾರುಮಾಡಬೇಕು. ನನ್ನ ಹಿಂದಿನ ದುಷ್ಕಾರ್ಯಕ್ಕಾಗಿ ಕ್ರೂರವಾಗಿ ಶಿಕ್ಷಿಸಿ, ಆ ಮೂಲಕ ನನ್ನ ಜೀವವನ್ನು ಈ ದೈಹಿಕ ಯಾತನೆಗಳಿಂದ ಬಿಡುಗಡೆ ಮಾಡಬೇಕು. ನನ್ನ ಈ ಪ್ರಾರ್ಥನೆಯನ್ನು ನೀವು ಈಡೇರಿಸಿಕೊಡಬೇಕು.

ಈ ಪತ್ರ ನಿಮ್ಮ ಕೈಸೇರಿದನಂತರ ಈ ಹತಭಾಗಿನಿಗೆ ಒಮ್ಮೆ ಸಂದರ್ಶನ ಲಾಭ ಕೊಟ್ಟರೆ, ನನ್ನಕಡೆಯ ಅಭೀಷ್ಟ ಈಡೇರಿತೆಂದು ಸಂತೋಷದಿಂದ ಸಾಯಲು ಸಿದ್ಧಳಾಗುತ್ತೇನೆ.

ನಾನು ಇದೇ ಕಾರ್ತಿಕಮಾಸದಲ್ಲಿ ಮಹಾ ತುಳಸಿಯ ಪೂಜೆಯನ್ನು ಮಾಡಲು ನಿಶ್ಚಯಿಸಿದ್ದೇನೆ. ನನ್ನೆಲ್ಲಾ ಪಾಪಗಳ ಪರಿಹಾರಾರ್ಥವಾಗಿ ತಾವು ಆ ವೇಳೆಗೆ ತಪ್ಪದೆ ದಯಮಾಡಿಸಿ, ನನ್ನ ಮನೋರಥವನ್ನು ಈಡೇರಿಸಿ ನನ್ನ ಮನಸ್ಸನ್ನು ಸಂತೋಷಗೊಳಿಸಬೇಕೆಂದು ಬೇಡುತ್ತೇನೆ. ನಿಮ್ಮಲ್ಲಿ ಆಪ್ತವಾಗಿ ಮಾತನಾಡುವ ಅನೇಕ ಸಂಗತಿಗಳಿವೆ. ಅವುಗಳನ್ನೆಲ್ಲಾ ಪತ್ರದಲ್ಲಿ ಬರೆದಿಲ್ಲ. ನೀವು ಒಬ್ಬರೇ ಇಲ್ಲಿಗೆ ಬಂದರೆ ನನಗೆ ತುಂಬಾ ಸಂತೋಷವಾಗುತ್ತದೆ.

ನನ್ನ ಕೋರಿಕೆಯನ್ನು ಈಡೇರಿಸುವಿರೆಂದು ನಂಬಿರುತ್ತೇನೆ.

ಇಂತು ನಿಮ್ಮ ಚರಣದಾಸಿ,
ನಿರ್ಭಾಗ್ಯ ಜಗನ್ಮೋಹಿನಿ.

ಈ ಪತ್ರವನ್ನು ಓದಿಕೊಂಡು ಕೃಷ್ಣದೇವರಾಯನ ಕಣ್ಣುಗಳಲ್ಲಿ ನೀರೂರಿದವು. ಜಗನ್ಮೋಹಿನಿಯು ತನ್ನ ದುಷ್ಕೃತ್ಯಕ್ಕಾಗಿ ನಿಜವಾಗಿಯೂ ಪಶ್ಚಾತ್ತಾಪಪಟ್ಟಿರುವಳೆಂಬುದಕ್ಕೆ ಅವಳ ಈ ಪತ್ರವೇ ಸಾಕ್ಷಿ. ಈ ಮೊದಲೇ ಪಶ್ಚಾತ್ತಾಪ ಉಂಟಾಗಿದ್ದರೂ ಪತ್ರ ಬರೆದು ತಪ್ಪನ್ನೊಪ್ಪಿ ಕೊಳ್ಳಲು ತನ್ನ ಆತ್ಮಾಭಿಮಾನ ಅಡ್ಡಬಂದಿರಬೇಕು. ಈಗ ತನ್ನ ಅಂತ ರಂಗವನ್ನೆಲ್ಲಾ ಪತ್ರದ ಮೂಲಕ ಬಿಚ್ಚಿಟ್ಟಿದ್ದಾಳೆ. ಅವಳ ಕೋರಿಕೆಯಂತೆ ಮಹಾ ತುಳಸಿಪೂಜೆಯ ಉತ್ಸವದ ವೇಳೆಗೆ ತಾನು ಕುಂಭಂಗ್ರಾಮಕೆ ಹೋಗಿ ದರ್ಶನ ಕೊಡಬೇಕು- ಅವಳನ್ನು ಸಂತೈಸಿ ಸಮಾಧಾನ ಹೇಳ ಬೇಕು. ಬರುವಾಗ ಅವಳನ್ನು ಜೊತೆಯಲ್ಲಿ ಕರೆತರಬೇಕು........ಎಂದೆಲ್ಲ ಆಲೋಚಿಸಿ, ಮತ್ತೊಮ್ಮೆ ಜಗನ್ಮೋಹಿನಿಯ ಪತ್ರವನ್ನು ಓದಿಕೊಂಡನು.

ಅಷ್ಟರಲ್ಲಿ ಈ ಪತ್ರಾಗಮನದ ವಾರ್ತೆಯನ್ನು ಕೇಳಿ ತಿಮ್ಮರಸನೂ ಅಲ್ಲಿಗೆ ಬಂದನು.

ಕೃಷ್ಣದೇವರಾಯನು ತಿಮ್ಮರಸನನ್ನು ವಿಶ್ವಾಸದಿಂದ ಬರಮಾಡಿಕೊಂಡು ಜಗನ್ಮೋಹಿನಿಯ ಪತ್ರವನ್ನು ಓದಲು ಕೊಟ್ಟನು. ತಿಮ್ಮರಸನು ಆ ಪತ್ರವನ್ನು ಕೈಗೆ ತೆಗೆದುಕೊಂಡು ಒಮ್ಮೆ ಕೂಲಂಕುಷವಾಗಿ ಓದಿ ಏನನ್ನೋ ಯೋಚಿಸುತ್ತಾ ಕುಳಿತನು.

ತಿಮ್ಮರಸನು ಕುಳಿತಿದ್ದ ಭಂಗಿಯಿಂದಲೇ ಅವನ ಮುಖದಲ್ಲಿ ಮೂಡಿದ್ದ ಅನುಮಾನದ ಗೆರೆಗಳನ್ನು ಗುರುತಿಸಿ ಕೃಷ್ಣದೇವರಾಯನು ನಸುನಕ್ಕು,

"ಮಹಾಮಂತ್ರಿಗಳು ಯೋಚನಾಕ್ರಾಂತರಾಗಿರುವಂತಿದೆ. ಕಾಗದದ ಒಕ್ಕಣೆಯ ವಾಕ್ಕು ನಿಮ್ಮ ಹೃದಯದ ಅಮೃತಕ್ಕೆ ಹುಳಿಹಿಂಡಿದಂತಿದೆಯಲ್ಲಾ. ತಿಳಿಯಪಡಿಸಿದರೆ ನಾವೂ ಭಾಗಿಗಳಾಗುತ್ತೇವೆ" ಎಂದು ಕೇಳಿದೆವು.

"ಹೃದಯಾಂತರಾಳಗಳ ಒಳಗುಟ್ಟನ್ನು ಮಹಾಪ್ರಭುಗಳು ಎಂದಿನಿಂದ ಅಭ್ಯಾಸಮಾಡಿಕೊಂಡಿರುವಿರೋ ತಿಳಿಯದಾಗಿದೆಯಲ್ಲಾ !"

—ವ್ಯಂಗ್ಯಹಾಸ್ಯಪೂರ್ಣವಾಗಿ ರಾಯನನ್ನು ಪ್ರಶ್ನಿಸಿದ.

"ಹೃದಯಕಾಸಾರ ಮುಖಮಂಡಲ ಬಿಂಬಿಸುತ್ತದೆ" ಎಂಬುದು ಪ್ರಾಜ್ಞರಾದ ಮಂತ್ರಿಗಳಿಗೆ ತಿಳಿದ ಅಂಶವಲ್ಲವೇ ?"

—ಅವನ ಜಾಣ್ಮೆಗೆ ಮೆಚ್ಚಿ ತಲೆದೂಗಿ, ತಾನೇನೂ ಉತ್ತರವನ್ನು ಬಾಯಿಬಿಟ್ಟು ಹೇಳದಿದ್ದರೂ ಮಾತಿನಲ್ಲೇ ಮೂಡಿಸಿ ಮೆಚ್ಚಿಸಿದ್ದ ತಿಮ್ಮರಸನನ್ನು.

"ಇಷ್ಟು ಪ್ರಾಜ್ಞರಾಗಿರುವ ಮಹಾಪ್ರಭುಗಳಿಗೆ ಪತ್ರದಲ್ಲಿರುವ ಒಡಕು ಶಬ್ದವೂ ಅರಿವಾಗಬಹುದು. ಅರಿವಾಗಿರಲಿ, ಇಲ್ಲದಿರಲಿ ಸೇವಕನ ಕರ್ತವ್ಯ ನಿರ್ವಹಿಸಲೇಬೇಕು. ಎಂತಲೇ ಸನ್ನಿಧಾನದಲ್ಲಿ ಅರಿಕೆಮಾಡುತ್ತೇನೆ—ಅನುಭವಾಮೃತದ ನುಡಿಗಳನ್ನು ಎಂದು ತಿಳಿಸಿದ.

ಹೊರಜಾಗಗಳಲ್ಲಿ ಪ್ರಮತಃ ಊಟಪಾನಾದಿಗಳ ಮುಂಚೆ ಕಾಗೆ ಹದ್ದುಗಳಿಗೆ ಅನ್ನವನ್ನೆರಚಿ ಊಟಪಾನಾದಿಗಳನ್ನು ರಾಜರು ಮಾಡಬೇಕು. ಆಸನಾರೂಢನಾಗುವ ಮುನ್ನ ಕೋಲೂರಿ ಕೂರಬೇಕು—ಇತ್ಯಾದಿ.

—ಎಂದು ಸೂಕ್ಷ್ಮವಾಗಿ ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸಿ, ಮುನ್ಸೂಚಿಯಾಗಿ ತನ್ನ ಅಭಿಪ್ರಾಯವನ್ನು ಮಂಡಿಸಿದ್ದ.

"ಹಾಗಾದರೆ ಊಟ ಪಾನಾದಿಗಳಲ್ಲಿ ಜಾಗರೂಕರಾಗಿರಬೇಕೆಂಬುದೆ ನಮ್ಮ ಅಭಿಪ್ರಾಯ."

ತಿಮ್ಮರಸನ ಇಂಗಿತವನ್ನರಿತು ತನ್ನ ಸೂಕ್ಷ್ಮತೆ ಜಾಣ್ಮೆಗಳನು ಪ್ರದರ್ಶಿಸಿದ್ದ ರಾಯ.

"ಮಹಾ ಪ್ರಭುಗಳಿಗೆ ತಿಳಿಸಬೇಕೆ? ದಯಮಾಡಿ ಇನ್ನು ಹೋಗಿ ಬರಲು ಅಡ್ಡಿಯಿಲ್ಲ. ಇನ್ನು ಪ್ರಭು ಇಚ್ಛೆ."

—ಎಂದು ತಿಳಿಸಿ ಹೃದಯವನ್ನು ಹಗುರ ಮಾಡಿಕೊಂಡು ರಾಯನಿಗೂ ಮುಂಜಾಗರೂಕತೆಯಾಗಿರುವಂತೆ ತಿಳಿಸಿ ನಿಶ್ಚಲನಾದ.

ರಾಯನೂ ಪ್ರಜ್ಞಾವಂತನಾಗಿಯೇ ಜಗನ್ಮೋಹಿನಿಯ ಅಭೀಷ್ಟವನ್ನೀಡೇರಿಸಲು ಹೊರಟಿದ್ದ ತಿಮ್ಮರಸನೊಡನೆ.

ಉತ್ಸವದ ವೇಳೆಗೆ ಕುಂಭಂ ಗ್ರಾಮವನ್ನು ಮುಟ್ಟಲು ಕೃಷ್ಣದೇವರಾಯ ಹಾಗೂ ತಿಮ್ಮರಸರು ಕುದುರೆಗಳನ್ನೇರಿ ಹೊರಟರು. ಅವರು ಎಲ್ಲೂ ನಿಲ್ಲದೆ ಪ್ರಯಾಣಮಾಡಿದರೂ, ಕಾರಣಾಂತರದಿಂದ ತಡವಾಗಿ, ಅವರು ಕಾರ್ತಿಕ ಶುದ್ಧ ದ್ವಾದಶಿಯ ರಾತ್ರಿಗೆ ಕುಂಭಂ ಗ್ರಾಮವನ್ನು ತಲುಪಿದರು.

ಪೂಜೆಯ ಗಡಿಬಿಡಿಯಲ್ಲಿದ್ದ ಜಗನ್ಮೋಹಿನಿ ದೂರದಿಂದ ದಣಿದು ಬಂದಿದ್ದ ಅವರನ್ನು ವಿಶ್ವಾಸದಿಂದ ಬರಮಾಡಿಕೊಂಡು, ಕುಶಲಪ್ರಶ್ನೆ ಮಾಡಿ, ವಿಶ್ರಮಿಸಿಕೊಳ್ಳಲು ಹೇಳಿ, ತಾನು ಪೂಜೆಯನ್ನು ಮುಗಿಸಿಕೊಂಡು ಮತ್ತೆ ಬಂದು ಕಾಣುವುದಾಗಿ ಹೇಳಿ, ಪುರೋಹಿತರೊಂದಿಗೆ ಮಹಾತುಳಸಿಯ ಪೂಜೆಗೆ ಹೊರಟಳು. ಪೂಜೆಯಲ್ಲಿ ಯಾಕೋ ಜಗನ್ಮೋಹಿನಿಗೆ ಏಕಾಗ್ರಚಿತ್ತತೆಯಿರಲಿಲ್ಲ. ತಾನು ಕೃಷ್ಣದೇವರಾಯನೊಬ್ಬನನ್ನೇ ಬರಲು ಹೇಳಿದ್ದರೂ, ಜತೆಯಲ್ಲಿ ತಿಮ್ಮರಸನು ಬಂದುದನ್ನು ನೋಡಿ ಅವಳ ಮನಶ್ಶಾಂತಿ ಕದಡಿತ್ತು. ಅವಳು ಅನ್ಯಮನಸ್ಕಳಾಗಿ, ಪೂಜೆಯ ಸಂಬಂಧದಲ್ಲಿ ಮಾಡಬೇಕಾಗಿದ್ದ ದಾನ ಧರ್ಮಗಳನ್ನು ಮಾಡಿ ಮುಗಿಸಿ, ತನ್ನ ಅತಿಥಿಗಳನ್ನು ವಿಚಾರಿಸಿಕೊಳ್ಳಲು ಹೊರಟಳು.

ಪೂಜೆಯೆಲ್ಲಾ ಮುಗಿದು, ಜಗನ್ಮೋಹಿನಿ ಕೃಷ್ಣದೇವರಾಯನನ್ನು ಕಾಣುವಹೊತ್ತಿಗೆ ರಾತ್ರಿ ಸುಮಾರು ಹತ್ತುಗಂಟೆಯಾಗಿತ್ತು.

ಚಂದಿರನ ಜೊನ್ನ ಬೆಳಕು ಎಲ್ಲೆಲ್ಲೂ ಹಿಟ್ಟುಚಲ್ಲಿದಂತೆ ಆಹ್ಲಾದಕರವಾಗಿತ್ತು. ಬೆಳದಿಂಗಳ ಸೊಬಗನ್ನು ಸವಿಯುತ್ತಾ, ತಂಗಾಳಿಗೆ ಮೈಒಡ್ಡಿ, ಜಗನ್ಮೋಹಿನಿಗಾಗಿ ಕಾದು ಕುಳಿತಿದ್ದ ಕೃಷ್ಣದೇವರಾಯನು ತುಂಬಾ ಉಲ್ಲಾಸದಿಂದ ಇದ್ದನು.

ಜಗನ್ಮೋಹಿನಿಯು ಕೃಷ್ಣದೇವರಾಯನ ಸನಿಯದಲ್ಲಿ ಇದ್ದ ಆಸನದಲ್ಲಿ ಕುಳಿತುಕೊಂಡು, ಕೃಷ್ಣದೇವರಾಯನ ಮುಖವನ್ನು ನೋಡಿ ಮುಗುಳ್ನಗೆ ನಕ್ಕಳು. ಚಂದ್ರಮುಖಿಯ ಆ ಮುಗುಳ್ನಗೆ ಬೆಳದಿಂಗಳಷ್ಟೇ ಆಹ್ಲಾದಕರವಾಗಿ ತೋರಿತು ಕೃಷ್ಣದೇವರಾಯನಿಗೆ. ಅವನಿಗೆ ಮೈ ರೋಮಾಂಚಕೊಂಡಿತು—ಜಗನ್ಮೋಹಿನಿಯ ಸಾಮೀಪ್ಯ ಸುಖದಲ್ಲಿ.

"ಪೂಜೆಯಿಂದ ತುಂಬಾ ದಣಿದಿರಬೇಕು. ಕೊಂಚ ಊಟಮಾಡಿ ಬರಬಾರದೆ?" ಎಂದು ಕೃಷ್ಣದೇವರಾಯನು ಪ್ರೀತಿಯಿಂದ ಹೇಳಿದನು.

"ಪೂಜೆಯಾದನಂತರ ಊಟಮಾಡಿದರೆ ಪೂಜೆಯ ಫಲ ದೊರೆಯುವುದಿಲ್ಲವಂತೆ!"

"ಹಾಗಾದರೆ ಇಂದು ನಿನಗೆ ಸಂಪೂರ್ಣ ಉಪವಾಸವೇ?"

"ಇಲ್ಲ—ಕೊಂಚ ಹಾಲು ಹಣ್ಣುಗಳನ್ನು ಸೇವಿಸುತ್ತೇನೆ. ಹೇಗೂ ನೀವು ಬಂದಿದ್ದೀರಿ. ನನ್ನಭಾಗದ ದೇವತೆ ಬಂದಂತೆ ಬಂದಿದ್ದೀರಿ. ನಿಮ್ಮೊಂದಿಗೆ ಫಲಹಾರಮಾಡೋಣವೆಂದು ನಾನು ಸಂಜೆಯಿಂದ ಏನನ್ನೂ ತೆಗೆದುಕೊಳ್ಳಲಿಲ್ಲ." ಎಂದು ಹೇಳಿ ನಕ್ಕಳು.

ಈ ಮಾತು ಕೇಳಿ ರಾಯನ ಹೃದಯ ಹೂವಿನಂತೆ ಅರಳಿತು. ಅವಳ ಒಂದೊಂದುಮಾತಿನಲ್ಲೂ ತನ್ನ ಬಗೆಗೆ ಅವಳಿಗಿರುವ ಪ್ರೇಮ ತೊಟ್ಟಿಕ್ಕುತ್ತಿರುವಂತೆ ರಾಯನಿಗೆ ಭಾಸವಾಯಿತು. ಅವನು ಕನಸಿನ ಸೀಮೆಯಲ್ಲಿ ವಿಹರಿಸುತ್ತಾ, ಆ ಸೌಂದರ್ಯ ನಿಧಿಯನ್ನೇ ನೋಡುತ್ತಾ ಕುಳಿತುಕೊಂಡನು

ಜಗನ್ಮೋಹಿನಿಯ ಸಂಜ್ಞೆಯಂತೆ ದಾಸಿ ಚಿನ್ನದ ತಟ್ಟೆಗಳಲ್ಲಿ ಅನೇಕ ಬಗೆಯ ಹಣ್ಣುಗಳನ್ನೂ, ಭಕ್ಷ್ಯಭೋಜ್ಯಗರನ್ನು ತಂದು ರಾಯನಮುಂದೆ

ಇರಿಸಿದಳು. ಆ ಪಕ್ವ ಫಲಗಳನ್ನು ತೆಗೆದುಕೊಳ್ಳಲು ರಾಯನನ್ನು ಆಗ್ರಹ ಪಡಿಸುತ್ತಾ, ಒಂದೊಂದನ್ನೇ ತೆಗೆದುಕೊಂಡು ಅವುಗಳನ್ನು ಬಿಡಿಸಿ, ರಾಯನಕೈಗೆ ಕೊಡುತ್ತಾ ಹೋದಳು ಪ್ರಿಯತಮೆಯ ಕೈಸೋಂಕಿನಿಂದಲೇ ಪುಳಕಗೊಳ್ಳುತ್ತಿದ್ದ ರಾಯನಿಗೆ ಅವಳು ಕೊಡುತ್ತಿದ್ದ ಫಲಗಳು ಕಲ್ಪ ವೃಕ್ಷದ ಫಲಗಳೆಂಬಂತೆ ಸವಿಯಾಗಿದ್ದವು. ಫಲಹಾರ ಸೇವಿಸಿದನಂತರ ಕೇಸರಿ ಸಕ್ಕರೆಗಳನ್ನು ಹಾಕಿ ಚನ್ನಾಗಿ ಕಾಸಿದ್ದ ಹಸುವಿನ ಹಾಲನ್ನು ಸುವರ್ಣಪಾತ್ರೆಗಳಲ್ಲಿ ಹಾಕಿ ಕುಡಿಯಲು ಇತ್ತಳು—ಜಗನ್ಮೋಹಿನಿ.

ಕೃಷ್ಣದೇವರಾಯನು ಆ ಹಾಲಿನ ಬಟ್ಟಲನ್ನು ಇನ್ನೇನು ಎತ್ತಿಕೊಂಡು ಕುಡಿಯಬೇಕು ಎನ್ನುವುದರಲ್ಲಿ ತಟ್ಟನೆ ತಿಮ್ಮರಸನು ಹೇಳಿದ್ದ ಎಚ್ಚರಿಕೆಯ ಮಾತು ನೆನಪಾಗಿ ಹಾಗೆಯೇ ಲೋಟವನ್ನು ಕೆಳಕ್ಕಿಳಿಸಿದನು. ಅದನ್ನು ಕಂಡು ಜಗನ್ಮೋಹಿನಿಗೆ ವಿಸ್ಮಯವಾಯಿತು. ಏಕೋ ಅವಳ ಮೈ ಬೆವರಿತು, ಧ್ವನಿ ಕಂಪಿಸಿತು. ಉಸಿರು ಸಿಕ್ಕಿಕೊಂಡ ಅನುಭವ ವಾಯಿತು. ಅವಳು ನಾಲಗೆಯನ್ನು ತೇವಮಾಡಿಕೊಳ್ಳುತ್ತಾ ಹೇಳಿದಳು.

"ಏಕೆ ಪ್ರಭು ? ಹಾಲು ತುಂಬಾ ಬಿಸಿಯಾಗಿದೆಯೇ ?"

"ಇಲ್ಲ" ಎಂದು ಹೇಳಿದ ಕೃಷ್ಣದೇವರಾಯ ಅನ್ಯಮನಸ್ಕನಾಗಿ.

"ಹಾಗಾದರೆ ಏಕೆ ಹಾಲು ಕುಡಿಯದೆ ಹಾಗೆ ಯೋಚಿಸುತ್ತಾ ಕುಳಿತಿರಿ ?"

"ಏನೋ ಜ್ಞಾಪಕಕ್ಕೆ ಬಂದಿತು !"

"ಏನು ಜ್ಞಾಪಕಕ್ಕೆ ಬಂತು ?"

"ತಿಮ್ಮರಸನು ಹಿಂದೊಮ್ಮೆ ಹೇಳಿದ್ದ ಮಾತೊಂದು ನೆನಪಾಯಿತು ಅಷ್ಟೆ."

"ಏನು ಮಾತು ಅದು ?"

"ಅವರು ಪರಸ್ಥಳದಲ್ಲಿ ಏನನ್ನೂ ಪರೀಕ್ಷಿಸದೆ ಒಮ್ಮೆಲೇ ಕುಡಿಯ ಬಾರದು, ತಿನ್ನಬಾರದು" ಎಂದು ಹೇಳಿದ್ದನು. ತಟ್ಟನೆ ಆ ಮಾತು ನನಪಿಗೆ ಬಂತು, ಅಷ್ಟೆ !

ಈ ಮಾತು ಕೇಳಿ ಜಗನ್ಮೋಹಿನಿಗೆ ಮೈ ಬೆವರಿತು. ಅವಳು ಹೆದರಿದ ಹರಿಣಿಯಂತೆ ಬೆದರಿದಳು.

"ಹೌದು ಪರಸ್ಥಳದಲ್ಲಿ ಮುಖ್ಯವಾಗಿ ಶತ್ರು ರಾಜ್ಯದಲ್ಲಿ ಇದ್ದಾಗ ಹೀಗೆ ಮಾಡುವುದು ಉತ್ತಮ ರಾಜಧರ್ಮ" ಎಂದು ಹೇಳಿ ನಕ್ಕಳು.

ಇಷ್ಟಾದರೂ ಕೃಷ್ಣದೇವರಾಯನು ಹಾಲನ್ನು ಕುಡಿಯಲಿಲ್ಲ.

"ಏಕೆ ಇನ್ನೂ ಅನುಮಾನವೇ?" ಎಂದಳು.

"ನಿಮಗೆ ಕುಡಿಯಲು ಅನುಮಾನವಾದರೆ ಕುಡಿಯಬೇಡಿ. ಆದರೆ, ಹಾಲು ತುಳಸೀದೇವಿಗೆ ಮಾಡಿದ ನೈವೇದ್ಯ ಎಂತಲೇ ನಿಮಗೆ ಕುಡಿಯಲು ಇಷ್ಟು ಬಲವಂತಪಡಿಸುತ್ತಿರುವುದು!" ಎಂದು ಹೇಳಿದಳು.

ಕೃಷ್ಣದೇವರಾಯನು ಈಗ ಧರ್ಮಸಂಕಟಕ್ಕೆ ಬಿದ್ದನು. ಈ ಹಾಲನ್ನು ಪರೀಕ್ಷಿಸಿ ಕುಡಿಯಬೇಕೆ? ಹಾಗೇ ಕುಡಿಯಬೇಕೆ? ತಿಮ್ಮರಸನ ಹೇಳಿಕೆ ಶತ್ರು ರಾಜ್ಯದಲ್ಲಿ ಅನ್ವಯಿಸುತ್ತದೆ. ಜಗನ್ಮೋಹಿನಿಗೆ ಅನ್ವಯಿಸುವ ಮಾತಲ್ಲ ಅದು. ಇದರಲ್ಲಿ ಯಾವ ಮೋಸವೂ ಇಲ್ಲ. ದೇವಿಯ ಪ್ರಸಾದ ಕೊಟ್ಟಾಗ ತಿರಸ್ಕರಿಸಬಾರದು. ಇದು ಸಭ್ಯತನವೂ ಅಲ್ಲ, ಶ್ರೇಯಸ್ಕರವೂ ಅಲ್ಲ ಎಂದು ಆಲೋಚಿಸಿ ಇನ್ನೇನು ಕುಡಿಯಬೇಕೆಂದು ಲೋಟವನ್ನು ತುಟಿಯ ಹತ್ತಿರಕ್ಕೆ ತಂದನು. ಅಷ್ಟರಲ್ಲಿ ತಿಮ್ಮರಸನ ವಾಣಿ ಕಿವಿಯಲ್ಲಿ ಮೊಳಗಿದಂತೆಯಾಗಿ ಅದನ್ನು ಕೆಳಕ್ಕೆ ಇಳಿಸಿದನು.

ಇದನ್ನು ಕಂಡು ಜಗನ್ಮೋಹಿನಿಗೆ ತುಂಬಾ ಅಸಮಾಧಾನವಾಯಿತು ಅವಳು ಸಿಟ್ಟುಗೆದ್ದು ಹೇಳಿದಳು.

"ಪ್ರಭು! ನಾನಿತ್ತ ಹಾಲಿನಲ್ಲಿ ವಿಷ ಬೆರತಿದೆಯೆಂದು ನಿಮಗೆ ಅನುಮಾನವಾದರೆ ಅದನ್ನು ಕುಡಿಯಬೇಡಿ.........ಅಂತೂ ನನ್ನ ಮಾತಿನಲ್ಲಿ ನಿಮಗೆ ನಂಬಿಕೆ ಬರಲಿಲ್ಲ ನಾನು ನಿಜವಾಗಿಯೂ ದುರ್ದೈವಿ. ಆದಿನ ನಾನು ತಿಳಿಗೇಡಿಯಾಗಿ, ದುಡುಕಿ, ಮಾಡಿದ ಆ ದುಷ್ಕೃತ್ಯದ ಪರಿಣಾಮ ಇದೆಲ್ಲಾ. ನಿಮಗೆ ನನ್ನಲ್ಲಿ—ನನ್ನ ನಡೆನುಡಿಗಳಲ್ಲಿ ನಂಬಿಕೆಯಿಲ್ಲ ನನಗೆ ಗೊತ್ತು. ಇದೇ ನನಗೆ ಸರಿಯಾದ ಶಿಕ್ಷೆ........ನಾನು ಏನುಮಾಡಿದರೂ ನಿಮಗೆ ನನ್ನ ಮಾತಿನಲ್ಲಿ ನಂಬಿಕೆ ಹುಟ್ಟುವುದಿಲ್ಲ. ಇದು ನನ್ನ ಕರ್ಮ! ಅನುಭವಿಸದೆ ವಿಧಿಯಿಲ್ಲ! ನನ್ನ ಹಿಂದಣ ದುಷ್ಕಾರ್ಯಕ್ಕಾಗಿ ನಾನೆಷ್ಟು ಪಶ್ಚಾತ್ತಾಪಪಟ್ಟರೂ ಜಗತ್ತಿಗೆ ನನ್ನಲ್ಲಿ ನಂಬಿಕೆ ಹುಟ್ಟುವುದಿಲ್ಲ. ಇನ್ನು ನಾನು ಬದುಕಿದ್ದು ಪ್ರಯೋಜನವೇನು? ನನ್ನಂತಹ ಪಾಪಿ ಇನ್ನು ಬದು

ಕಿರಬಾರದು. ನನ್ನಿಂದ ಯಾರಿಗೂ ಸುಖವಿಲ್ಲ........ನನ್ನ ಹೃದಯ ಪಶ್ಚಾತ್ತಾಪದಿಂದ ಪರಿಶುದ್ಧವಾಗಿದೆಯೆಂದು ನಂಬದಿದ್ದರೂ, ನನ್ನನ್ನು ನೋಡುವ ಸಲುವಾಗಿ ಇಲ್ಲಿಗೆ ಬಂದಿರಲ್ಲ, ಅಷ್ಟೇ ಸಾಕು. ನಾನು ಕೃತಾರ್ಥಳು........ನನಗೆ ಹೃದಯದಲ್ಲಿ ಸ್ಥಳ ಕೊಟ್ಟು ರಕ್ಷಿಸಬೇಕಾಗಿದ್ದ ನೀವೇ ನನ್ನನ್ನು ನಂಬದಿದ್ದ ಮೇಲೆ ಇನ್ನು ನನ್ನನ್ನು ಯಾರು ನಂಬುತ್ತಾರೆ? ನನ್ನನ್ನು ಯಾರು ರಕ್ಷಿಸುತ್ತಾರೆ?........ಎಲ್ಲರಿಗೂ ತೃಣವಾಗಿ ಬದುಕಿ ಪ್ರಯೋಜನವೇನು?........ನನಗೆ ಅಪ್ಪಣೆಕೊಡಿ ಹೋಗಿ ಗಂಗೆಯ ಪಾದ ಸೇರಿಕೊಳ್ಳುತ್ತೇನೆ." ಎಂದು ಆವೇಶಗೊಂಡು ಹೇಳಿದಳು.

ಅವಳಿಗೆ ರೋಷದಭರದಲ್ಲಿ ಕಣ್ಣಿನಲ್ಲಿ ನೀರುಬಂತು. ಗಳಗಳನೆ ಅತ್ತಳು ಮುಖವನ್ನು ಸೆರಗಿನಲ್ಲಿ ಮುಚ್ಚಿಕೊಂಡು. ಆ ನೋಟವನ್ನು ಕೃಷ್ಣದೇವ ರಾಯನಿಂದ ನೋಡಲು ಸಾಧ್ಯವಾಗದೆಹೋಯಿತು. ಅವನ ಹೃದಯ ಕಲಕಿತು ಜಗನ್ಮೋಹಿನಿಯ ಮಾತು ಕೇಳಿ. ಅವಳಬಗ್ಗೆ ಅಪಾರ ಕರುಣೆ ಉಂಟಾಯಿತು ಅವಳನ್ನು ಸಂತೈಸುವ ಮನವಾಯಿತು. ಅವಳ ಮಾತಿನಲ್ಲಿ ನಂಬಿಕೆಯುಂಟಾಗಿ ಅದನ್ನು ಕಾರ್ಯದಲ್ಲಿ ಮಾಡಿತೋರಿಸಲು, ಅವಳು ಕೊಟ್ಟಿದ್ದ ಹಾಲನ್ನು ಕುಡಿಯಲು ನಿಶ್ಚಯಿಸಿದನು.

ಇನ್ನೇನು ಅವನು ಹಾಲನ್ನು ಕುಡಿಯಬೇಕು ಅಷ್ಟರಲ್ಲಿ ಕೃಷ್ಣದೇವ ರಾಯನ ಕಿವಿಯಲ್ಲಿ ಯಾರೋ ಉಸುರಿದರು.

"ಪ್ರಭು! ಪರಸ್ಥಳದಲ್ಲಿ ಯಾವುದನ್ನೂ ಪರೀಕ್ಷಿಸದೆ ತಿನ್ನಬಾರದು ಕುಡಿಯಬಾರದು! "

ಕೃಷ್ಣದೇವರಾಯನು ಹಿಂದಿರುಗಿ ನೋಡಿದನು. ಬೆನ್ನಬಳಿಯಲ್ಲಿ ತಿಮ್ಮರಸನು ನಿಂತಿದ್ದನು, ನಸುನಗುತ್ತಾ !

"ಓ! ಅಪ್ಪಾಜಿಯವರು! ಇಲ್ಲಿಗೆ ಯಾವಾಗ ಬಂದಿರಿ?" ಎಂದು ಪ್ರಶ್ನಿಸಿದನು.

"ಇದೀಗತಾನೇ ಬರುತ್ತಿದ್ದೇನೆ ಪ್ರಭು"

"ಬನ್ನಿ ಕುಳಿತುಕೊಳ್ಳಿ !"

"ಪ್ರಭುಗಳು ಏಕಾಂತದಲ್ಲಿ ಇದ್ದೀರಿ. ನನ್ನಿಂದ ಅಪರಾಧವಾಗಿದ್ದರೆ ಕ್ಷಮಿಸಬೇಕು."

ಕೃಷ್ಣದೇವರಾಯನು ಮಾತನಾಡುವ ಮೊದಲೇ ಜಗನ್ಮೋಹಿನಿ ಸಹನೆ ಮೀರಿ ನುಡಿದಳು. ಅವಳಿಗೆ ತಿಮ್ಮರಸನನ್ನು ನೋಡುತ್ತಲೇ ಮೈಯೆಲ್ಲಾ ಉರಿಯಲು ಆರಂಭಿಸಿತ್ತು. ಅವಳು ಕೆರಳಿ ಹೇಳಿದಳು.

"ಹೌದು, ನಿಮ್ಮಿಂದ ನಮ್ಮ ಏಕಾಂತಕ್ಕೆ ಭಂಗ ಉಂಟಾಯಿತು. ತಮ್ಮನ್ನು ಇಲ್ಲಿಗೆ ಯಾರು ಬಿಟ್ಟರೋ ಕಾಣೆ."

"ನನ್ನಿಂದ ಮಹಾರಾಣಿಯವರ ಏಕಾಂತಕ್ಕೆ ಭಂಗ ಉಂಟಾಗಿದ್ದರೆ ದಯವಿಟ್ಟು ನನ್ನ ತಪ್ಪನ್ನು ಮನ್ನಿಸಬೇಕು. ನನ್ನನ್ನು ಇಲ್ಲಿ ಯಾರೂ ಬಿಡಲಿಲ್ಲ. ನಾನಾಗಿ ಬಂದೆ, ಬರಬೇಕಾಯಿತು—ಬಂದೆ."

" ಏಕೆ ? "

" ಪ್ರಭುಗಳ ಜೀವ ಗಂಡಾಂತರದಲ್ಲಿ ಬೀಳಬಹುದೆಂದು ! ಪ್ರಭುಗಳ ಜೀವಕ್ಕೆ ಗಂಡಾಂತರವೇ ? ಯಾರಿಂದ ಗಂಡಾಂತರ ? ಹೇಗೆ ಗಂಡಾಂತರ? ನಿಮಗೆ ಪ್ರಭುಗಳ ಬಗ್ಗೆ ಎಷ್ಟು ಆಸಕ್ತಿ ಇದೆಯೋ ನಮಗೂ ಅಷ್ಟೇ ಆಸಕ್ತಿ ಇದೆ. ಅಮಾತ್ಯರು ನನ್ನನ್ನು ಏನೆಂದು ತಿಳಿದರೋ ಕಾಣೆ. ನಾನು ನಿಮ್ಮ ಪ್ರಭುಗಳ ಧರ್ಮಪತ್ನಿ ಎಂಬುದನ್ನು ತಾವು ಮರೆಯಬಾರದು !"

ವಿಕಾರವಾಗಿ ಹೇಳಿದಳು ಜಗನ್ಮೋಹಿನಿ, ಮೂದಲಿಸುವಂತೆ.

"ಈ ವಿಷಯವನ್ನು ನಾನು ಮರೆತಿಲ್ಲ ಮಹಾರಾಣಿ !"

"ಹಾಗಾದರೆ ನನ್ನ ನಡತೆಯ ಬಗ್ಗೆ ಸಂಶಯ ತಳೆದಿರೇಕೆ ?"

"ಮಹಾರಾಣಿಯವರು ನನ್ನಮೇಲೆ ಅಕಾರಣವಾಗಿ ಕೋಪಗೊಂಡಿದ್ದೀರಿ. ನಾನು ಯಾರಮೇಲೂ ಸಂಶಯ ತಾಳಲಿಲ್ಲ !"

"ಹಾಗಾದರೆ ನನ್ನೊಡನೆ ಏಕಾಂತದಲ್ಲಿ ಇರುವ ಪ್ರಭುಗಳ ಜೀವಕ್ಕೆ ಯಾರು ಗಂಡಾಂತರ ತರುತ್ತಾರೆ ? ನೀವು ನನ್ನನ್ನು ಉದ್ದಿಶ್ಯಪೂರ್ವಕವಾಗಿ ಗುರಿಯಲ್ಲಿ ಇಟ್ಟುಕೊಂಡು ಆಡಿದ ಮಾತಲ್ಲವೇ ಇದು ?"

"ಹೌದು ಮಹಾರಾಣಿ !"

"ಏನು ? ನನ್ನೆದುರಿಗೇ ನನ್ನ ನಿಂದನೆಯೇ ?"

"ಇದ್ದ ಸಂಗತಿಯನ್ನು ಹೇಳಿದೆ ತಾಯಿ !"

"ಏನು ಇದ್ದ ಸಂಗತಿ ?"

"ಪ್ರಭುಗಳಿಗೆ ನೀವು ಕೊಟ್ಟಿರುವ ಹಾಲಿನಲ್ಲಿ ವಿಷ ಬೆರತಿದೆ !'

" ಏನು ಈ ಹಾಲಿನಲ್ಲಿ ವಿಷಬೆರತಿದೆಯೇ ? ನನ್ನಮೇಲೆ ಮಿಥ್ಯಾಪವಾದ ಹೊರಿಸಲು ನಿಮಗೆ ಅದೆಷ್ಟು ಧೈರ್ಯ !" ಎಂದು ಅತ್ತಳು ಸಿಟ್ಟಿನಿಂದ.

" ಮಿಥ್ಯಾರೂಪವಲ್ಲ ತಾಯಿ ಇದು ವಾಸ್ತವ ಸತ್ಯ. ಆ ಹಾಲನ್ನು ನನ್ನ ಕೈಗೆ ಕೊಡಿ, ಅದರಲ್ಲಿ ವಿಷಬೆರತಿದೆಯೋ ಇಲ್ಲವೋ ಸಿದ್ಧಪಡಿಸಿ ತೋರಿಸುತ್ತೇನೆ ! " ಎಂದು ಹಾಲಿನ ಬಟ್ಟಲನ್ನು ಕೃಷ್ಣದೇವರಾಯನ ಕೈಯಿಂದ ಕಿತ್ತುಕೊಳ್ಳಲೆತ್ನಿಸಿದನು.

" ಆ ಹಾಲಿನ ಬಟ್ಟಲನ್ನು ಈ ಧೂರ್ತನಿಗೆ ಕೊಡಬೇಡಿ ! " ಎಂದು ಹೇಳುತ್ತಾ, ಕೃಷ್ಣದೇವರಾಯನಕೈಯಿಂದ ತಾನೇ ಕಿತ್ತುಕೊಳ್ಳಲೆತ್ನಿಸಿದಳು. ಅವಳ ಉದ್ದಿಶ್ಯ ಲೋಟವನ್ನು ಕಿತ್ತುಕೊಳ್ಳುವ ನೆಪದಲ್ಲಿ ಹಾಲನ್ನು ಚಲ್ಲಬೇಕೆಂಬುದೇ ಆಗಿತ್ತು. ಆದರೆ ಅವಳು ಹಾಲಿನ ಬಟ್ಟಲಿಗೆ ಕೈಹಾಕುವ ಮೊದಲೆ ಅದು ತಿಮ್ಮರಸನ ಕೈಯ್ಯಲ್ಲಿತ್ತು.

ಜಗನ್ಮೋಹಿನಿ ಹತಾಶಳಾಗಿ, ತಿಮ್ಮರಸನಮುಖವನ್ನು ದುರದುರ ನೋಡಿದಳು. ಕ್ರೋಧದಿಂದ ಕೆಂಪಾಗಿ,

" ನೀವು ಹಾಲಿನಲ್ಲಿ ವಿಷ ಬೆರತಿರುವುದನ್ನು ಈ ಕೂಡಲೇ ಸಿದ್ಧಪಡಿಸಿ ತೋರಿಸಿದರೆ ಸರಿ ! ಇಲ್ಲದೆ ಇದ್ದರೆ ನಿಮ್ಮನ್ನು ಸುಮ್ಮನೆ ಬಿಡುವುದಿಲ್ಲ ! " ಎಂದು ಬೆದರಿಸಿದಳು ಜಗನ್ಮೋಹಿನಿ ಚಂಡಿಯ ಅವತಾರವಾಗಿ,

" ಹಾಗೇ ಆಗಲಿ ತಾಯಿ ! " ಎಂದು ಹೇಳುತ್ತಾ, ಅಲ್ಲಿದ್ದ ಸೇವಕನನ್ನು ಕರೆದು ಒಂದು ಬೆಕ್ಕನ್ನು ಕೂಡಲೇ ಅಲ್ಲಿಗೆ ತೆಗೆದುಕೊಂಡುಬರಲು ಆಜ್ಞೆ ಮಾಡಿದನು. ಅದರಂತೆ ಬೆಕ್ಕನ್ನು ತರಲಾಯಿತು. ಒಂದುತಟ್ಟೆಯಲ್ಲಿ ಹಾಲಿಟ್ಟು ಅದಕ್ಕೆ ಕುಡಿಯಲು ಕೊಟ್ಟರು. ಆ ಹಾಲನ್ನು ಬೆಕ್ಕು ಸಂತೋಷದಿಂದಲೇ ಕುಡಿಯಿತು. ಒಂದೇಒಂದು ಕ್ಷಣ ! ಇನ್ನೊಂದು ಕ್ಷಣದಲ್ಲಿ ಅದು ನೋವಿನಿಂದ ನರಳುತ್ತಾ, ಕೆಲವೇ ನಿಮಿಷಗಳಲ್ಲಿ ಸತ್ತು ಬಿದ್ದಿತು. ಇದನ್ನು ನೋಡುತ್ತಿದ್ದ ಕೃಷ್ಣದೇವರಾಯ.

" ಎಲಾ ಚಂಡಾಲಿ ! ನನ್ನನ್ನು ವಿಷವಿಟ್ಟು ಕೊಲ್ಲಲು ಇಷ್ಟೆಲ್ಲಾ ಕಪಟನಾಟಕವಾಡಿದೆಯಾ ? ಎಲಾ ಘಾತಕಿ ! ನನ್ನನ್ನು ಕೊಲ್ಲಲು ಪಶ್ಚಾತಾಪದ ಸೋಗುಹಾಕಿದೆಯಾ ?.....

ಎಲಾ ಕೊಲೆಪಾತಕಿ ! ನನ್ನನ್ನ ಮೋಸದಿಂದ ಕೊಂದು ಆ ಮೂಲಕ ನಿನ್ನ ದುಷ್ಟಆಸೆಯನ್ನು ಸೇಡನ್ನು ತೀರಿಸಿಕೊಳ್ಳಲು ಆಶಿಸಿದೆಯಾ ? ಎಂದು ರಣಗರ್ಜನೆ ಮಾಡಿದನು ಕೋಪದಿಂದ ಹಲ್ಲನ್ನು ಕಡಿಯುತ್ತಾ. ತನ್ನ ಗುಟ್ಟುರಟ್ಟಾದಮೇಲೆ ಇನ್ನು ಅಲ್ಲಿ ಇದ್ದರೆ ಅಪಾಯವೆಂದು ಜಗನ್ಮೋಹಿನಿ ಅಲ್ಲಿಂದ ತಪ್ಪಿಸಿಕೊಳ್ಳಲು ನೋಡಿದಳು. ಅವಳು ಅಲ್ಲಿಂದ ಕಾಲ್ತೆಗೆಯುವು ದನ್ನು ನೋಡಿ ಕೃಷ್ಣದೇವರಾಯನು ಅವಳ ಮೇಲೆ ಹಾರಿ, ಅವಳಮುಂದಲೆ ಯನ್ನು ಹಿಡಿದುಕೊಂಡು ದರದರನೆ ಎಳೆದುಕೊಂಡು ಬಂದು ಅವಳ ಆಸನ ದಲ್ಲಿ ಅವಳನ್ನು ಬಲವಂತವಾಗಿ ಕುಳ್ಳಿರಿಸಿದನು. ಅನಂತರ ಬಟ್ಟಲಿನಲ್ಲಿದ್ದ ಹಾಲನ್ನು ಅವಳ ಕೈಗೆ ಕೊಟ್ಟು ಕುಡಿಯಲು ಆಜ್ಞಾಪಿಸಿದನು. ”

ನನ್ನನ್ನು ಹಾಲಿನಲ್ಲಿ ವಿಷ ಬೆರಸಿ ಕೊಲ್ಲಲೆತ್ನಿಸಿದೆಯಲ್ಲವೆ ? ಪಾಪಿ ! ಈಗ ಈ ಹಾಲನ್ನು ಕುಡಿ ! ನೀನು ಕ್ಷತ್ರಿಯರಮಣಿಯಾಗಿದ್ದರೆ ನಿನ್ನಲ್ಲಿ ಕ್ಷಾತ್ರತೇಜ ಉಳಿದಿದ್ದರೆ ನೀನು ಈ ಹಾಲನ್ನು ಕುಡಿದು ಸಾಯುತ್ತೀಯೆ. ನೀನು ಹೀನಕುಲದಲ್ಲಿ ಹುಟ್ಟಿದ್ದರೆ ಹೇಡಿಯಂತೆ ಅದನ್ನು ಚಲ್ಲಿ ಪ್ರಾಣ ಉಳಿಸಿಕೊಳ್ಳುತ್ತೀಯೆ !” ಎಂದು ಗುಡುಗಿದನು.

ಜಗನ್ಮೋಹಿನಿ ಆ ವಿಷ ಬೆರೆತ ಹಾಲಿನ ಬಟ್ಟಲನ್ನು ಸಂತೋಷ ದಿಂದಲೇ ಸ್ವೀಕರಿಸಿದಳು. ಕಡೆಗೂ ತಾನು ಬಯಸಿದ್ದ ವೀರಮರಣ ತನ್ನ ದಾಯಿತಲ್ಲಾ ಎನ್ನುವ ಸಂತೋಷದಲ್ಲಿ ಅವಳ ಮುಖ ಅರಳಿ, ಮುಗ್ಧ ಮಗುವಿನಂತೆ ಆ ಹಾಲನ್ನು ಕುಡಿಯಲು ಸಿದ್ಧಳಾಗಿ, ಆ ಬಟ್ಟಲನ್ನು ತುಟಿಯತನಕ ಒಯ್ದಳು. ಇನ್ನೊಂದುಕ್ಷಣ ತಡವಾಗಿದ್ದರೆ ಅವಳು ಹಾಲನ್ನು ಕುಡಿದು ಮುಗಿಸುತ್ತಿದ್ದಳು. ಅಷ್ಟರಲ್ಲಿ ತಿಮ್ಮರಸನಿಗೆ ಅದೇ ನೆನಿಸಿತೋ ಅವನು ಓಡಿಬಂದು ಅವಳ ಕೈಯ್ಯಿಂದ ಆ ಹಾಲಿನ ಬಟ್ಟಲನ್ನು ಕಿತ್ತುಕೊಂಡು, ಹಾಲನ್ನು ನೆಲದಮೇಲೆ ಚಲ್ಲಿ ಕೃಷ್ಣದೇವರಾಯನ ಮುಂದೆ ಮಂಡಿಯೂರಿ ಪ್ರಾರ್ಥಿಸಿದ.

“ಪ್ರಭು ! ನನ್ನ ಅಪರಾಧವನ್ನು ಕ್ಷಮಿಸಬೇಕು. ಸ್ತ್ರೀಹತ್ಯ ಪಾಪ ಗಳಲ್ಲೆಲ್ಲಾ ಮಹಾ ಪಾಪ! ಇದನ್ನು ಪ್ರಾಜ್ಞರಾದ ತಾವು ಬಲ್ಲಿರಿ ! ಇದನ್ನು ಮಾಡಿದವನಿಗೆ ನರಕದಿಂದ ಮುಕ್ತಿಯಿಲ್ಲ........! ದುಡುಕ ಬಾರದು ಪ್ರಭು ! ದುಡುಕಬಾರದು ! ತಾವು ಕ್ರೋಧದ ಕೈಗೆ ಬುದ್ಧಿ

ಕೊಟ್ಟು ಅನುಚಿತಕಾರ್ಯಕ್ಕೆ, ತಮ್ಮ ಸತ್ಕೀರ್ತಿಗೆ ಕಳಂಕ ತರುವ ಕಾರ್ಯಕ್ಕೆ ಕೈ ಹಾಕಬಾರದು. ಅವರು ನಿಮಗೆ ದ್ರೋಹ ಬಗೆದರೂ ನೀವು ಅವರಿಗೆ ದ್ರೋಹ ಬಗೆಯಬಾರದು. ಹೆಣ್ಣಿನಮೇಲೆ ಸೇಡು ತೀರಿಸಿಕೊಳ್ಳಬಾರದು ಪ್ರಭು! ಇದು ತಮ್ಮ ಘನತೆಗೆ ತಕ್ಕುದಲ್ಲ. ಇದು ತಮಗೆ ಕೀರ್ತಿ ತರುವ ಕೆಲಸವಲ್ಲ. ನೀವು ಮಹಾನುಭಾವರು, ದೇವತಾತ್ಮರು. ಮಹಾರಾಣಿಯ ಅನಂತ ತಪ್ಪುಗಳನ್ನು ಮನ್ನಿಸಿ ಅವರನ್ನು ಕಾಪಾಡಬೇಕಾದ್ದು ನಿಮ್ಮ ಧರ್ಮ. ಆಕೆಯನ್ನು ನೀವು ಶಿಕ್ಷಿಸಲು ಹೋಗಬಾರದು! ತನಗಾಗಿರುವ ಪರಾಭವ, ತೇಜೋವಧೆಯೇ ಸಾಕು. ಆಮರಣಾಂತ ಅವರನ್ನು ದಹಿಸಲು! ಇದಕ್ಕೂ ಮಿಗಿಲಾದ ಶಿಕ್ಷೆ ಬೇಕೆ ಪ್ರಭು! ದಯವಿಟ್ಟು ಅವರನ್ನು ಕ್ಷಮಿಸಿ! ಅವರನ್ನು ಹಿಂಸಿಸಬೇಡಿ!”

—ಎಂದು ಜಗನ್ಮೋಹಿನಿಗಾಗಿ ಅಂಗಲಾಚಿ ಬೇಡಿಕೊಂಡನು.

ಅಂತಹ ದುರ್ಭರ ಸನ್ನಿವೇಶದಲ್ಲೂ ತಿಮ್ಮರಸನ ಮಾತನ್ನು ಕೃಷ್ಣ ದೇವರಾಯನು ಸಮಾಧಾನಚಿತ್ತದಿಂದ ಕೇಳಿಕೊಂಡನು. ತಿಮ್ಮರಸನ ಮಾತು ಮನಕ್ಕೆ ಮುಟ್ಟಿತೇನೋ ಕೃಷ್ಣದೇವರಾಯನು ಜಗನ್ಮೋಹಿನಿಯ ಮುಡಿಯನ್ನು ಬಿಟ್ಟು ದೂರ ಸರಿದುನಿಂತು ಹೇಳಿದನು.

“ಅಪ್ಪಾಜಿಯವರ ಮಾತಿಗೆ ಬೆಲೆಕೊಟ್ಟು ನಿನಗೆ ಈಬಾರಿ ಪ್ರಾಣ ದಾನ ಮಾಡಿದ್ದೇನೆ. ನನ್ನಮೇಲೆ ವೃಥಾಕಾರಣದಿಂದ ದ್ವೇಷ ಸಾಧಿಸಿ, ಎರಡುಬಾರಿ ಮೋಸದಿಂದ ಕೊಲ್ಲಲು ಎತ್ನಿಸಿದ ನೀನು ಹೆಣ್ಣಲ್ಲ—ರಕ್ಕಸಿ! ನೀನು ಹೆಣ್ಣುವೇಷದ ವ್ಯಾಘ್ರ. ನಿನ್ನಂಥ ಕುಲಟೆ ಜಗತ್ತಿನಲ್ಲಿ ಹೆಚ್ಚು ಕಾಲ ಬದುಕಿರಬಾರದು. ನಿನ್ನ ಈ ದುಷ್ಕೃತ್ಯಗಳಿಗಾಗಿ ನಿನ್ನನ್ನು ಎಂದೋ ಯಮಸದನಕ್ಕೆ ಅಟ್ಟಬೇಕಾಗಿತ್ತು. ಆದರೆ, ನೀನು ನಮಗೆ ಮಿತ್ರರಾದ ಪ್ರತಾಪರುದ್ರಗಜಪತಿಯ ಮಗಳು—ಗಜಪತಿನಂದಿನಿ! ನಿನ್ನಿಂದ ಎರಡು ಮನೆತನಗಳಿಗೂ ಅಪಖ್ಯಾತಿ ತಟ್ಟುವುದೆಂದು ನಿನ್ನನ್ನು ಕೊಲ್ಲದೆ ಕ್ಷಮಿಸಿ ದ್ದೇನೆ. ಇನ್ನುಮೇಲೆ ನೀನು ನನ್ನ ಭಾಗಕ್ಕೆ ಇದ್ದೂ ಇಲ್ಲದಂತೆ! ನಾನು ಬದುಕಿರುವತನಕ ನಿನ್ನ ಮುಖವನ್ನು ನನಗೆ ತೋರಿಸಬೇಡ. ಇಲ್ಲಿಂದ ತೊಲಗು!” ಎಂದು ಹೇಳಿ ಅಲ್ಲಿ ನಿಲ್ಲಲಾರದೆ, ವಾಯುವೇಗದಲ್ಲಿ ಅಲ್ಲಿಂದ ಹೊರಟುಹೋದನು.

ತಿಮ್ಮರಸನು ಒಮ್ಮೆ ಜಗನ್ಮೋಹಿನಿಯನ್ನು ಕರುಣಾಜನಕದೃಷ್ಟಿಯಲ್ಲಿ ನೋಡಿ ಕೃಷ್ಣದೇವರಾಯನನ್ನು ಹಿಂಬಾಲಿಸಿ ನಡೆದನು.

ಅವರು ಅಲ್ಲಿಂದ ನಿರ್ಗಮಿಸುವುದನ್ನೇ ಜಗನ್ಮೋಹಿನಿ ತನ್ನ ಜೀವರಹಿತ ಕಣ್ಣುಗಳಿಂದ ನೋಡಿದಳು. ಕಣ್ಣುಗಳು ದಣಿದು ಮಂಜಾಗುವ ತನಕ ನೋಡುತ್ತಿದ್ದಳು. ಅನಂತರ ಅವಳ ಕಣ್ಣಿಗೆ ಕಂಡುದು ಶೂನ್ಯ—ಬರಿ ಶೂನ್ಯ !

ಕೃಷ್ಣದೇವರಾಯನು ಅಂದು ಅಲ್ಲಿಂದ ಹೊರಟುಹೋದವನು ಎಂದೆಂದಿಗೂ ಅವಳಿಂದ ದೂರವಾಗಿ ಹೊರಟುಹೋಗಿದ್ದನು.

"ನಾನು ಬದುಕಿರುವತನಕ ನಿನ್ನ ಮುಖವನ್ನು ನನಗೆ ತೋರಿಸಬೇಡ" ಎಂದು ಹೇಳಿಹೋಗಿದ್ದ ಕೃಷ್ಣದೇವರಾಯನು ಜಗನ್ಮೋಹಿನಿಯನ್ನು ಕಂಡುದು ಅದೇ ಕೊನೆ! ಅವನು ಬದುಕಿರುವತನಕ ಜಗನ್ಮೋಹಿನಿಯ ಮುಖದರ್ಶನ ಮಾಡಲಿಲ್ಲ.

೨೫

ಇದಾದ ಎಷ್ಟೋ ವರ್ಷಗಳತನಕ ಜಗನ್ಮೋಹಿನಿಯು ಬದುಕಿದ್ದ ಳೆಂದು ಇತಿಹಾಸದಿಂದ ನಮಗೆ ತಿಳಿಯುತ್ತದೆ. ಅವಳು ಬದುಕಿದ್ದಷ್ಟು ಕಾಲವೂ ಕೃಷ್ಣದೇವರಾಯನ ಪರಿತ್ಯಕ್ತರಾಣಿಯಾಗಿ, ಕುಂಭಂ ಗ್ರಾಮದಲ್ಲಿ ಅಜ್ಞಾತವಾಸದಲ್ಲಿದ್ದಳೆಂದು ತುಕ್ಕಪಂಚಕಂ ಎನ್ನುವ ಶ್ಲೋಕಪಂಚಕದಿಂದ ನಮಗೆ ತಿಳಿಯುತ್ತದೆ. ಅವಳು ಬದುಕಿದ್ದಷ್ಟು ಕಾಲವೂ ಜೀವನದಲ್ಲಿ ತಾನು ಅಸುಖಿಯಾಗಿದ್ದರೂ ಜನಹಿತಕಾರ್ಯದಲ್ಲಿ ತೊಡಗಿದ್ದಳು— ಶ್ರೀಗಂಧದಮರ ತಾನು ಉರಿದರೂ ಸುತ್ತಲೂ ಸುಗಂಧವನ್ನು ಹರಡುವಂತೆ ಬೇಸಿಗೆಯಲ್ಲಿ ಕುಂಭಂಗ್ರಾಮದ ನಿವಾಸಿಗಳು ನೀರಿಗಾಗಿ ಪಡುವ ತೊಂದರೆ ಯನ್ನು ನೋಡಲಾರದೆ ಅವಳು ಕುಂಭಂಗ್ರಾಮದ ಬಳಿ ಹರಿಯುತ್ತಿದ್ದ ನದಿಗೆ ಅಣೆಕಟ್ಟು ಹಾಕಿಸಿ, ತನ್ನ ಹೆಸರಿನಲ್ಲಿ ದೊಡ್ಡದೊಂದು ಜಲಾಶಯ ವನ್ನು ನಿರ್ಮಿಸಿದಳು.

ಇಂದು ಕುಂಭಂಗ್ರಾಮದಲ್ಲಿ ಜಗನ್ಮೋಹಿನಿ ಇದ್ದುದರ ಕುರುಹಾಗಿ ಯಾವ ಅವಶೇಷಗಳು ಇಲ್ಲದಿದ್ದರೂ ಅವಳು ಕಟ್ಟಿಸಿಕೊಟ್ಟ ಬೃಹದ್ ಕೆರೆ ಮಾತ್ರ ಈಗಲೂ ಇದೆ. ಅದು ವರ್ಷದ ಎಲ್ಲಾ ಕಾಲದಲ್ಲೂ ನೀರಿ ನಿಂದ ತುಂಬಿರುತ್ತದೆ. ಅದರ ನೀರಿನ ಅಲೆಗಳು ಇಂದಿಗೂ ಜಗನ್ಮೋ ಹಿನಿಯ ಕರುಣ ಜೀವಂತ ಸತ್ಯ ಕಥೆಯನ್ನು ಹೇಳಿಕೊಂಡು ನಿತ್ಯವೂ ಮೊರೆ ಇಡುವುದನ್ನು ಎಲ್ಲರೂ ಕೇಳಬಹುದು.

— ಮುಗಿದುದು —

# ಜಗನ್ಮೋಹಿನಿ

---

ವಿಜಯನಗರದ ವಿಖ್ಯಾತ ಅರಸು ಕೃಷ್ಣದೇವರಾಯ, ಉತ್ಕಲದ ದಿಗ್ವಿಜಯವನ್ನು ಸಾಧಿಸಿ, ಭುವನೈಕಸುಂದರಿಯೆಂತಿದ್ದ ಜಗನ್ಮೋಹಿನಿಯನ್ನು ಮೋಹಿಸಿ, ವಿಜಯ ವಧುವಾಗಿ ವರಿಸಿದ.

ತಾನೂ ಬಯಸಿ, ಒಲಿದು ವರಿಸಿದಳು ಉತ್ಕಲ ಕುಮಾರಿ! ಸಾವಿರಾರು ಸುಂದರ ಹೆಣ್ಣುಗಳನ್ನು ಕಣ್ಣಿನಿಂದಲೂ ಒಮ್ಮೆ ನೋಡದಿದ್ದ ಸಾಮ್ರಾಟನನ್ನು ಕೈಹಿಡಿದು, ತಮ್ಮ ಪ್ರಥಮ ಸಮಾಗಮದ ದಿನದಂದೇ ಭಯಂಕರವಾಗಿ ವರ್ತಿಸಿ, ಗಂಡುಗಲಿಯಾದ ಗಂಡನನ್ನೇ ಕೊಲ್ಲಲೆತ್ನಿಸಿದ ರುದ್ರಭಯಂಕರ ಸನ್ನಿವೇಶವನ್ನೊಳಗೊಂಡ ರೋಮಾಂಚಕಾರಕ ಚಾರಿತ್ರಿಕ ಕೃತಿ "ಜಗನ್ಮೋಹಿನಿ."

ಇಂತಹ ಕೃತಿಗೆ ಆಕೃತಿ ಕೊಟ್ಟಿರುವ ಲೇಖಕರಾದ ಶ್ರೀನಿವಾಸರಾವ್ ಕೊರಟಿರವರು ಇನ್ನೂ ವಿದ್ಯಾರ್ಥಿದೆಸೆಯಲ್ಲಿದ್ದರೂ ತಮ್ಮ 'ಮಿಸ್ ಲೀಲಾವತಿ,' 'ತೂರಿಬಂದ ತಾರೆ,' 'ಕಣ್ಣೀರಿನ ಕಡಲು' ಮುಂತಾದ ಕೃತಿಗಳಿಂದ ಕನ್ನಡ ಜನತೆಯ ಮನಸ್ಸನ್ನು ಸೆಳೆದಿದ್ದಾರೆ.

ಸರಳಶೈಲಿ, ಉತ್ತಮ ಸಂಭಾಷಣೆ, ಮನಮುಟ್ಟುವ ಸನ್ನಿವೇಶ ಚಿತ್ರಣ ಈ ಕಾದಂಬರಿಗೆ ಮೆರಗು ಕೊಟ್ಟಿದೆ ಎಂತಲೇ, ಈ ಕೃತಿ ಸರ್ವರ ಮನವನ್ನೂ ಸೂರೆಗೊಳ್ಳುವುದರಲ್ಲಿ ಸಂದೇಹವಿಲ್ಲ. ಇವೆಲ್ಲದರ ರಸಾಯನ "**ಜಗನ್ಮೋಹಿನಿ.**"